# ಹೊಸತು

## ಒಳಗೇನಿದೆ.....




*ಚಿತ್ರಗಳು : ಶ್ರೀಹರಿ, ಹರಿಣಿ, ಅಂಕಿತ್, ದಿಲೀಪ್*
*ಜಿ. ಎಂ. ಬೊಮ್ನಳ್ಳಿ, ನಹುಷ ಕೆ.*

*ಮುಖಪುಟ : ಕೊಕ್ಕರೆ ಬೆಳ್ಳೂರು (ವರ್ಣಪಾರದರ್ಶಿಕೆ : ಕೆ. ಪಿ. ಸ್ವಾಮಿ)*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ಇ**ದು ಆನೇಕಲ್ಲಿನ ಪುರಸಭಾಧ್ಯಕ್ಷೆಯಾಗಿದ್ದ ಶ್ರೀಮತಿ ಮಂಜುಳ ಆದಿಕೇಶವ ೫-೧೧-೦೩ರಂದು ಬರೆದಿಟ್ಟಿದ್ದ ಮರಣ ಪತ್ರದ ಒಂದು ಭಾಗ. ಅಶ್ಲೀಲವಾದ ಬೈಗುಳನ್ನು ತಮ್ಮದೇ ಭಾರತೀಯ ಜನತಾ ಪಕ್ಷದ ಸಹ ಸದಸ್ಯರಿಂದ ಕೇಳಿ ಮನಸೋತು ಆಕೆ ಆತ್ಮಹತ್ಯೆ ಮಾಡಿಕೊಂಡದ್ದು ಹಳೆಯ ಸಮಾಚಾರ. ಒಬ್ಬ ಮಹಿಳೆ ಅಧಿಕಾರದ ಸ್ಥಾನಕ್ಕೆ ಬರುವುದನ್ನು ಸರ್ವಥಾ ಸಹಿಸದಷ್ಟು ಕೊಳೆತ ಮನಸ್ಸುಗಳು ಕೇಂದ್ರ ಸರ್ಕಾರವನ್ನು ರಚಿಸಿರುವ ಭಾಜಪದಲ್ಲಿವೆಯೆಂದರೆ ನಾಚಿಕೆಯಾಗಬೇಕು. ಹೀನ ಸಂಸ್ಕೃತಿಯ ಮಾದರಿ ಇದಕ್ಕಿಂತಲೂ ಕೆಳಮಟ್ಟದ್ದಾಗಲು ಸಾಧ್ಯವಿಲ್ಲ. ಮಹಿಳೆ ರಾಜಕೀಯದಲ್ಲಿ ಔನ್ನತ್ಯ ಸಾಧಿಸಿದಾಗ ಆಕೆ ಭ್ರಷ್ಟತನದಿಂದ ದೂರವಿರಬಾರದೆಂಬ ಸಂದೇಶವನ್ನು ಮಂಜುಳಾ ಅವರನ್ನು ಸಾವಿಗೆ ನೂಕಿದ ದುರ್ಜನರು ನಮ್ಮ ರಾಜ್ಯಕ್ಕೆ ಕೊಟ್ಟಿದ್ದಾರೆ. ಏಕೆಂದರೆ ಮಂಜುಳಾ ಅವರ ಒಂದೇ 'ಅಪರಾಧ' ತಮ್ಮ ಪಕ್ಷದ ಸಹ-ಸದಸ್ಯರು ನುಂಗಣ್ಣಗಳಾಗುವುದಕ್ಕೆ ತಡೆ ಒಡ್ಡಿದ್ದು. ಅದಕ್ಕೇ ಅವರಿಗೆ ಕಿರುಕುಳ, ಅವಾಚ್ಯ ಬೈಗುಳ ಮತ್ತು ಮಾನಸಿಕ ಹಿಂಸೆ. ಹೀಗೆ ಮಾಡಿದವರಿಗೆ ''ಶಿಕ್ಷೆ ಸಾಮಾನ್ಯವಾಗಿರಬಾರದು'' ಹಾಗೂ ''ಇವರು ಬದುಕಿರುವವರೆಗೂ ಆ ಶಿಕ್ಷೆಯನ್ನು ಮರೆಯಬಾರದು ಮತ್ತು ಯಾವ ಹೆಣ್ಣಿಗೂ ಈ ರೀತಿ ಅವಮಾನ ಮಾಡಬಾರದು'' ಎಂದು ಮರಣಪತ್ರದಲ್ಲಿ ಮಂಜುಳಾ ಬರೆದಿದ್ದಾರೆ. ಮಾತೆಯರನ್ನು ಆರಾಧಿಸುವುದು ತಮ್ಮ ವೈಶಿಷ್ಟ್ಯವೆಂದು ಹೇಳಿಕೊಳ್ಳುವ ವಾಜಪೇಯಿ ಪಕ್ಷ ಮಂಜುಳಾ ಅವರಿಗೆ ಹಗ್ಗದ ಕುಣಿಕೆಯ ಪೂಜೆ ಸಲ್ಲಿಸಿದೆ. ಮಹಿಳಾ ಮೀಸಲಾತಿಗೆ ಬಾಯುಪಚಾರ ಹೇಳುವ ಪಕ್ಷದ ಧುರೀಣರ ನಡತೆ ಎಷ್ಟು ಪ್ರಶ್ನಾರ್ಹವೆಂಬುದು ಮಂಜುಳಾ ಅವರ ಪತ್ರದಿಂದ ಖಚಿತವಾಗಿದೆ.

ಪತ್ರದಲ್ಲಿ ಆನೇಕಲ್ಲಿನ ಭಾಜಪ ಶಾಸಕ ಎ. ನಾರಾಯಣಸ್ವಾಮಿಯವರು ಸೇರಿದಂತೆ ಒಟ್ಟು ಆರು ಭಾಜಪ ನಾಯಕರನ್ನು ಮಂಜುಳಾ ಹೆಸರಿಸಿದ್ದಾರೆ. ಈ ಪ್ರಕರಣವು ಹತ್ಯೆ - ಆತ್ಮಹತ್ಯೆಯ ಪ್ರಶ್ನೆಯಷ್ಟೇ ಅಲ್ಲ . ಮಹಿಳೆ ರಾಜಕೀಯ ಅಧಿಕಾರವನ್ನು ಪಡೆದು ನಿಭಾಯಿಸಬೇಕೋ ಬೇಡವೋ ಎಂಬುದು ಕೂಡ ಮುಖ್ಯ ಪ್ರಶ್ನೆ. ವೀರಪ್ಪನನ್ನು ಹಿಡಿಯಲು ಆಗದಿದ್ದರೆ ಹೋಗಲಿ, ಶಾಸಕ ನಾರಾಯಣಸ್ವಾಮಿಯಂಥವರೂ ನಮ್ಮ ಪೊಲೀಸರಿಗೆ ಸಿಗುವುದಿಲ್ಲ! ಅಷ್ಟು ಶಿಸ್ತು, ಚಮತ್ಕಾರ ನಮ್ಮ ಸರ್ಕಾರದ ಗೃಹ ಖಾತೆಯದು. ಜನಾಂದೋಳನ ನಡೆಸುವವರನ್ನು ನಕ್ಸಲೈಟರೆಂದು ಕರೆಯುವ ಖರ್ಗೆ ಮಹಾಶಯರಿಗೆ ನಾರಾಯಣಸ್ವಾಮಿಯವರ ಬಗ್ಗೆ ವ್ಯಾಮೋಹವೇನಾದರೂ ಇದೆಯೇ ಎಂಬ ಶಂಕೆ ಮೂಡುತ್ತಿದೆ. ಮಂಜುಳಾ ಅವರು ಹೆಸರಿಸಿರುವವರನ್ನು ದಸ್ತಗಿರಿ ಮಾಡಿ ತನಿಖೆ ನಡೆಸಬೇಕಾದ್ದು ಕನಿಷ್ಠ ಮಟ್ಟದ ಕರ್ತವ್ಯ. ಅದನ್ನೂ ಮಾಡದ ಸರ್ಕಾರ ತೀರಾ ಅಧಃಪತನಗೊಂಡ ಸರ್ಕಾರವೆಂದು ಹೇಳಬೇಕಾದ್ದು ಅನಿವಾರ್ಯ. ಇಂತಹ ಸರ್ಕಾರ ಬಜರಂಗದಳವು ಬಾಬಾಬುಡನ್‌ಗಿರಿಯಲ್ಲಿ ನಡೆಸಲು ಉದ್ದೇಶಿಸಿರುವ ಹಲ್ಲೆಯನ್ನು ಅಥವಾ ಹಳ್ಳಿಗಳಲ್ಲಿ ದಲಿತರ ಮೇಲೆ ನಡೆಯುವ ದೌರ್ಜನ್ಯಗಳನ್ನು ತಡೆಯುತ್ತದೆಂದು ನಿರೀಕ್ಷಿಸಲು ಸಾಧ್ಯವೆ? ಶಾಸನಸಭೆಯ ಸಭಾಪತಿಯವರು ಶಾಸಕರೊಬ್ಬರ ದಸ್ತಗಿರಿಯನ್ನು ಆಕ್ಷೇಪಿಸುವಂತಿಲ್ಲ; ದಸ್ತಗಿರಿಯ ಮಾಹಿತಿ ಅವರಿಗೆ ಕೊಡಬೇಕೆಂಬುದಷ್ಟೇ ನಿಯಮ. ರಾಜ್ಯದ ಮಹಿಳಾ ಆಯೋಗದ ಅಧ್ಯಕ್ಷೆ ಈ ವೇಳೆಗೆ ಕ್ರಿಯಾಶೀಲವಾಗಬೇಕಿತ್ತು, ಆದರೆ ಆಕೆಯ ಹಿನ್ನೆಲೆ ಮತ್ತು ಸಾಮರ್ಥ್ಯ ಸಮಾಧಾನ ತರುವುದಿಲ್ಲ. ಭಾಜಪದ ಅಧ್ಯಕ್ಷ ಅನಂತಕುಮಾರರು ತಮ್ಮ ಪಕ್ಷದಲ್ಲಿ ಎಂತೆಂತಹ ವ್ಯಕ್ತಿತ್ವದವರಿದ್ದಾರೆಂದು ಆತ್ಮಾವಲೋಕನ ಮಾಡಿಕೊಳ್ಳಬೇಕು, ಆದರೆ ದೆಹಲಿಯ ಅರಸರ ಸಮರ್ಥನೆ ಮಾಡುವ ತವಕದಲ್ಲಿ ಒಬ್ಬ ಭಾಜಪ ಮಹಿಳೆ ಅವರಿಗೆ ತೃಣಸಮಾನ. ಆನೇಕಲ್ಲಿನ ಶಾಸಕರು ಸೆಪ್ಟೆಂಬರ್ ೫ರಂದು ಪುರಸಭಾ ಸಮಿತಿಯ ಸಭೆಯಲ್ಲಿದ್ದರೋ ಇಲ್ಲವೋ ಎಂಬುದು ಅಪ್ರಸ್ತುತ. ದಸ್ತಗಿರಿ ಮತ್ತು ವಿಚಾರಣೆ ಮುಖ್ಯ. ನ್ಯಾಯಾಲಯವು ಈ ಪ್ರಸಂಗವನ್ನು ತನ್ನ ಸ್ವತಂತ್ರ ಪರಿಧಿಯಲ್ಲಿ ಕೈಗೆತ್ತಿಕೊಂಡು ಕ್ರಮ ಜರುಗಿಸಲು ಸಾಧ್ಯವಿದೆ. ಮಂಜುಳಾ ಅವರ ಆತ್ಮಹತ್ಯೆ ಅವರ ಗಮನಕ್ಕೆ ಬಂದಿದೆಯೆಂದು ಬಗೆಯುವುದು ತಪ್ಪಲ್ಲ. ಅಯೋಧ್ಯೆಯಲ್ಲಿ ಮಸೀದಿ ಉರುಳಿಸಿದರೆ ಅದಕ್ಕೆ ಅದ್ವಾನಿ ಮುಂತಾದವರು ಬಾಧ್ಯರಲ್ಲವೆಂದು ಮುಲಾಯಂ ಸಿಂಗ್ ಸರ್ಕಾರದ ವಕೀಲರು ಸಹ ಹೇಳುವಂತಹ ನಮ್ಮ ಭವ್ಯ ಭಾರತದ ಕಣ್ಣೀರಿನ ಕತೆ ಮಂಜುಳಾ ಅವರೊಂದಿಗೆ ಕೊನೆಯಾಗುವುದಿಲ್ಲವೆಂಬುದೇ ನಮ್ಮ ಮುಂದುವರಿದ ವ್ಯಥೆ. ಇಲ್ಲೆಲ್ಲಾ ಸಾರ್ವಜನಿಕರು ಮಧ್ಯಪ್ರವೇಶ ಮಾಡುವುದು ಅನಿವಾರ್ಯವಾಗುತ್ತಿದೆ; ಮಂಜುಳಾ ಪ್ರಕರಣದಲ್ಲಿ ಅವರು ನಿಷ್ಕ್ರಿಯರಾಗಿ ಉಳಿದಿಲ್ಲ. ಅಪರಾಧಿಗಳು ಅನಿರ್ದಿಷ್ಟ ಕಾಲ ಬಂಧನದಿಂದ ಉಳಿದಾರೇನು ?

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



ಸಂಪುಟ-೫ ಸಂಚಿಕೆ - ೫ ಡಿಸೆಂಬರ್ ೨೦೦೩

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩.೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**

# ಸಿಕ್ಕುಗಳ ಸುಳಿಯಲ್ಲಿ ಸ್ವಾತಂತ್ರ್ಯ

**ಸಂಪಾದಕೀಯ**

**'ಹೊ**ಸತು' ಪತ್ರಿಕೆಯ ಆರಂಭದ ದಿನಗಳಲ್ಲಿ ಕೆಲವು ತಿಳಿಗೇಡಿಗಳು ಬೆದರಿಕೆ ಪತ್ರಗಳನ್ನು ಬರೆದು ಅವಹೇಳನಕರ ಮಾತುಗಳನ್ನು ಬಳಸುತ್ತಿದ್ದುದುಂಟು. ಸುಳ್ಳು ವಿಳಾಸ ನೀಡುವುದು ಅಥವಾ ವಿಳಾಸವನ್ನೇ ನೀಡದಿರುತ್ತಿದ್ದುದು ಅವರ ನೈತಿಕ ನಿಷ್ಠೆಗೆ ನಿದರ್ಶನವಾಗಿತ್ತು. ಈಗಲೂ ಅಂತಹ ಪತ್ರಗಳು ಬರುವುದುಂಟು, ಆದರೆ ಕಡಿಮೆ. ಈ ಪತ್ರಗಳನ್ನು ಬರೆಯುವ 'ಧೀರರು' ಯಾವ ಗುಂಪಿಗೆ ಸೇರಿದವರು, ಅವರ ರಾಜಕೀಯ ಒಲುವುಗಳೇನು ಮತ್ತು ಅವರ ಮತಧಾರ್ಮಿಕ ಜಡ್ಡುತನ ಯಾವ ಮಟ್ಟದ್ದು ಎಂಬುದರ ಬಗ್ಗೆ ವ್ಯಾಖ್ಯಾನ ಅನಗತ್ಯ. ಒಂದಂತೂ ನಿಜ : ಚರ್ಚೆ ಮತ್ತು ತಿಳಿವಳಿಕೆಗಿಂತಲೂ ಮಂದಬುದ್ಧಿ ಮತ್ತು ಗೂಂಡಾಗಿರಿ ಅವರಿಗೆ ಹೆಚ್ಚು ಪ್ರಿಯವಾದವು. ರಾಯಪುರದಲ್ಲಿ 'ಇಂಡಿಯನ್ ಎಕ್ಸ್‌ಪ್ರೆಸ್' ವರದಿಗಾರರ ಮನೆಯ ಮೇಲೆ ಬಜರಂಗ ದಳ – ಭಾರತೀಯ ಜನತಾ ಪಕ್ಷದ ಸೇನೆ ಇತ್ತೀಚೆಗೆ ಧಾಳಿ ನಡೆಸಿದ್ದು ವರದಿಯಾಗಿದೆ. ಛತ್ತೀಸ್‌ಗಢದ ಭಾವಿ ಮುಖ್ಯಮಂತ್ರಿಯೆಂದು ಭಾಜಪ ಹೆಸರಿಸಿರುವ ಕೇಂದ್ರ ಮಂತ್ರಿ ಜುದೇವ್ ಕೋಟಿಗಟ್ಟಲೆ ಲಂಚ ಪಡೆದನೆಂದು ವರದಿ ಮಾಡಿದ್ದಕ್ಕೆ ಪ್ರತಿಕ್ರಿಯೆ ಇದು. ಆ ಮಂತ್ರಿ ಹೀನಾಯ ಪಾತಕ ಎಸಗಿದನೆಂದು ಆತನ ಪಕ್ಷಕ್ಕೆ ನಾಚಿಕೆ - ಕೋಪಗಳಿಲ್ಲ; ಅದನ್ನು ವರದಿ ಮಾಡಿದವರ ಮೇಲೆ ಕೆಂಡ ಕಾರುತ್ತದೆ! ಇದು ಬಜರಂಗ ದಳಕ್ಕೆ ದೊರೆತಿರುವ ತರಬೇತಿಯ ಸ್ವರೂಪ. ಅದು ಮೈಸೂರಿನಲ್ಲಿ 'ಆಂದೋಲನ' ಪತ್ರಿಕೆಯ ಸಂಪಾದಕರ ಮನೆಯ ಮೇಲೆ ನಡೆಸಿದ ಹಲ್ಲೆಯಲ್ಲಿ ಇನ್ನೂ ಚೆನ್ನಾಗಿ ಸ್ಪಷ್ಟವಾಯಿತು. ಆ ಪತ್ರಿಕೆಯೂ ಒಂದು ಹಗರಣವನ್ನು ಬಹಿರಂಗಗೊಳಿಸಿತ್ತು. ಮಾಡುವುದು ಸಣ್ಣತನದ ಕೆಲಸ, ಆಮೇಲೆ ಎಲ್ಲಿಲ್ಲದ ಬಿಗುಮಾನ, ಎನ್ನುವಂತಾಗಿದೆ ನಮ್ಮ 'ಸಂಸ್ಕೃತಿ ರಕ್ಷಕರ' ಖಂಡನಾರ್ಹ ಧೋರಣೆ ಮತ್ತು ಕಾರ್ಯಾಚರಣೆ.

'ದಿ ಹಿಂದು' ಪತ್ರಿಕೆಯ ಮೇಲೆ ಹರಿಹಾಯ್ದ ತಮಿಳುನಾಡು ಸರ್ಕಾರದ ನಡತೆ ಇದಕ್ಕಿಂತ ಭಿನ್ನವಾದುದಲ್ಲ. ಬೆಂಗಳೂರಿಗೆ ಬಂದು 'ದಿ ಹಿಂದು' ಸಂಪಾದಕರನ್ನು ರಸ್ತೆಯಲ್ಲಿ ತಡೆಹಿಡಿದು ದಂಡಿಸುವ ಮಟ್ಟಕ್ಕೆ ಇಳಿದ ತಮಿಳುನಾಡು ಪೊಲೀಸರು ಕಟ್ಟಾ ದರೋಡೆಕಾರರಂತೆ ವರ್ತಿಸಿದ್ದು ಜಯಲಲಿತಾಗೆ ಕೀರ್ತಿ ತರುವ ಪ್ರಸಂಗವಲ್ಲ. ಇಡೀ ರಾಷ್ಟ್ರದಲ್ಲಿ ಎಲ್ಲೂ ಆ ಪತ್ರಿಕೆಯ ಮೇಲೆ ನಡೆಸಲಾದ ಕ್ರಿಯೆಗೆ ಬೆಂಬಲ ದೊರೆಯಲಿಲ್ಲ. ಏಳು ತಿಂಗಳ ಹಿಂದೆ ಶಾಸನಸಭೆಯ ಅಂದಿನ ಕಾರ್ಯಕಲಾಪಗಳನ್ನು ಕುರಿತ ವರದಿ ಮತ್ತು ಆ ಬಗ್ಗೆ ಬರೆಯಲಾಗಿದ್ದ ಸಂಪಾದಕೀಯವು ತನ್ನ ಘನತೆಗೆ ಮಸಿ ಬಳಿಯುವಂಥದೆಂದು ಸಭೆಯ ಒಂದು ಸಮಿತಿ ಅಭಿಪ್ರಾಯಪಟ್ಟಿದೆ. ಶಾಸನಸಭೆಯು ತನ್ನ ಹಕ್ಕು ಚ್ಯುತಿಯಾಯಿತೆಂದು ಅಬ್ಬರ ನಡೆಸಿದ್ದು ಯಾರಿಗೂ ರುಚಿಸಲಿಲ್ಲ. ಸರ್ವೋಚ್ಚ ನ್ಯಾಯಾಲಯದ ಮಧ್ಯಪ್ರವೇಶ ಅಗತ್ಯವಾಗುವಂತೆ ಮಾಡಿದ ಸರ್ಕಾರಕ್ಕೆ ಇನ್ನೆಷ್ಟು ಛೀಮಾರಿ ಬೇಕು! ತನ್ನ ಪರಿಧಿಯನ್ನು ಮೀರಿದ ಅಧಿಕಾರವನ್ನು ಚಲಾಯಿಸಲು ಪ್ರಜಾಪ್ರಭುತ್ವದಲ್ಲಿ ಯಾವ ಅಂಗಸಂಸ್ಥೆಗೂ ಅವಕಾಶವಿರಬಾರದೆಂಬುದು ಇದರಿಂದ ಮನದಟ್ಟಾಗುತ್ತದೆ. ಶಾಸನಸಭೆಗೆ ಅನ್ವಯವಾಗುವಂತೆ ಅದು ನ್ಯಾಯಾಲಯ ಹಾಗೂ ಪತ್ರಿಕಾ ಪ್ರಪಂಚಕ್ಕೂ ಅನ್ವಯವಾಗುತ್ತದೆ. ಶಾಸನಸಭೆಯ ಹದ್ದುಮೀರಿದ ವರ್ತನೆಯನ್ನು ಖಂಡಿಸಲು ಜನ ಬೀದಿಗಿಳಿಯಬಹುದು, ಪ್ರತಿಭಟಿಸಬಹುದು, ಹೇಳಿಕೆ ನೀಡಬಹುದು. ನ್ಯಾಯಾಲಯದ ತೀರ್ಪಿನ ಬಗ್ಗೆ ಇಂತಹ ಪ್ರತಿಕ್ರಿಯೆ ಸಾಧ್ಯವಿಲ್ಲವಾದ್ದರಿಂದ ಆ ಅಂಗಸಂಸ್ಥೆಯು ವಿಶೇಷ ಜವಾಬ್ದಾರಿಯಿಂದ ತನ್ನ ಕರ್ತವ್ಯ ನಿರ್ವಹಿಸಬೇಕಾಗುತ್ತದೆ. ಮೈಸೂರಿನಲ್ಲಿ ನಡೆಯಿತೆನ್ನಲಾದ ಹಗರಣದ ವರದಿಯಿಂದಾಗಿ ಬೆಂಗಳೂರಿನ ಹಲವು ಪತ್ರಿಕೆಗಳು ನ್ಯಾಯಾಲಯ ನಿಂದನೆಯ ಮೊಕದ್ದಮೆಗಳನ್ನು ಎದುರಿಸುತ್ತಿದ್ದು ಈಗ ಸರ್ವೋಚ್ಚ ನ್ಯಾಯಾಲಯದಿಂದ ಸ್ವಲ್ಪ ರಕ್ಷಣೆ ಪಡೆದಿವೆ.

ನ್ಯಾಯಾಲಯಗಳು ತಮ್ಮ ತೀರ್ಪುಗಳ ಮರುಪರಿಶೀಲನೆ ಮಾಡುವ ಸಂದರ್ಭಗಳುಂಟು. ಕಾರ್ಮಿಕರ ಮುಷ್ಕರ, ತೈಲ ಕಂಪೆನಿಗಳ ಖಾಸಗೀಕರಣ ಮೊದಲಾದ ವಿಷಯಗಳನ್ನು ಕುರಿತಂತೆ ಮುಂಚಿನ ತಮ್ಮ ತೀರ್ಪುಗಳನ್ನು ಮರುಪರಿಶೀಲಿಸುವ ಅಗತ್ಯ ಮತ್ತು ಸಾಧ್ಯತೆಗಳಿವೆಯೆಂದು ಸರ್ವೋಚ್ಚ ನ್ಯಾಯಾಲಯವು ತನ್ನ ಇಂಗಿತವನ್ನು ಪ್ರಕಟಿಸಿದೆ. ಯಾವ ಹೊಸ ದತ್ತಾಂಶವೂ ಇಲ್ಲದಿದ್ದಾಗ ಮರುಪರಿಶೀಲನೆ ಏನನ್ನು ಸೂಚಿಸುತ್ತದೆ? ಬಹುಶಃ ಮುಂಚಿನ ನಿರ್ಧಾರಗಳು ಸಾಕಷ್ಟು ಸಮರ್ಪಕವಾಗಿರಲಿಲ್ಲ ಎಂಬುದನ್ನೇ ಇರಬೇಕು. ಇಂತಹ ಅರಿವು ಶಾಸನಸಭೆಗೂ ಉಂಟಾದರೆ 'ದಿ ಹಿಂದು' ಪತ್ರಿಕೆಯ ಮೇಲಿನ ಆಪಾದನೆಗಳನ್ನು ತಕ್ಷಣದಲ್ಲಿ ಕೈಬಿಡಲು ಸಾಧ್ಯ. ಶಾಸನಸಭೆಯು ತನ್ನ ಹಿರಿಮೆಯ ಬಗೆಗಿನ ಬಿಗಿತನವನ್ನು ಕಡಿಮೆಗೊಳಿಸಿಕೊಳ್ಳಬೇಕು ಮತ್ತು ಸಾರ್ವಜನಿಕರು ಎಲ್ಲ ಸಂವಿಧಾನದತ್ತವಾದ ಅಂಗಸಂಸ್ಥೆಗಳ ಕಾರ್ಯಾಚರಣೆಗಳ ಬಗೆಗೂ ಸತತವಾದ ಮಾಪನ ಕ್ರಿಯೆಯಲ್ಲಿ ತೊಡಗಿರಬೇಕು ಎಂಬುದು ಈಗ ಸ್ವೀಕೃತವಾಗಿದೆ ಎನ್ನಬಹುದು.

ತನ್ನ ಸ್ವಾತಂತ್ರ್ಯದ ಬಗ್ಗೆ ಶ್ರದ್ಧೆ ಇರಿಸಿಕೊಂಡಿರುವ ಪತ್ರಿಕಾ ಪ್ರಪಂಚವು ಜನರ ಸ್ವಾತಂತ್ರ್ಯದ ಬಗ್ಗೆ ಅಷ್ಟೇ ಕಾಳಜಿ ಹೊಂದಿರಬೇಕೆಂಬ ಸಾರ್ವಜನಿಕರ ನಿರೀಕ್ಷೆ ತಪ್ಪಲ್ಲ. ತಮ್ಮ ಕ್ಷೇತ್ರದಲ್ಲಿ ವಿದೇಶಿ ನೇರ ಬಂಡವಾಳದ ಹೂಡಿಕೆಯನ್ನು ವಿರೋಧಿಸುವ ಎಷ್ಟೋ ಪತ್ರಿಕೆಗಳು ಬೇರೆ ಆರ್ಥಿಕ ಕ್ಷೇತ್ರಗಳಲ್ಲಿ ಈ ಹೂಡಿಕೆ ಉಂಟುಮಾಡಿರುವ ಹಾವಳಿಯನ್ನು ಗಮನಿಸುವುದಿಲ್ಲ ಮತ್ತು ವಿರೋಧಿಸುವುದಿಲ್ಲ. ಸಾರ್ವಜನಿಕ ಉದ್ಯಮಗಳನ್ನು ಖಾಸಗಿಯವರಿಗೆ ಹಸ್ತಾಂತರ ಮಾಡುವ ವಾಜಪೇಯಿ – ಅರುಣ್ ಶೌರಿ ದುಷ್ಟನೀತಿಯನ್ನು ಬೆಂಬಲಿಸುವುದು ನಮ್ಮ ಹಲವು ಪತ್ರಿಕೆಗಳ "ಸ್ವತಂತ್ರ ಪತ್ರಿಕಾಧರ್ಮ." ಅದರಿಂದ ಸಾರ್ವಜನಿಕ ಸಂಪತ್ತು ಹೇಗೆ ಅತ್ಯಂತ ವೇಗವಾಗಿ ಕರಗಿಹೋಗುತ್ತಿದೆ ಮತ್ತು ಬೊಕ್ಕಸ ಹೇಗೆ ಬರಿದಾಗುತ್ತಿದೆ ಎಂಬುದನ್ನು ಮನಗಂಡು 'ದಿ ಹಿಂದು' ಪತ್ರಿಕೆಯೂ ಸೇರಿದಂತೆ ಎಲ್ಲ ಪತ್ರಿಕೆಗಳೂ ಜನರ ಸ್ವಾತಂತ್ರ್ಯದ ರಕ್ಷಣೆಗಾಗಿ ಧಾವಿಸಬೇಕಾಗಿತ್ತು. ಆದರೆ ಹಾಗೆ ಆಗುತ್ತಿಲ್ಲ. ನಮ್ಮ ದೇಶದ ರೈತರು ವಿವಿಧ ಕಾರಣಗಳಿಂದ ಆತ್ಮಹತ್ಯೆ ಮಾಡಿಕೊಂಡಾಗ ಅಥವಾ ವಿದೇಶಿ ಕಂಪೆನಿಗಳು ಮಾರುವ ಬೀಜಕ್ಕೆ ದಾಸರಾಗುವಂತಾದಾಗ ಕೂಡ ಬಾಯಿ ಬಿಡದ ಪತ್ರಿಕೆಗಳಿವೆ. ಕೇಂದ್ರ ಸಚಿವ ಜಸವಂತ ಸಿಂಗ್ ವಿದೇಶಗಳಿಗೆ ಹೋದಾಗ ಖಾಸಗಿ ಹೋಟೆಲುಗಳಲ್ಲಿ ಒಂದು ದಿನಕ್ಕೆ ೪೫೦೦ ಡಾಲರು (ಸುಮಾರು ಎರಡು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿ) ಬಾಡಿಗೆ ಕೊಡುತ್ತಾರೆ ಮತ್ತು ಅದನ್ನು ಅಲ್ಲಿಯ ನಮ್ಮ ರಾಯಭಾರ ಕಚೇರಿ ಭರಿಸಬೇಕಾಗುತ್ತದೆ.

ನಿಯಮದ ಪ್ರಕಾರ ಇಂತಿಷ್ಟು ಎಂದು ಮೊಬಲಗನ್ನು ನಿರ್ಧರಿಸಿರಲಾಗುತ್ತದೆ; ಮಿಕ್ಕಿದ್ದನ್ನು ಅಘೋಷಿತ ಮೂಲಗಳಿಂದ ತುಂಬಬೇಕು. ದೊಡ್ಡ ಪತ್ರಿಕೆಗಳ ಪ್ರತಿನಿಧಿಗಳು ಅವರೊಟ್ಟಿಗೆ ವಿದೇಶಗಳಿಗೆ ಹೋದಾಗ ಸ್ವತಃ ನೋಡಿರುತ್ತಾರೆ, ಆದರೆ ಅದನ್ನು ಎತ್ತಿ ಹೇಳುವುದಿಲ್ಲ. ಇದು ಯಾರ ಮತ್ತು ಎಂತಹ ಸ್ವಾತಂತ್ರ್ಯದ ರಕ್ಷಣೆ ? ಅಷ್ಟು ದೂರ ಹೋಗುವುದು ಬೇಡ, ಬೆಂಗಳೂರಿನ ರಸ್ತೆಗಳಲ್ಲಿ ಸಂಚಾರ ನಿಯಂತ್ರಿಸಲು ಸಲಹೆ ನೀಡಬೇಕೆಂದು ವಿದೇಶಿ ಕಂಪೆನಿಯೊಂದಕ್ಕೆ ಲಕ್ಷಗಟ್ಟಲೆ ಡಾಲರುಗಳನ್ನು ಸುರಿಯಲಾಗಿದೆ. ಇದು ಜಾಗತೀಕರಣ ಎನಿಸಿಕೊಳ್ಳುತ್ತದೆ. ನಮ್ಮ ನಗರಗಳ ಯಾವ ರಸ್ತೆಯಲ್ಲಿ ಏಕಮುಖ ಸಂಚಾರ ಬೇಕೆಂದು ತಿಳಿಯಲು ಸಾಮರ್ಥ್ಯವಿಲ್ಲದಷ್ಟು ನಾವು ಮೂರ್ಖರಾಗಿದ್ದೇವೆಯೆ ? ಯಾವುದೇ ಕೆಲಸಕ್ಕೂ ವಿದೇಶದ ಕಂಟ್ರಾಕ್ಟರುಗಳಿಗೆ ಹಣ ಸುರಿಯುವ ದುರ್ಗತಿ ನಮ್ಮದಾಗಿದೆ. ತಂತ್ರಜ್ಞಾನ, ಬುದ್ಧಿಮತ್ತೆ, ಕೌಶಲ್ಯ ಇತ್ಯಾದಿಗಳ ಖನಿ ನಮ್ಮ ದೇಶವೆಂದು ಹೇಳಿಕೊಳ್ಳುತ್ತಲೇ ಇಂತಹ ಹೇಸಿಗೆಯ ಪ್ರಕ್ರಿಯೆಗಳು ನಡೆಯುತ್ತಿವೆ. ನಮ್ಮ ಅನೇಕ ಪತ್ರಿಕೆಗಳು ಆ ಬಗ್ಗೆ ಗಾಢ ಮೌನದಲ್ಲಿ ವಿಜೃಂಭಿಸುತ್ತಿವೆ ! ದೇಶಕ್ಕೆ ಅಗಾಧವಾದ ಬಳುವಳಿಯೆಂದು ಜಾಗತೀಕರಣವನ್ನು ಹಾಡಿಹೊಗಳುವ ನಮ್ಮ ಪ್ರಜ್ಞಾವಂತರಿಗೆ ಇದರಿಂದ ಏಕೆ ಮನೋವ್ಯಾಕುಲ ಉಂಟಾಗುವುದಿಲ್ಲವೆಂಬುದೊಂದು ಆಧುನಿಕ ವಿಸ್ಮಯ.

ನಮ್ಮ ರಾಜ್ಯದಲ್ಲಿ ನಕ್ಸಲೀಯರೆಂಬ ನಾಮಕರಣ ಹೊತ್ತು ಇಬ್ಬರು ಯುವತಿಯರು ಇತ್ತೀಚೆಗೆ ಹತರಾದರು. ಹೆಮ್ಮೆಯ ಪತ್ರಿಕಾ ಸ್ವಾತಂತ್ರ್ಯದ ಘೋಷಣೆಯನ್ನು ಮೊಳಗಿಸಿದ 'ದಿ ಹಿಂದು' ಪತ್ರಿಕೆ ನೀಡಿದ ವರದಿ ಮತ್ತು ವಿಶ್ಲೇಷಣೆಗಳು ಈ ಸಂಬಂಧದಲ್ಲಿ ಚಿಂತನಯೋಗ್ಯವಾಗಿವೆ. ಬಾಬಾಬುಡನ್‌ಗಿರಿಯಲ್ಲಿ ಬಜರಂಗದಳದ ಹುನ್ನಾರಗಳನ್ನು ವಿರೋಧಿಸಿದವರು, ಕುದುರೆಮುಖ ಅರಣ್ಯಪ್ರದೇಶದಲ್ಲಿರುವ ಬುಡಕಟ್ಟು ಜನರ ಪರವಾಗಿ ಸೊಲ್ಲೆತ್ತಿದವರು, ಶಿವಮೊಗ್ಗ-ಶೃಂಗೇರಿಗಳಲ್ಲಿ ಈ ವಿಷಯಕ್ಕಾಗಿ ಪ್ರತಿಭಟನಾ ಮೆರವಣಿಗೆ ನಡೆಸಿದವರು, ಕಾಡಿನ ಮರಗಳನ್ನು ಕತ್ತಲಲ್ಲಿ ಕದ್ದು ಸಾಗಿಸುವವರನ್ನು ಬಯಲಿಗೆಳೆದವರು, ಎಲ್ಲರೂ 'ದಿ ಹಿಂದು' ಪತ್ರಿಕೆಯ ನವಂಬರ್ ೧೮ರ ಒಂದು ವರದಿಯ ಪ್ರಕಾರ ನಕ್ಸಲೀಯರೆನಿಸಿಕೊಂಡು ಬಿಡುತ್ತಾರೆ. ಜನಸಾಮಾನ್ಯರ ಸ್ವಾತಂತ್ರ್ಯವನ್ನು ಸಮರ್ಥಿಸುವ ವಿಧಾನವೇ ಇದು ? ಪತ್ರಿಕಾ ಮಾಧ್ಯಮದಲ್ಲಿ ಸ್ವಾತಂತ್ರ್ಯದ ಸೋಗು ಕೆಲವೊಮ್ಮೆ ಬಜರಂಗ ದಳದ ಕರಾಳ ಮನೋಧರ್ಮಕ್ಕೆ ಇಂಬು ನೀಡಬಹುದೆಂಬುದಕ್ಕೆ ಇದೊಂದು ಚಿಕ್ಕ ನಿದರ್ಶನ. ಬಜರಂಗದಳವು ಸಮಾಜದ ಸ್ವಾತಂತ್ರ್ಯವನ್ನು ಹಿಗ್ಗಿಸುವುದಿಲ್ಲ ಬದಲಾಗಿ ಕುಗ್ಗಿಸುತ್ತದೆ, ಎಂಬುದು ಅನುಭವದ ಸಾರಾಂಶ. ಇತ್ತೀಚೆಗೆ ಬೆಂಗಳೂರಿನ ಬಳಿಯ ಯಲಹಂಕದಲ್ಲಿ ಆ ಊರಿನ ಹತ್ತಿರದ ಅಟ್ಟೂರು ಗ್ರಾಮದಲ್ಲಿ ನಡೆದ ಒಂದು ಘಟನೆಯ ವಿರುದ್ಧ ಪ್ರತಿಭಟನೆ ಆಯೋಜಿಸಲಾಗಿತ್ತು. ಕೆಲವು ಅವಿವೇಕಿ ಧೂರ್ತರು ಅಟ್ಟೂರಿನ ದೇವಾಲಯದಲ್ಲಿ ಮೂರ್ತಿಗಳನ್ನು ವಿರೂಪಗೊಳಿಸಿದ್ದರೆಂಬ ವರದಿಯ ಹಿನ್ನೆಲೆಯಲ್ಲಿ ನಡೆದ ಪ್ರತಿಭಟನೆ ಇದು. ಅಟ್ಟೂರಿನ ಪಾತಕಕ್ಕೆ ಕಾರಣರಾದವರನ್ನು ದಸ್ತಗಿರಿ ಮಾಡಬೇಕು ಮತ್ತು ಆ ಪಾತಕಿಗಳ ಅಪರಾಧವು ಕೋಮುಗಲಭೆಗೆ ಹಾದಿ ಮಾಡಿಕೊಡಕೂಡದೆಂಬುದು ಸಾರ್ವಜನಿಕ ಸ್ವಾತಂತ್ರ್ಯದ ನೆಲೆಯಲ್ಲಿ ಸಮರ್ಥನೀಯವಾದ ಹಕ್ಕೊತ್ತಾಯಗಳು. ಆದರೆ ಬಜರಂಗದಳದ ನೇತಾರರು ಕೊಟ್ಟ ಕರೆ ಸ್ವಾತಂತ್ರ್ಯಹರಣಕ್ಕೆ ಪೂರಕವಾಗುವಂಥವು. ಒಂದು ಮೂರ್ತಿಯನ್ನು ವಿರೂಪಗೊಳಿಸಿದರೆ ಅದಕ್ಕೆ ಪ್ರತಿಯಾಗಿ ಒಂದು ಮಸೀದಿಯನ್ನುರುಳಿಸುತ್ತೇವೆಂಬ ಭಾತಿ ಇಲ್ಲದ ತನಕ ಹಿಂದುಗಳ ದೇವಾಲಯಗಳ ಪಾವಿತ್ರ್ಯಕ್ಕೆ ಉಳಿಗಾಲವಿಲ್ಲವೆಂಬ ಅರ್ಥ ಬರುವ ಮಾತುಗಳು ಅಲ್ಲಿ ಕೇಳಿಬಂದುವು. ನಮ್ಮ ರಾಜ್ಯದ ಗೃಹಮಂತ್ರಿಗಳಿಗೆ ಅದು ಕೇಳಿಸುವುದಿಲ್ಲ ಅವರಿಗೆ ಕುದುರೆಮುಖದ ಗುಡ್ಡಗಾಡು ಜನರ ಸ್ವಾತಂತ್ರ್ಯದ ಮಾತನ್ನಾಡುವವರು ನಕ್ಸಲೀಯರಂತೆ ತೋರುತ್ತಾರೆ. ಮತಾಂಧತೆಯು ಯಾವ ಸ್ವರೂಪದಲ್ಲಿ ತೋರಿಬಂದರೂ ಅದನ್ನು ಮೆಟ್ಟಿ ನಿಲ್ಲದಿರುವುದು ನಿಜಕ್ಕೂ ಮತಾಂಧತೆಯ ಪೋಷಣೆಯೇ ಆಗುತ್ತದೆ ಮತ್ತು ಸಮಾಜದ ಸ್ವಾತಂತ್ರ್ಯದ ದಮನವಾಗುತ್ತದೆ. ಅದನ್ನು ಕೃಷ್ಣ - ಖರ್ಗೆ ಅರಿತುಕೊಳ್ಳಬೇಕು. ಮತಧರ್ಮಗಳ ಅವಾಂತರದಿಂದ ಉಂಟಾಗುವ ಪಿಡುಗುಗಳನ್ನು ಕುರಿತು ಚಿಂತಿಸುವುದು ಮತ್ತು ಕ್ರಿಯೆಯಲ್ಲಿ ತೊಡಗುವುದು, ಇದಿಷ್ಟೇ ಜನಸಮುದಾಯದ ಚಟುವಟಿಕೆಯಾಗಿಬಿಟ್ಟರೆ ತಿಮಿಂಗಿಲಗಳನ್ನು ಬೆಳೆಸುವುದು ಮತ್ತು ಜನತೆಯನ್ನು ಸುಲಿಯುವುದು ಬಂಡವಾಳಶಾಹಿ ವ್ಯವಸ್ಥೆಗೆ ಸುಲಭವಾಗುತ್ತದೆ. ನಮ್ಮ ದೇಶದಲ್ಲಿ ಇಂತಹ ವಾತಾವರಣ ಉಸಿರುಕಟ್ಟಿಸುವಷ್ಟು ದಟ್ಟವಾಗಿ ಹರಡಿದೆ. ಈ ವಾತಾವರಣದಲ್ಲಿ ಸ್ವಾತಂತ್ರ್ಯದ ಅರ್ಥ ಬಹಳ ಸೀಮಿತಗೊಳ್ಳುವ ಅನಿವಾರ್ಯತೆ ಇದೆ. ಅದನ್ನು ಮನಗಾಣದ ಸರ್ಕಾರಗಳು ನಿರರ್ಥಕ ಮತ್ತು ಜನವಿರೋಧಿ ಎನ್ನಬೇಕು.

ಬಿಹಾರದಲ್ಲಿ ಅಸ್ಸಾಮಿ ಜನರನ್ನು ಥಳಿಸುವುದಕ್ಕೆ ಪ್ರತಿಯಾಗಿ ಅಸ್ಸಾಮಿನಲ್ಲಿ ಬಿಹಾರಿಗಳನ್ನು ಚಚ್ಚಲಾಗಿದೆ. ಹಿಂದಿ ಮಾತನಾಡುವ ಕೆಲವು ಲಾರಿ ಚಾಲಕರ ಹತ್ಯೆಯೂ ನಡೆದಿದೆ. ರಾಷ್ಟ್ರೀಯತೆಯ ಮಂತ್ರವನ್ನು ಉಪದೇಶಿಸುವ ವಾಜಪೇಯಿ ಸರ್ಕಾರದ ಉದ್ಯೋಗನೀತಿಯ ಒಂದು ದುಷ್ಫಲ ಇದು. ರೈಲ್ವೆ ವಿಭಾಗದಲ್ಲಿ ನೌಕರಿ ಪಡೆಯಲು ಪರೀಕ್ಷೆಗಳಿಗೆ ಹೋಗುವ ಯುವಕ-ಯುವತಿಯರಿಗೆ ಪೆಟ್ಟು ಮತ್ತು ಪ್ರಾಣಭಯ ಒಂದು ಹೊಸ ಸೃಷ್ಟಿ. ಮುಂಬೈಯಲ್ಲಿ ಬಾಳಠಾಕ್ರೆ ಸೈನಿಕರು ರೈಲ್ವೆ ಕಚೇರಿಗಳಿಗೆ ನುಗ್ಗಿ ದಾಂಧಲೆ ನಡೆಸಿದ್ದಾರೆ. ನಿರುದ್ಯೋಗದ ಬೆಂಕಿ ಹೇಗೆ ಮಾನವೀಯ ಸಂಬಂಧಗಳನ್ನು ನುಚ್ಚುನೂರು ಮಾಡಬಲ್ಲುದೆಂಬುದಕ್ಕೆ ಈ ರೀತಿಯ ಹೊಸ ಪುರಾವೆ ನಮಗೆ ಬೇಕಿರಲಿಲ್ಲ. ಜಾಗತೀಕರಣದ ಗುಂಗಿನಲ್ಲಿ ಉದ್ಯೋಗದ ಸಾಧನೆಗಳನ್ನು ಕಡೆಗಣಿಸಿದ್ದು ನಮ್ಮ ದುರಂತ. ಈಗಲಾದರೂ ಜಾಗತೀಕರಣವು ಜನಸಾಮಾನ್ಯರ ಸ್ವಾತಂತ್ರ್ಯಕ್ಕೆ ಹೇಗೆ ಧಕ್ಕೆಯುಂಟುಮಾಡುತ್ತದೆಂಬುದನ್ನು ತಿಳಿದು ಕಾರ್ಯಪ್ರವೃತ್ತರಾಗುವ ಅವಶ್ಯಕತೆ ಇದೆ. ಹಾಗೆ ಮಾಡಿದಾಗ ಕ್ರಮೇಣ ಸ್ವಾತಂತ್ರ್ಯದ ಹಾದಿ ಬೆಳಕಿನಿಂದ ಉಜ್ವಲವಾಗುತ್ತದೆ. ಬೆಂಗಳೂರಿನ ಜೆ.ಪಿ. ನಗರದ ಒಂದು ಉದ್ಯಾನದಲ್ಲಿ ಥಟಕ್ಕನೆ ಒಬ್ಬ ದೇವತೆ ಪ್ರತಿಷ್ಠಾಪಿತನಾದ; ಸಾರ್ವಜನಿಕರ ಪರವಾಗಿ ಒಬ್ಬ ಪ್ರಜ್ಞಾವಂತರು ಮಧ್ಯಪ್ರವೇಶ ಮಾಡಿ ಸಮಾಜದ ಸ್ವಾತಂತ್ರ್ಯವನ್ನು ಕಾಯ್ದರು. ಆನೇಕಲ್ಲಿನ ಪುರಸಭಾಧ್ಯಕ್ಷೆಯ ಆತ್ಮಹತ್ಯೆ ಸಂದರ್ಭದಲ್ಲಿ ಹಲವು ಮಹಿಳಾ ಸಂಘಟನೆಗಳು ಕಣಕ್ಕಿಳಿದು ಸ್ವಾತಂತ್ರ್ಯದ ಧ್ವಜ ಎತ್ತಿಹಿಡಿದಿದ್ದಾರೆ. ಬಾಬಾಬುಡನ್‌ಗಿರಿಯಲ್ಲಿ ಸೌಹಾರ್ದತೆ ಮೆರೆಯಲೆಂದು ಸಾರ್ವಜನಿಕರು ಕ್ರಿಯಾಶೀಲರಾಗುತ್ತಿದ್ದಾರೆ. ಇವೆಲ್ಲ ಸ್ವಾತಂತ್ರ್ಯದ ವಿಸ್ತರಣೆಗೆ ಇರುವ ಸಾಧನಗಳು. ಪತ್ರಿಕೆಗಳೂ ಅಂತಹ ಸಾಧನವಾಗುವುದೇ ನಿಜವಾದ ಪತ್ರಿಕಾ ಸ್ವಾತಂತ್ರ್ಯ ಎನಿಸಿಕೊಳ್ಳುತ್ತದೆ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☏ : ೦೮೦-೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☏ : ೦೮೨೪-೨೪೪೧೦೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☏ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☏ : ೦೮೪೭೨-೪೨೪೩೦೨




**ನ**ವೆಂಬರ್ ೨೦೦೩ರ ಸಂಚಿಕೆಯ 'ವೈಜ್ಞಾನಿಕ ಮನೋವೃತ್ತಿ' ಲೇಖನ ತುಂಬಾ ಗಮನಾರ್ಹವಾದುದು. ವೈಚಾರಿಕತೆಯ ಎಸಳುಗಳನ್ನು ಹೇಗೆ ಅರ್ಥೈಸಿಕೊಳ್ಳಬೇಕು, ಏಕೆ, ಎಲ್ಲಿಂದ ಪಡೆಯಬೇಕು ಎನ್ನುವ, ಕುತೂಹಲ ತಾಳುವ, ನಿಖರ ಮಾಹಿತಿ ನೀಡುವ, ವೈಜ್ಞಾನಿಕ ಮನೋವೃತ್ತಿಯ ನಿಲುವುಗಳನ್ನು ಸಾದರಪಡಿಸುವ ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಅವರಂತಹ ಲೇಖನಗಳನ್ನು ಹೆಚ್ಚಿಸುವಂತೆ ತಮ್ಮಲ್ಲಿ ವಿನಂತಿ. ಹೊಸತು ಇನ್ನೂ ಹೊಸ ಆಯಾಮಗಳನ್ನು ಮೈದಾಳಲಿ. ಧನ್ಯವಾದಗಳು.

ದಾವಣಗೆರೆ **ಕೆ. ಎಂ. ಪಂಚಾಕ್ಷರಯ್ಯ**

ಜಾತಿಯ ನೆಲೆಗಟ್ಟಿನಲ್ಲಿ ಆವೃತ್ತವಾದ, ತನ್ಮೂಲಕ ದಟ್ಟ ದಾರಿದ್ರ್ಯವನ್ನು ತೊಡೆದುಹಾಕುವಲ್ಲಿ ಇರುವ ವಿಪುಲ ಅವಕಾಶಗಳಿಂದ ವಂಚಿತರಾದ ನಿಕೃಷ್ಟ ಜನರನ್ನು ಮೇಲೆತ್ತುವ ನೆಪದಲ್ಲಿ ರಾಜಕೀಯ ಸೋಗಲಾಡಿತನವನ್ನು ಮಾರ್ಮಿಕವಾಗಿ ಬಿಂಬಿಸುವ ಸಿ. ಎಚ್. ಜಾಕೋಬ್ ಲೋಬೊರವರ ''ಭಾರತೀಯ ಇಚ್ಛಾ ಶಕ್ತಿಗೆ ಮೀರಿದ ಸಾಮಾಜಿಕ ನ್ಯಾಯ''ದಲ್ಲಿ ತೊಳೆತೊಳೆಯಾಗಿ ಬಿಡಿಸಿಡುವ ಈ ಲೇಖನದಲ್ಲಿ, ಕೊನೆಗೂ ಮುಕ್ತಿ ಕಾಣದ ಅಸಹಾಯಕರು, ನಿರಂತರ ಶೋಷಣೆಗೆ ಗುರಿಯಾದವರ ಪಾಡು ನಾಯಿ-ನರಿಗಿಂತ ಕಡೆಯಾಗಿಹೋದವರ ಶೋಚನೀಯ ಬದುಕನ್ನು ವಿಷಾದದಿಂದ ನೆನೆಯುತ್ತಾರೆ.

ತುಮಕೂರು **ಹರಿಯಬ್ಬಿ ರಂಗಸ್ವಾಮಿ**




ಈ ಸಲದ 'ದಾಳಿಗೆ ಒಳಗಾದಾಗ' ಲೇಖನ ಓದುತ್ತಲೇ ಮೂಲ ಕೃತಿ ಓದುವ ಮನಸ್ಸಾಯಿತು. 'ಎಮ್ಮೆ ಪುರಾಣ' ಆತ್ಮಾವಲೋಕನಕ್ಕೆ ಹಚ್ಚಿತು. 'ಮೂಸಬ್ಬ ಬ್ಯಾರಿಯ ದಂಧೆಗಳು' – ಓದುತ್ತ ಗುಣಕ್ಕೆ ಮತ್ಸರವುಂಟೆ ? ಎಂಬುವಂತಾಯಿತು. 'ಮಳೆಯ ಸುತ್ತ...' ಇನ್ನಷ್ಟು ಹರಿತವಾಗಬೇಕಿತ್ತು. 'ಅವರೋಧವಾಸಿನಿ' ಬಗ್ಗೆ ಓದುತ್ತ ಆ ಸಮುದಾಯದ ಮಹಿಳೆಯರ ಬಗ್ಗೆ ಮರುಕ ಬಂತು. ಆದರೆ ಇಂಥ ಕೃತಿ ಆ ಸಮಾಜದ ಜನಗಳೇ ಹೆಚ್ಚು ಸಂಖ್ಯೆಯಲ್ಲಿ ಓದುವಂತಾಗಬೇಕು.

''ಕ್ಯೂಬಾದ ಮೇಲೆ...'' ಮತ್ತು ''ಅಮೇರಿಕಾ ದಾಸ್ಯದಲ್ಲಿ ಭದ್ರತಾ ಮಂಡಳಿ...'' ಎಂಬ ಲೇಖನಗಳು ವಿಶ್ವದ ಹಿರಿಯಣ್ಣ ತಲೆಕೆಟ್ಟು ಎಂತೆಂಥ ಅನಾಹುತಗಳಿಗೆ ಕಾರಣಕರ್ತನಾಗುತ್ತಿದ್ದಾನಲ್ಲ ! ಅನ್ನಿಸಿತು. ತಕ್ಷಣವೇ ದೆಹಲಿಯಲ್ಲಿರುವ ಅಮೇರಿಕಾ ರಾಯಭಾರಿಯ ಕಛೇರಿಗೆ ಒಂದು ಪತ್ರ ಬರೆದೇಬಿಟ್ಟೆ.

ಇದು ಪತ್ರಿಕೆಯ ಕ್ರಿಯಾಶೀಲ ಪ್ರಚೋದನೆ ಅಲ್ಲವೆ ?

ಬೆಂಗಳೂರು **ವಿಶ್ವಾರಾಧ್ಯ ಸತ್ಯಂಪೇಟೆ**

ಶ್ರೀ ಜಿ. ಕುಮಾರಪ್ಪರವರ 'ಅವರೋಧವಾಸಿನಿ' ಈ ಗ್ರಂಥದ ಆಯ್ದ ಮೂರು ಭಾಗಗಳನ್ನು ಬಂಗಾಳಿಯಿಂದ ಅನುವಾದಿಸಿ, ಆ ಮೂರು ಭಾಗಗಳನ್ನು ಓದಿದಾಗ ನಿಜಕ್ಕೂ ಮೈ ಜುಂ ಅನ್ನುತ್ತದೆ. ಅವರ ಸಂಯಮತೆ ಕಂಡು ಮರುಕವೆನಿಸುತ್ತದೆ. ಮತ್ತು ಡಾ॥ ಸಿ. ಪಿ. ಕೃಷ್ಣಕುಮಾರ್ 'ಆದರ್ಶಗಳ ಸ್ವರ್ಗ' ಉತ್ತಮವಾಗಿದೆ. ಶ್ರೀ ಎಂ. ರವಿ ಕುಮಾರ್‌ರ 'ಆವಿಯಾಗುವ ತವಕ' ಪದ್ಯ ಲಯ, ಪ್ರಾಸದೊಂದಿಗೆ ಆವಿಯಾಗುವ ತವಕ ಚೆನ್ನಾಗಿ ಮೂಡಿದೆ.

ಕಡೂರು **ಜಿ. ಎಚ್. ತ್ರಿವೇಣಿ ಶಿವಕುಮಾರ್**

ವಿಶ್ವದ ಅತ್ಯುನ್ನತ ಪ್ರಶಸ್ತಿಯ ನಿರ್ಮಾತೃ ನೊಬೆಲ್ ಕುರಿತಾದ ಲೇಖನ ಸಮಗ್ರ ಮಾಹಿತಿಯೊಂದಿಗೆ ಪೂರಕವಾಗಿ ಮೂಡಿಬಂದಿದೆ. ಮೂಢನಂಬಿಕೆ, ಅವೈಜ್ಞಾನಿಕತೆ ರಾರಾಜಿಸುವ ನಮ್ಮ ರಾಷ್ಟ್ರದಲ್ಲಿ ವೈಜ್ಞಾನಿಕ ಮನೋವೃತ್ತಿಯ ಬಗ್ಗೆಯ ಪ್ರೊ॥ ಜೆ. ಆರ್. ಲಕ್ಷ್ಮಣರಾಯರ ಲೇಖನ ಪೂರಕ ಮತ್ತು ಕಣ್ಣು ತೆರೆಸುವಂತಾಗಿರುವುದು ಸ್ತುತ್ಯರ್ಹವೇ ಸರಿ. ನವೆಂಬರ್ 'ಹೊಸತು' ಕಾರ್ತೀಕದ ನಂದಾ ದೀಪವಾಗಿಯೇ ಹೊಮ್ಮಿದೆ.

ಬೆಂಗಳೂರು **ನೆ. ಲ. ರಾಂ**




# ನಾವು ಮತ್ತು ಗಾಂಧಿ

**ಮ**ತ್ತೊಂದು ಗಾಂಧಿ ಜಯಂತಿ ನಡೆದುಹೋಯಿತು! ಇಂದು ಗಾಂಧಿಯ ನಾಡಿನಲ್ಲಿ ನಡೆಯುತ್ತಿರುವ ಕೃತ್ಯಗಳನ್ನೆಲ್ಲ ಅಗತ್ಯವಾಗಿ ಚಿಂತಿಸಲೇಬೇಕಾಗಿರುವ ಸಂದರ್ಭವಿದು. ಗಾಂಧಿಯನ್ನು ಮನುವಾದಿ, ಜಾತ್ಯತೀತ ಹಾಗೂ ಸೌಮ್ಯವಾದಿಯ ಮುಖವಾಡ ಧರಿಸಿದವನು ಎನ್ನುವುದರಿಂದ ಹಿಡಿದು, ನಮ್ಮ ಸಿನೆಮಾ ಮಂದಿರಗಳಲ್ಲಿ ಗಾಂಧಿ ಕ್ಲಾಸು, ಸರಳ ವ್ಯಕ್ತಿಯನ್ನು ಕಂಡಾಗ 'ಅವನು ಬಿಡು ಗಾಂಧಿ' ಅನ್ನುವವರೆಗೆ ಗಾಂಧೀಜಿಯ ಹೆಸರು ಬಳಕೆಯಾಗುತ್ತಿದೆ. ಆತನ ಹೆಸರನ್ನು ಹೇಳಲೂ ಯೋಗ್ಯರಲ್ಲದವರ ಬಾಯಲ್ಲೆಲ್ಲ ಗಾಂಧಿ ಸುಮ್ಮನೆ ಯಾಂತ್ರಿಕವಾಗಿ ಹರಿದಾಡುತ್ತಿರುವುದು ನಮ್ಮ ದೇಶದ ದುಸ್ಥಿತಿಯನ್ನು ಹೇಳುತ್ತದೆ. ಗಾಂಧಿ ಹುಟ್ಟಿದ ಮತ್ತು ಸತ್ತ ಎರಡು ದಿನಗಳು ಮಾತ್ರ ನೆನಪಿಸಿಕೊಂಡು ತೆಪ್ಪಗಾಗಿಬಿಡಬೇಕೆ? ಆತನ ವಿಚಾರಗಳನ್ನು, ಚಿಂತನೆಗಳನ್ನು ನಾವು ಮರೆತೇ ಬಿಡಬೇಕೆ? ನಿಜವಾಗಿಯೂ ಗಾಂಧಿ ನಮಗಿಂದು ಅಪ್ರಸ್ತುತನೆ? ಆತನ ವಿಚಾರಗಳನ್ನು ಎಷ್ಟೋ ಹಿರಿ ತಲೆಗಳೇ ಗಾಳಿಗೆ ತೂರುತ್ತಿರುವಾಗ ಮುಂದಿನ (ಯಾಕೆ, ಇಂದಿನ ಯುವ ಪೀಳಿಗೆ ಕೂಡ) ಪೀಳಿಗೆ ಅಂಥ ವಿಚಾರಗಳನ್ನು ಹಿಡಿದಿಟ್ಟುಕೊಳ್ಳುವುದಾದರೂ ಹೇಗೆ? ಹಣ ಮಾಡಿ ಅಮೆರಿಕದವರಂತೆ 'ಮುಂದುವರಿಯುವ' ತಂತ್ರವನ್ನೇ ಅನುಕರಿಸುವ ಸ್ಥಿತಿ ಭಾರತಕ್ಕೂ ಒದಗುತ್ತಿರುವುದು ದುರಂತ. 'ಮುಂದುವರಿಯುವುದು' ತಪ್ಪಲ್ಲ. ಹೇಗೆಂಬುದು ಮುಖ್ಯ. ಜಾಗತೀಕರಣ ಮತ್ತು ಉದಾರೀಕರಣ ಇವುಗಳಿಂದಾಗುತ್ತಿರುವ ಅಪಾಯಗಳು ನಮ್ಮ ಕಣ್ಣಿಗೆ ರಾಚುವಂತೆಯೇ ಇವೆ.

ಇಂಥ ದುರಂತವನ್ನು ಗಾಂಧಿ ಕಲ್ಪಿಸಿಯೇ ಇದ್ದರು. ಅದಕ್ಕಾಗೇ ಅಮೆರಿಕದಂಥ ಸಮೃದ್ಧಿಯನ್ನು ನಿರಾಕರಿಸಿದ್ದರು ಕೂಡ. ''ನಮ್ಮಲ್ಲೇನಾದರೂ ಪ್ರತಿಯೊಬ್ಬರೂ ಒಂದೊಂದು ಕಾರು ಇಟ್ಟುಕೊಳ್ಳುವಂಥ ಸಮಾಜ ವ್ಯವಸ್ಥೆ ನಿರ್ಮಿತವಾದರೆ, ನಡೆದಾಡಲೇ ಸ್ಥಳವಿಲ್ಲವಾದೀತು'' ಎಂದಿದ್ದ ಗಾಂಧೀಜಿ, ಜನ ಸೋಮಾರಿಗಳೂ, ನಿರುದ್ಯೋಗಿಗಳೂ ಆಗಬಾರದೆಂದು ಚಿಂತಿಸಿ, ಅಧಿಕವಾಗಿರುವ ಮಾನವ ಸಂಪನ್ಮೂಲವನ್ನು ಬಳಸಿಕೊಳ್ಳುವ ಗ್ರಾಮ ಸ್ವರಾಜ್ಯದ ಕಲ್ಪನೆಯನ್ನು ಕೊಟ್ಟರು. ಆ ಮೂಲಕ ಸರ್ವೋದಯದ ಕನಸನ್ನು ಕಂಡರು. ಆ ಕನಸು ಕನಸಾಗೇ ಉಳಿದಿದೆ.

ಜಗತ್ತಿನ ಎಲ್ಲರೂ ಸಮಾನವಾಗಿ ತಿಂದುಣ್ಣುವ ಜಾಗತೀಕರಣವನ್ನು ಗಾಂಧಿಯೂ ಕಲ್ಪಿಸಿದ್ದರು. ಆದರೆ, ಇಂದಿನ ಜಾಗತೀಕರಣದ ಪ್ರಭಾವದಿಂದಾಗಿ ಉಳ್ಳವರ-ಇಲ್ಲದವರ ವರ್ಗ ಕಣ್ಣಿಗೆ ರಾಚುವಂತೆ ಬೆಳೆಯುತ್ತಿದೆ. ''ಪ್ರತಿಯೊಬ್ಬರಿಗೂ ಉಣಲು, ಕುಡಿಯಲು, ಉಡಲು ಸಾಕಷ್ಟು, ಮನಸ್ಸನ್ನು ಸುಶಿಕ್ಷಿತಗೊಳಿಸಲು ತಕ್ಕ ವ್ಯವಸ್ಥೆಯಾದರೆ ಸಾಕು. ನಾನು ಅರಗಿಸಿಕೊಳ್ಳಲಾರದಷ್ಟನ್ನು ನನ್ನ ಹೊಟ್ಟೆಗೆ ತುರುಕುವುದಿಲ್ಲ. ನಾನು ಉಪಯುಕ್ತವಾಗಿ ಬಳಸಬಹುದಾದುದಕ್ಕಿಂತ ಹೆಚ್ಚು ಬಯಸೆ'' ಎಂದು ಹೇಳುವಲ್ಲಿ ಸರ್ವರ ಉದಯವನ್ನು ಬಯಸುವ, ನೀತಿಯುತವಾದ, ಸಾಮುದಾಯಿಕ ಹಿತವನ್ನು ರಕ್ಷಿಸುವ ಜನಪರವಾದ ಕಾಳಜಿ ಕಾಣುತ್ತದೆ. ಭಾರತದಂಥ ರಾಷ್ಟ್ರಗಳಿಗೆ ಗಾಂಧೀಜಿಯ ಆರ್ಥಿಕ ಚಿಂತನೆಗಳು ಎಂದಿಗೂ ಪ್ರಸ್ತುತವೇ.

ಇಂದಿನ ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ವಿಶ್ವವ್ಯಾಪಾರಿ ಒಪ್ಪಂದಗಳು – ಇವುಗಳಿಂದಾಗಿ ವಿದೇಶಿ ಕಂಪನಿಗಳಿಗೆ ಮಣೆ ಹಾಕುವ ನಮ್ಮ ಸರ್ಕಾರಗಳು, ಇದರಿಂದ ಹುಟ್ಟಿಕೊಳ್ಳುತ್ತಿರುವ ಕೊಳ್ಳುಬಾಕ ಸಂಸ್ಕೃತಿ, ನಮಗೆ ಬೇಡದಿದ್ದರೂ ತುಂಬಿಕೊಳ್ಳುವ, ತುಂಬಿಕೊಳ್ಳುವಂತೆ ಪ್ರೇರೇಪಿಸುವ ಮಾಧ್ಯಮಗಳು, ನಮ್ಮ ದೇಶದ ಕೆಲವು ಜನಪ್ರಿಯ ವ್ಯಕ್ತಿಗಳನ್ನೇ ಕೊಂಡು, ಜಾಹಿರಾತಿಗೆ ಬಳಸಿ ನಮ್ಮ ಸಂಪತ್ತನ್ನೇ ಕೊಳ್ಳೆ ಹೊಡೆಯುವ ವಿದೇಶಿ ಕಂಪನಿಗಳು, ಇಂಥ ಕಂಪನಿಗಳನ್ನು ಕೈಬೀಸಿ ಕರೆವ ನಮ್ಮ ಸರ್ಕಾರಗಳು... ಇದರಿಂದಾಗೇ ಮುಚ್ಚುತ್ತಿರುವ ಸಾರ್ವಜನಿಕ ಕಾರ್ಖಾನೆಗಳು, ಖಾಸಗೀಕರಣ... ಗ್ರಾಮೀಣ ಪ್ರದೇಶಗಳಲ್ಲಿ ಪರ್ಯಾಯ ಉದ್ಯೋಗಾವಕಾಶವಿಲ್ಲದೆ ಸಾಯುತ್ತಿರುವ ರೈತರು, ''ಆತ್ಮಹತ್ಯೆಯ ವಿಚಾರ ಬಿಟ್ಟು ರೈತರು ಪಟ್ಟಣಕ್ಕೆ ಬನ್ನಿ, ಇಲ್ಲಿ 'ಹೇಗಾದರೂ' ಬದುಕಬಹುದು'' ಎಂಬ ಧಾರ್ಷ್ಟ್ಯದ ಕರೆ ನೀಡುವ ಜನಪ್ರತಿನಿಧಿಗಳು!... ಇಂಥ ತಿಕ್ಕಲುತನದ ಹೇಳಿಕೆಗಳನ್ನು ಕೊಡುವುದನ್ನು ಬಿಟ್ಟು, ಈಗಲೂ ಗಾಂಧೀಜಿಯವರ 'ಅರ್ಥ ವಿಚಾರ'ಕ್ಕೆ ಮೊರೆಹೋದಲ್ಲಿ ನಮ್ಮ ಗ್ರಾಮೀಣ ರೈತರ ಆರ್ಥಿಕ ಪರಿಸ್ಥಿತಿ ಉತ್ತಮವಾಗುವುದರಲ್ಲಿ ಅನುಮಾನವೇ ಇಲ್ಲ. ಅದಕ್ಕಾಗಿ, ಗ್ರಾಮೀಣ ಪ್ರದೇಶದಲ್ಲಿ ಪರ್ಯಾಯ ಉದ್ಯೋಗಾವಕಾಶ ಒದಗಿಸುವ ವ್ಯವಸ್ಥೆಯಾಗಲಿ, ಕೃಷಿಗೆ ಪೂರಕವಾದ ಗುಡಿಕೈಗಾರಿಕೆಗಳಿಗೆ ಉತ್ತೇಜನ ನೀಡಲಿ, ಅಲ್ಲಿ ಉತ್ಪನ್ನವಾದ ವಸ್ತುಗಳಿಗೆ ಪೂರಕ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಲಿ. ಆಗ 'ಕಟ್ಟ ಕಡೆಯವನೂ' ನೆಮ್ಮದಿಯಾಗಿ ಬದುಕುವಂತಾಗುತ್ತಾನೆ.

ಜಾಗತೀಕರಣದ ಹೆಸರಿನಲ್ಲಿ ಗಾಂಧೀಜಿಯ ಹೆಸರನ್ನು ಯಾಂತ್ರಿಕವಾಗಿ ಬಳಸುತ್ತಾ ಸವಕಲು ಮಾಡದೆ, ಅವರ ಚಿಂತನೆಗಳಿಗೆ ಹೆಚ್ಚು ಒತ್ತುಕೊಡುವ ಜವಾಬ್ದಾರಿಯನ್ನು ನಾವು ಹೇರಿಕೊಳ್ಳಲೇಬೇಕಾಗಿದೆ.

ಗೀತಾ ಡಿ. ಸಿ.
ಕನ್ನಡ ವಿಭಾಗ, ನ್ಯಾಷನಲ್ ಪ್ರಥಮದರ್ಜೆ ಕಾಲೇಜು
ಭೂಪಸಂದ್ರ, ಬೆಂಗಳೂರು - ೫೬೦ ೦೯೪

## ಸೆಪ್ಟೆಂಬರ್ ೧೧ರ ಸಾಗರದ ಕೋಮುಗಲಭೆಯನ್ನು ನೆನೆದು.......

**ಹೊ**ತ್ತಿ ಉರಿಯಿತೋ ಸಾಗರ
ಸಮರಸದ ಮನಕೆ ಬೇಸರ

*

ಆ ಸೆಪ್ಟೆಂಬರ್ ಹನ್ನೊಂದು
ಬೇಡ ಅಂಥ ದಿನ ಇನ್ನೊಂದು

*

ಅಕ್ಕಿಗೆ ಸುರಿದರು ಸೀಮೆಎಣ್ಣೆ
ಅವರಲ್ಲಿ ಮಾನವೀಯತೆ ಸೊನ್ನೆ

*

ಸುಟ್ಟು ಹೋದವು ಕಲಾವಿದನ ಚಿತ್ರ
ಜೊತೆಗೇ ಕರಿಕಲು ಆತನ ಪ್ರಮಾಣಪತ್ರ

*

ಸ್ಕೂಲು ಪುಸ್ತಕಕೆ ಬೆಂಕಿಯ ಜ್ವಾಲೆ
ಆದರೂ ಬತ್ತೀತೇ ಜ್ಞಾನದಾ ಸೆಲೆ ?

*

ಬಣ್ಣದ ಟಿ.ವಿ.ಯ ಒಡೆದರು ಕಲ್ಲಲಿ
ಕತ್ತಲು ಚಿಮ್ಮಿತು ನೋಡುವ ಕಣ್ಣಲಿ

*

ಸುಟ್ಟಿತು ಮನೆಗಳ ಬೆಂಕಿಯ ಕಾವು
ಅರಿಯಲಾರಿರಿ ನೀವು ಬಡವನ ನೋವು

*

ಕಾಸು ಕಾಸು ಕೂಡಿಸಿದ್ದೆ
ಮಗಳ ಮದುವೆಗೆಂದು
ದೋಚಿಕೊಂಡು ಹೋದರೋ
ನನ್ನ ಕನಸುಗಳ ಕೊಂದು

*

ಕೂಲಿಗೆ ಹೋಗುವ ಬಡವನ ಬಂಧಿಸಿ
ತಳ್ಳಿದರು ಬಳ್ಳಾರಿಯ ಜೈಲಿಗೆ
ಲಾರಿಯ ನಂಬಿದ ಧೀರರು ಎಲ್ಲ
ಇದ್ದರು ಸುಖದಿ ಬಂಗಲೆಯೊಳಗೆ

*

ದ್ವೇಷದ ಕಿಚ್ಚು ತರುವುದು ಬರಿ ಉರಿಯನ್ನು
ಶಾಂತಿಯ ಬೆಳಕು ನೀಗುವುದು ತಮವನ್ನು

ಎಸ್. ಮಾಲತಿ
'ಮಹಾಲಸ' ನಿಲಯ, ಜೋಗ್ ರಸ್ತೆ
ಸಾಗರ-೫೭೭ ೪೦೧

# ಜಾತಿಪದ್ಧತಿಯು ಹಿಂದೂಧರ್ಮದ ಸ್ವಭಾವಜನ್ಯ ಭಾಗವೇ?


ಜಾತಿಪದ್ಧತಿಯು ಹಿಂದೂಧರ್ಮದಲ್ಲಿ ಸ್ವಭಾವಜನ್ಯ(intrinsic)ವಲ್ಲ ಎಂಬುದನ್ನು ಈ ಲೇಖನ ಅಂಶಅಂಶವಾಗಿ ಹಾಗೂ ಸಾಕ್ಷ್ಯಾಧಾರಿತ ದಾಖಲೆಗಳ ಮೂಲಕ ತೋರಿಸಿಕೊಡುತ್ತದೆ. ಹಿಂದೂಧರ್ಮವು – ವೈದಿಕ ಧರ್ಮ ಹಿಡಿದು – ಹುಟ್ಟಿನ ಮೇಲೆ ಆಧರಿಸಿದಂಥ ಜಾತಿಪದ್ಧತಿಯನ್ನು ಬೆಂಬಲಿಸಲಿಲ್ಲವಷ್ಟೆ ಅಲ್ಲ, ತಾತ್ವಿಕವಾಗಿಯೂ ಕಾರ್ಯತಃವೂ ಅದನ್ನು ವಿರೋಧಿಸಲು ತುಂಬ ಶ್ರಮಿಸಿತು ಎಂದು ಈ ಲೇಖನವು ಧರ್ಮಗ್ರಂಥಗಳಿಂದ ವಿಪುಲವಾಗಿ ಉದ್ಧರಣಗಳನ್ನು ನೀಡಿ ಸಾಧಿಸುತ್ತದೆ. ಜಾತಿಪದ್ಧತಿಯು ಹೀಗಿದ್ದಾಗ್ಯೂ ಹುಟ್ಟಿಕೊಂಡಿತು ಹಾಗೂ ಉಳಿದು ಕೊಂಡಿದೆ. ಇದಕ್ಕೆ ಅನೇಕ ಕಾರಣಗಳುಂಟು. ಆ ಕಾರಣಗಳು ಮತಧರ್ಮದೊಂದಿಗೆ ಯಾವ ಸಂಬಂಧವನ್ನೂ ಹೊಂದಿಲ್ಲ.

ಜಾತಿಪದ್ಧತಿಯು ಹಿಂದೂಧರ್ಮದ ಒಂದು ಸ್ವಭಾವಜನ್ಯ ಭಾಗ ಎಂಬ ಮಿಥ್ಯೆಯನ್ನು ನಿರ್ಮೂಲ ಮಾಡುವುದು ಇಂದು ತೀರ ಅವಶ್ಯವಾಗಿದೆ. ಹಿಂದೂ ಸಾಂಪ್ರದಾಯಿಕ ಶಕ್ತಿಗಳು ಈ ಮಿಥ್ಯೆಯಲ್ಲಿ ನಂಬಿಕೆ ಇರಿಸಿದ್ದಾರಷ್ಟೆ ಅಲ್ಲ, ಹಿಂದೂ ಧರ್ಮದ ಹೊರಗಿರುವ ಶಕ್ತಿಗಳು ಮತಾಂತರಗೊಳಿಸುವ ಕಿಡಿಗೇಡಿತನದ ಉದ್ದೇಶದಿಂದ ಈ ಮಿಥ್ಯೆಯಲ್ಲಿ ನಂಬಿಕೆ ಮುಂದುವರಿಸಿದ್ದಾರೆ. ವಿಪರ್ಯಾಸವೆಂದರೆ ಈ ಎರಡು ಶಕ್ತಿಗಳೂ ಪರಸ್ಪರ ವಿರೋಧಿಸುತ್ತವೆ, ಆದರೆ ಒಟ್ಟಾಗಿ ಬೇಕಾದಷ್ಟು ಹಾನಿ ಉಂಟು ಮಾಡುತ್ತಿವೆ. ಅಷ್ಟೇ ಅಲ್ಲ, ಈ ಮಿಥ್ಯೆಯು ಉಚ್ಚ ಹಾಗೂ ನೀಚ ಎಂದು ಹೇಳಲಾಗುವಂಥ ಜಾತಿಗಳ ನಡುವಿನ ಸಂಬಂಧಗಳಿಗೆ ತುಂಬ ಹಾನಿ ಉಂಟುಮಾಡಿದೆ.

ಕೊನೆಗೆ ಲೇಖನವು ಜಾತಿಪದ್ಧತಿಯು ಹಿಂದೂ ಮತಧರ್ಮದೊಂದಿಗೆ ಯಾವ ಸಂಬಂಧವನ್ನೂ ಹೊಂದಿರದೆ, ಸಂಪೂರ್ಣವಾಗಿ ಬೇರೆಯೇ ಆದ ಅಂಶಗಳಿಂದ ಹೇಗೆ ಹುಟ್ಟಿಕೊಂಡಿತು ಮತ್ತು ಉಳಿದುಕೊಂಡಿದೆ, ಎಂಬುದನ್ನು ತೋರಿಸಿಕೊಡುತ್ತದೆ.



ಡಾ|| ಎಂ. ವಿ. ನಾಡಕರ್ಣಿ


**ಜಾತಿಪದ್ಧತಿ ಎಂಬುದರ ಅರ್ಥವೇನು ?**

ಇಲ್ಲಿ ಚರ್ಚಿಸಲಾಗುತ್ತಿರುವ ಜಾತಿಪದ್ಧತಿಯಲ್ಲಿ ಅಸ್ಪೃಶ್ಯತೆಯೂ ಸೇರಿಕೊಂಡಿದೆ. ಆದರೆ ಅವಶ್ಯವಿದ್ದೆಡೆ ಅಸ್ಪೃಶ್ಯತೆಯನ್ನು ಪ್ರತ್ಯೇಕವಾಗಿಯೇ ಉಲ್ಲೇಖಿಸಲಾಗುವುದು. ಅಸ್ಪೃಶ್ಯತೆಯು ಜಾತಿಪದ್ಧತಿಯೊಳಕ್ಕೆ ಕೆಲಕಾಲಾನಂತರ ಬಂದಿತು ಎಂಬುದನ್ನು ನಾವು ಮುಂದೆ ಗಮನಿಸುವೆವು. ಜಾತಿಪದ್ಧತಿಯನ್ನು ಲಾಕ್ಷಣೀಕರಿಸುವಾಗ ಈ ಕೆಳಗಿನ ಅಂಶಗಳು ಅವಶ್ಯವೆಂದು ಸಾಮಾನ್ಯವಾಗಿ ಪರಿಗಣಿಸಲಾಗುತ್ತದೆ.

೧) ಅದು, ಒಂದೊಂದು ವರ್ಣವೂ ಒಂದೊಂದು ಮಾದರಿಯ ವೃತ್ತಿಯೊಂದಿಗೆ ಸಂಬಂಧಿಸಿದ ಒಂದು ಶ್ರಮ ವಿಭಜನೆ ಅಷ್ಟೇ ಅಲ್ಲ, ಹುಟ್ಟಿನಿಂದ ನಿರ್ಧರಿತವಾದ ಹಾಗೂ ವೃತ್ತಿಪರ ಸಾಮಾಜಿಕ ಗತಿಶೀಲತೆಗೆ ಅವಕಾಶ ನೀಡದಂಥ ಶ್ರಮವಿಭಜನೆ ಎಂಬ ಅರ್ಥವನ್ನೂ ಕೊಡುತ್ತದೆ. ಇದೇ ಜಾತಿಯನ್ನು ವರ್ಗದಿಂದ ಪ್ರತ್ಯೇಕಿಸಿ ತೋರಿಸುವಂಥದು. ಜಾತಿಯು ಆನುವಂಶಿಕವಾದಲ್ಲಿ, ವರ್ಗವು ಹಾಗಲ್ಲ– ಕೊನೆಯ ಪಕ್ಷ ತತ್ತ್ವಶಃ.

೨) ಜಾತಿಪದ್ಧತಿಯು ಒಂದು ಗಡುಸಾದ ಪದ್ಧತಿ. ಅದು ಒಂದು ಜಾತಿಯನ್ನು ಇನ್ನೊಂದರಿಂದ ಪ್ರತ್ಯೇಕಿಸಿ ಇರಿಸುತ್ತದೆ. ಅದು ವರ್ಣಸಂಕರದ ವಿಕೃತ ಭೀತಿಯ ಕಾರಣದಿಂದ ಜಾತಿ - ಜಾತಿಗಳ ನಡುವೆ ವಿವಾಹ ಸಂಬಂಧಕ್ಕೆ, ಒಟ್ಟಿಗೆ ಕೂತು ಭೋಜನ ಮಾಡುವುದಕ್ಕೆ ಕೂಡ ನಿರ್ಬಂಧಗಳನ್ನು ಹೇರುತ್ತದೆ. ಒಂದೊಂದು ವರ್ಣವೂ ಅನೇಕ ಜಾತಿಗಳ ಗುಂಪು, ಆದರೆ ಕೆಲವು ವೇಳೆ ಯಾವ ಜಾತಿ ಯಾವ ವರ್ಣಕ್ಕೆ ಸೇರಿದುದು ಎಂಬ ಬಗೆಗೆ ಸಂದಿಗ್ಧತೆ ಇದೆ. ಧರ್ಮ ಕಟ್ಟಳೆಗಳಲ್ಲಿ ಉಲ್ಲೇಖವಾಗಿರುವುದು ವರ್ಣಗಳೇ ಹೊರತು ಜಾತಿಗಳಲ್ಲ. ಆದರೆ ಅಂತರಭೋಜನದ ಹಾಗೂ ಅಂತರವಿವಾಹಗಳ ಮೇಲಿನ ನಿರ್ಬಂಧಗಳು ವರ್ಣಗಳಿಗಷ್ಟೇ ಅಲ್ಲ ಜಾತಿಗಳಿಗೂ ಸಂಬಂಧಿಸಿವೆ.

೩) ಜಾತಿಪದ್ಧತಿಯು ಒಂದು ಶ್ರೇಣೀಕೃತ ವ್ಯವಸ್ಥೆ. ಪರಿಶುದ್ಧತೆಗೆ ಸಂಬಂಧಿಸಿ ಒಂದು ಜಾತಿಯು ಇನ್ನೊಂದರ ಕೆಳಗೆ ಬರುತ್ತದೆ. ಶೂದ್ರರನ್ನೊಳಗೊಂಡ ನಾಲ್ಕನೆಯ ವರ್ಣದ ಮೇಲೆ, ಅದಕ್ಕೂ ಹೆಚ್ಚಾಗಿ ಅಂತ್ಯಜರೆನ್ನಲಾದ ಅಸ್ಪೃಶ್ಯರ ಮೇಲೆ, ಹಲವಾರು ಅನರ್ಹತೆಗಳನ್ನು ಹೊರಿಸಲಾಗಿದೆ. ಆದರೆ ಅಧಿಕಾರ ಹಾಗೂ ಸಂಪತ್ತಿಗೆ ಸಂಬಂಧಿಸಿ – ಕೊನೆಯ ಪಕ್ಷ ಮೇಲ್ಜಾತಿಗಳ ನಡುವೆ – ಅದು ಶ್ರೇಣೀಕೃತವಾಗಿರಲಿಲ್ಲ. ಜಾತಿಪದ್ಧತಿಯನ್ನು ಅರ್ಥ ಮಾಡಿಕೊಳ್ಳಲು ಸ್ಥಾನಮಾನ ಹಾಗೂ ಅಧಿಕಾರಗಳ ನಡುವಿನ ವ್ಯತ್ಯಾಸವು ಮೂಲಭೂತವಾದುದು, ಎಂದು ಡ್ಯುಮಾಂಟ್ ಭಾವಿಸಿದ್ದರು.[೧]

೪) ಜಾತಿಪದ್ಧತಿಯು ಮಾಲಿನ್ಯ(ಮೈಲಿಗೆ) ಮತ್ತು ಪರಿಶುದ್ಧತೆಯ (ಮಡಿ) ಕಲ್ಪನೆಯೊಂದಿಗೆ ಸಂಬಂಧಿಸಿದೆ. ಬ್ರಾಹ್ಮಣರ ಪಾರಿಶುದ್ಧತೆ ಪರಮೋಚ್ಚ, ಅನಂತರ ಕ್ಷತ್ರಿಯರು, ವೈಶ್ಯರು, ಕೊನೆಗೆ ಶೂದ್ರರ ಮಟ್ಟದಲ್ಲಿ ಈ ಪಾರಿಶುದ್ಧತೆ ಕ್ರಮೇಣ ಇಳಿಮುಖವಾಗುತ್ತ ಹೋಗುತ್ತದೆ. ಅಸ್ಪೃಶ್ಯರನ್ನು ಅತ್ಯಂತ ಹೆಚ್ಚು ಅಪರಿಶುದ್ಧರು, ಮಲಿನರು, ಎಂದು ನೋಡಲಾಗುತ್ತದೆ. ಅಸ್ಪೃಶ್ಯರನ್ನು ಮುಟ್ಟಿದರೆ ಸಾಕು ಅದು ಶೂದ್ರರನ್ನೂ ಒಳಗೊಂಡಂತೆ ಇತರರನ್ನು ಮಲಿನಗೊಳಿಸುತ್ತದೆಂಬ ಭಾವನೆ ಇದೆ. ಅಸ್ಪೃಶ್ಯರ ನಡುವೆಯೂ ಒಂದು ರೀತಿಯ ಶ್ರೇಣೀಕರಣ ಹಾಗೂ ವಿಭಿನ್ನ ಮಾಲಿನ್ಯ ಮಟ್ಟಗಳ ವ್ಯವಸ್ಥೆ ಇದೆ. ಉದಾಹರಣೆಗೆ, ಭಂಗಿಗಳು (ಜಾಡಮಾಲಿಗಳು). ಇವರು ಮಹಾರ್ (ಕೃಷಿ ಕಾರ್ಮಿಕರು)ಗಳಿಗಿಂತ ಹೆಚ್ಚು ಮಲಿನರೆಂದು ಪರಿಗಣಿಸಲಾಗಿದೆ. ಆರಂಭದಲ್ಲಿ ನೈರ್ಮಲ್ಯವನ್ನು ಕಾಪಾಡಿಕೊಂಡು ಬರುವ ಅಗತ್ಯವನ್ನು ಆಧರಿಸಿ ಈ ಪರಿಶುದ್ಧತೆಗೆ ಎದುರು ಮಾಲಿನ್ಯ ಎಂಬ ಕಲ್ಪನೆ ಹುಟ್ಟಿದ್ದಿರಬೇಕು. ಆದರೆ ಬೇಗನೆಯೇ ಅದೊಂದು ಸಾಂಸ್ಥಿಕ ರೂಪವಾಗಿ ಬೆಳೆಯಿತು. ಮಾಲಿನ್ಯವನ್ನು ಹುಟ್ಟಿನೊಂದಿಗೆ ಜೋಡಿಸಲಾಯಿತು. ಮೇಲು ಜಾತಿಗಳವರು ಮಾಲಿನ್ಯಗೊಂಡಾಗ ಸ್ನಾನ ಮತ್ತು ಅಂಥವೇ ಇತರ ಪ್ರಾಯಶ್ಚಿತ್ತದ ಕ್ರಮಗಳಿಂದ ಮಾಲಿನ್ಯವನ್ನು ತೊಡೆದು ಹಾಕಿಕೊಳ್ಳುವುದು ಸಾಧ್ಯವಿದ್ದಿತು. ಮಡಿ ಹಾಗೂ ಮೈಲಿಗೆ ಕಲ್ಪನೆಯನ್ನು ವರ್ಣಸಂಕರವನ್ನು ತಪ್ಪಿಸಲು ಮತ್ತು ಅದಕ್ಕೆ ಅಡ್ಡಿಪಡಿಸಲು ಒಂದು ಪ್ರಬಲ ಅಸ್ತ್ರವನ್ನಾಗಿ ವಿಕಾಸಗೊಳಿಸಲಾಯಿತು.

೫) ನಾನಾ ರೀತಿಯ ಬಹಿಷ್ಕಾರ ಹಾಗೂ ನಿರ್ಬಂಧಗಳಿಂದ ಕೂಡಿದ ಈ ಇಡೀ ಜಾತಿಪದ್ಧತಿಯನ್ನು ಧಾರ್ಮಿಕ ಅಥವಾ ಧರ್ಮ ಕಟ್ಟಳೆಯ ಮೂಲಕ ಪ್ರಮಾಣೀಕರಿಸಲಾಯಿತು, ಅದಕ್ಕೆ ಧಾರ್ಮಿಕ ಸಮರ್ಥನೆ ಒದಗಿಸಲಾಯಿತು.

೬) ಈ ಇಡೀ ಜಾತಿಪದ್ಧತಿಯ ಅಡಿಪಾಯದಲ್ಲಿ ಒಂದು ಉತ್ಪಾದನಾ ವ್ಯವಸ್ಥೆ ಇದೆ. ಇದು ದೊಡ್ಡ ಮಾರುಕಟ್ಟೆ ಅಭಿಮುಖವಾಗಿರದೆ ಜೀವನೋಪಾಯ (ಅಸ್ತಿತ್ವ)ದ ಅಭಿಮುಖವಾಗಿದ್ದು ಸ್ಥಳೀಯ ಆಧಾರ ಹೊಂದಿದೆ. ಉತ್ಪಾದನಾ ಸಂಬಂಧಗಳು ಆಶ್ರಯದಾತ - ಆಶ್ರಿತ ಮಾದರಿಯದಾಗಿದ್ದು ಪರಸ್ಪರಾವಲಂಬನದ ಮೇಲೆ ಆಧಾರಗೊಂಡಿವೆ. ಇಂಥ ಪದ್ಧತಿಯು ದೊಡ್ಡ ಮಾರುಕಟ್ಟೆಯನ್ನು ದೃಷ್ಟಿಯಲ್ಲಿಟ್ಟುಕೊಂಡಿರದೆ ಸ್ಥಳೀಯ ಅಗತ್ಯಗಳನ್ನು ಪೂರೈಸುವ ಗುರಿ ಹೊಂದಿರುವುದರಿಂದ ಆರ್ಥಿಕ ಮಿಗುತಾಯವನ್ನು ಅಥವಾ ಬಂಡವಲವನ್ನು ಉಂಟುಮಾಡುವುದಕ್ಕೆ ಹಾಗೂ ಅದನ್ನು ಬಳಸಿಕೊಳ್ಳುವುದಕ್ಕೆ ಅನುವು ಮಾಡಲಿಲ್ಲ.

## ಮಿಥ್ಯೆ ನಿರ್ಮೂಲನಕ್ಕೆ ನಮ್ಮ ಮಾರ್ಗ

ಮೇಲೆ ನಿರೂಪಿಸಿರುವ ಲಕ್ಷಣಗಳೆಲ್ಲವನ್ನೂ ಸಾಮೂಹಿಕವಾಗಿ ಇಲ್ಲವೇ ಒಂಟಿಯಾಗಿ ಹೊಂದಿರುವಂತೆ ಜಾತಿಪದ್ಧತಿಯು ಸಮಾಜದಲ್ಲಿದ್ದರೂ ಅದು ಹಿಂದೂಧರ್ಮದ ಒಂದು ಅವಿಭಾಜ್ಯ ಅಂಗವಾಗಿತ್ತು ಎಂಬ ಮಿಥ್ಯೆಯನ್ನು ನಾನು ಸಂಪೂರ್ಣವಾಗಿ ತಳ್ಳಿಹಾಕುತ್ತೇನೆ. ಹಿಂದೂಧರ್ಮ ಎಂದರೆ ಸತ್ಯ ಶೋಧನೆ, ಅಹಿಂಸೆ, ಎಲ್ಲ ಜೀವಿಗಳ ಬಗೆಗೆ ಕರುಣೆ ಹಾಗೂ ಸಹನೆ, ಎಂದು ನಿರೂಪಿಸಬಹುದು. ಗಾಂಧೀಜಿಯವರೂ ಹೀಗೆಯೇ ನಿರೂಪಿಸಿದುದು. ಸತ್ಯಶೋಧನೆಗೆ ಬದ್ಧವಾಗಿರುವುದರಿಂದ ಅದು ಔದಾರ್ಯದ ಗುಣವನ್ನೂ ಹೊಂದಿದೆ. ಹಿಂದೂಧರ್ಮ ಒಂದು ಕ್ರಿಯಾಶೀಲ ಧರ್ಮ. ಸದಾಕಾಲಕ್ಕೂ ಒಂದೇ ಆಗಿರುವಂತೆ ಜಡವಾದುದಲ್ಲ. ಆದ್ದರಿಂದ ಅದನ್ನು ವೇದಗಳ ಹಾಗೂ ಉಪನಿಷತ್ತುಗಳ ಧರ್ಮದೊಂದಿಗೆ ಮಾತ್ರ, ಅಥವಾ ಧರ್ಮಶಾಸ್ತ್ರಗಳಿಂದ ಪ್ರತಿಪಾದಿತವಾದ ಧರ್ಮದೊಂದಿಗೆ ಮಾತ್ರ, ಇಲ್ಲವೇ ಮೂವರು ಶ್ರೇಷ್ಠ ಆಚಾರ್ಯರುಗಳಾದ ಶಂಕರ, ರಾಮಾನುಜ ಹಾಗೂ ಮಾಧ್ವರ ಧರ್ಮದೊಂದಿಗೆ ಮಾತ್ರ ವ್ಯಾವರ್ತಕವಾಗಿ ಸಮೀಕರಿಸುವುದು ಸಾಧ್ಯವಿಲ್ಲ. ಹಾಗೆಯೇ ಅದನ್ನು ಮಧ್ಯಯುಗೀನ ಹಿಂದೂಧರ್ಮ ಅಥವಾ ಆಧುನಿಕ ಹಿಂದೂಧರ್ಮದೊಂದಿಗೂ ಮಾತ್ರ ಸಮೀಕರಿಸಲಾಗದು. ಈ ಎಲ್ಲ ಮಜಲುಗಳೂ ಹಿಂದೂಧರ್ಮವನ್ನು ಪ್ರತಿನಿಧಿಸುತ್ತವೆ, ಅದರ ಬೆಳವಣಿಗೆಗೆ ಕಾಣಿಕೆ ನೀಡಿವೆ. ಅಷ್ಟೇ ಅಲ್ಲ, ಹಿಂದೂಧರ್ಮದ ಈ ವಿಭಿನ್ನ ಮಜಲುಗಳ ನಡುವೆ ಅಸಂಗತತೆ ಏನೂ ಇಲ್ಲ, ಒಂದೊಂದೂ ತನ್ನ ಹಿಂದಿದ್ದುದರಿಂದ ಸ್ಫೂರ್ತಿ ಪಡೆದಿದೆ. ಈ ಅರ್ಥದಲ್ಲಿ ಹಿಂದೂಧರ್ಮದಲ್ಲಿ ಬದಲಾವಣೆಯೂ ಇದೆ, ನಿರಂತರತೆ ಅಥವಾ ಸಾಂಗತ್ಯವೂ ಇದೆ.

ಮಧ್ಯಯುಗದ ಭಕ್ತಿ ಚಳವಳಿಯು ಜಾತಿಪದ್ಧತಿಗೆ ವಿರುದ್ಧವಾಗಿದ್ದಿತು ಎಂಬುದನ್ನು ಎಲ್ಲರೂ ನಿರ್ವಿವಾದವಾದ ವಾಸ್ತವಾಂಶವೆಂದು ಅಂಗೀಕರಿಸಿದ್ದಾರೆ. ಅಂತೆಯೇ ಸ್ವಾಮಿ ವಿವೇಕಾನಂದ, ಅರವಿಂದ ಮತ್ತಿತರರು ವಿವರಿಸಿದ ಆಧುನಿಕ ಹಿಂದೂಧರ್ಮವೂ ಜಾತಿಪದ್ಧತಿಯನ್ನು ತಿರಸ್ಕರಿಸಿದೆ ಎಂಬುದೂ ಎಲ್ಲರಿಗೂ ತಿಳಿದ ಸಂಗತಿಯೇ. ಆದ್ದರಿಂದ ಈ ಪ್ರಬಂಧವು ತನ್ನ ಪರಿಶೀಲನೆಯನ್ನು ಹಿಂದೂಧರ್ಮದ ಆದಿಮ ಅಥವಾ ವೈದಿಕ ಮಜಲುಗಳ ಮೇಲೆ ಕೇಂದ್ರೀಕರಿಸಿದೆ. ವೇದೋಪನಿಷತ್ತುಗಳಿಂದ ಒಳಗೂಡಿದ ಈ ಆದಿಮ ಹಿಂದೂಧರ್ಮವು ಜಾತಿಪದ್ಧತಿಗೆ ಬೆಂಬಲ ನೀಡಿದ್ದಿತು ಎಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಈ ಮಿಥ್ಯೆಯನ್ನೇ ಈ ಪ್ರಬಂಧ ನಿರ್ಮೂಲಗೊಳಿಸುವ ಗುರಿ ಹೊಂದಿರುವುದು. ಹಾಗಾಗಿ ನಾವು ಆದಿಮ ಮಜಲುಗಳತ್ತ ಹೆಚ್ಚಿನ ಗಮನ ನೀಡಿರುವುದು ಈ ಮಜಲುಗಳು ಮಾತ್ರ ಹಿಂದೂಧರ್ಮದ ನಿರೂಪಣೆ ನೀಡುತ್ತವೆ ಎಂಬ ಕಾರಣದಿಂದಲ್ಲ. ಆದರೆ ಹಿಂದೂಧರ್ಮವು ಜಾತಿಪದ್ಧತಿಯನ್ನು ಬೆಂಬಲಿಸುತ್ತದೆ ಎಂದು ಪ್ರತಿಪಾದಿಸುವವರು ಈ ಮಜಲುಗಳಿಗೆ ಉಲ್ಲೇಖ ಮಾಡುತ್ತಾರೆ ಎಂಬುದರಿಂದಾಗಿ ಅವನ್ನು ಪರಿಗಣಿಸಲಾಗಿದೆ.

ಮಿಥ್ಯೆಯನ್ನು ಈ ಕೆಳಗಿನ ರೀತಿಯಲ್ಲಿ ನಿರ್ಮೂಲ ಮಾಡಲಾಗಿದೆ :

೧) ಹಿಂದೂಧರ್ಮಕ್ಕೂ ಜಾತಿಪದ್ಧತಿಗೂ ನಡುವೆ ಪ್ರಾದೇಶಿಕವಾಗಿ ಅಥವಾ ಐತಿಹಾಸಿಕವಾಗಿ ಯಾವ ರೀತಿಯ ಪ್ರಬಲ ಪರಸ್ಪರ ಸಂಬಂಧವೂ ಇಲ್ಲ ಎಂದು ತೋರಿಸಿಕೊಡುವ ಮೂಲಕ.

೨) ಹಿಂದೂ ಸಮಾಜದಲ್ಲಿ ಜಾತಿಪದ್ಧತಿ ಹುಟ್ಟಿಕೊಂಡ ನಂತರವೂ ಗಣನೀಯವಾದಷ್ಟು ಸಾಮಾಜಿಕ ಹಾಗೂ ವೃತ್ತಿಸಂಬಂಧಿ ಗತಿಶೀಲತೆ ಇದ್ದಿತು; ಜಾತಿಪದ್ಧತಿಯನ್ನು ನಿರೂಪಿಸುವ ಮೇಲೆ ಪಟ್ಟಿ ಮಾಡಿದ ಯಾವೊಂದು ಲಕ್ಷಣವನ್ನೂ ಆಚರಣೆಯಲ್ಲಿ, ಅದರಲ್ಲೂ ಆದಿಮ ಹಿಂದೂಧರ್ಮದ ಕಾಲಾವಧಿಯಲ್ಲಿ ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿರಲಿಲ್ಲ– ಎಂಬುದನ್ನು ತೋರಿಸಿಕೊಡುವ ಮೂಲಕ.

೩) ಹಿಂದೂ ತತ್ತ್ವಜ್ಞಾನವೂ ಜಾತಿಪದ್ಧತಿಯನ್ನು ಎಷ್ಟು ಮಾತ್ರವೂ ಬೆಂಬಲಿಸುತ್ತಿರಲಿಲ್ಲ. ವಾಸ್ತವವಾಗಿ ಅದು ಹುಟ್ಟಿನಮೇಲೆ ಆಧರಿಸಿದ ಜಾತಿಪದ್ಧತಿಯ ವಿರುದ್ಧವಾಗಿದ್ದಿತು, ಎಂಬುದನ್ನು ತೋರಿಸಿಕೊಡುವ ಮೂಲಕ.

೪) ಇಷ್ಟೇ ಅಲ್ಲದೆ ಹಿಂದೂಧರ್ಮವು ಜಾತಿಪದ್ಧತಿ ಅನೈತಿಕವಾದುದು, ಅನೂರ್ಜಿತವಾದುದು ಎಂಬುದನ್ನು ಜನರ ಮನಸ್ಸಿನಲ್ಲಿ ಮೂಡಿಸಲು ನಾನಾ ರೀತಿಯ ದಂತಕಥೆಗಳನ್ನು (Legends) ಸೃಷ್ಟಿಸಿತು ಎಂಬುದನ್ನು ತೋರಿಸಿಕೊಡುವ ಮೂಲಕ.

೫) ಹಿಂದೂಧರ್ಮದ ಚೌಕಟ್ಟಿನೊಳಗೇ ಭಕ್ತಿ ಚಳವಳಿಗಳಿಂದ ಹಿಡಿದು ಹೆಚ್ಚು ಆಧುನಿಕ ಚಳವಳಿಗಳವರೆಗೂ ಜಾತಿ ವಿರುದ್ಧದ ಹಲವಾರು ಚಳವಳಿಗಳು ಜರುಗಿದವು ಎಂಬುದನ್ನು ತೋರಿಸಿಕೊಡುವ ಮೂಲಕ.

೬) ಹಿಂದೂ ತತ್ವಜ್ಞಾನ ವಿರೋಧಿಸಿದರೂ, ಹಿಂದೂ ಧರ್ಮಕ್ಕೆ ಯಾವ ರೀತಿಯಲ್ಲೂ ಸಂಬಂಧಿಸದ ಅಂಶಗಳ ಕಾರಣದಿಂದಾಗಿ ಜಾತಿಪದ್ಧತಿ ಹುಟ್ಟಿಕೊಂಡಿತು ಮತ್ತು ಉಳಿದುಕೊಂಡಿದೆ ಎಂಬುದನ್ನು ತೋರಿಸಿಕೊಡುವ ಮೂಲಕ.

## ಹಿಂದೂಧರ್ಮಕ್ಕೂ ಜಾತಿಪದ್ಧತಿಗೂ ನಡುವೆ ಅನ್ಯೋನ್ಯ ಸಂಬಂಧವಿಲ್ಲ

ಹಿಂದೂಧರ್ಮಕ್ಕೂ ಜಾತಿಪದ್ಧತಿಗೂ ನಡುವೆ ಅನ್ಯೋನ್ಯ ಸಂಬಂಧವಿಲ್ಲ ಎಂಬ ಹೇಳಿಕೆ ಅನೇಕರಿಗೆ ಆಶ್ಚರ್ಯಕರವೆನಿಸಬಹುದು. ಜಾತಿಪದ್ಧತಿಯ ಬಗೆಗೆ ಅತ್ಯಂತ ಅಧಿಕಾರಯುಕ್ತ ವಕ್ತಾರನೆನಿಸಿಕೊಂಡ ಡ್ಯೂಮಾಂಟರವರೂ, ಅನಂತರ ಹಿಂದೂಧರ್ಮದ ಮೆಚ್ಚುಗೆಗಾರರೇನೂ ಆಗಿರದ ಗೈಲ್ ಓಮ್‌ವೆಟ್‌ರವರೂ, ನಿಷ್ಕೃಷ್ಟವಾಗಿ ಇದೇ ಮಾತುಗಳಲ್ಲದಿದ್ದರೂ, ಒಟ್ಟಿನಲ್ಲಿ ವ್ಯಕ್ತಪಡಿಸಿರುವ ವಿಚಾರಗಳ ಸಾರಾಂಶವೂ ಇದುವೇ ಆಗಿದೆ. ಡ್ಯೂಮಾಂಟ್‌ರು ಅಸ್ಪೃಶ್ಯ ಜಾತಿಗಳ ನಡುವೆಯೂ, ಭಾರತದ ವಿಭಿನ್ನ ಭಾಗಗಳಲ್ಲಿ ಕ್ರಿಶ್ಚಿಯನ್ನರ ಮಧ್ಯೆಯೂ, ಜಾತಿ ಭೇದಭಾವಗಳಿರುವುದಕ್ಕೆ ಉಲ್ಲೇಖ ಮಾಡಿದ್ದಾರೆ. ಅಸ್ಪೃಶ್ಯ ಕ್ರಿಶ್ಚಿಯನ್ನರಿಗೆ ಚರ್ಚುಗಳಲ್ಲಿ ಪ್ರತ್ಯೇಕ ಆಸನಗಳನ್ನು ಏರ್ಪಡಿಸಿರುವುದು, ಅವರಿಗೇ ಪ್ರತ್ಯೇಕ ಸ್ಮಶಾನಗಳನ್ನು ನಿರ್ಮಿಸಿಕೊಟ್ಟಿರುವುದು ಅವರ ವಿರುದ್ಧದ ಈ ತಾರತಮ್ಯ ಭಾವನೆಗೆ ದ್ಯೋತಕವಾಗಿದೆ. ಇಂದೂ ವೃತ್ತಪತ್ರಿಕೆಗಳಲ್ಲಿ ಕ್ಯಾಥೊಲಿಕ್ ಬ್ರಾಹ್ಮಣ ವಧು ವರರಿಗೆ 'ಕ್ಯಾಥೊಲಿಕ್ ಬ್ರಾಹ್ಮಣ' ವರ-ವಧುಗಳು ಬೇಕೆನ್ನುವ ಜಾಹಿರಾತುಗಳನ್ನು ನೋಡಬಹುದು. ಸಮಾನತಾವಾದಿ ಧರ್ಮವೆಂದು ಭಾವಿಸಲಾದ ಇಸ್ಲಾಮ್ ಕೂಡ ಜಾತಿ ವೈಪರೀತ್ಯಗಳಿಂದ ಮುಕ್ತವಾಗಿಲ್ಲ – ಕೊನೆಯ ಪಕ್ಷ ದಕ್ಷಿಣ ಏಷ್ಯದಲ್ಲಿ. ಉಚ್ಚ ಜಾತಿಯವರೆಂದು ಭಾವಿಸಲಾದ 'ಅಷ್ರಾಫ್' ಮತ್ತು ಅವರಿಗಿಂತ ಸ್ವಲ್ಪ ಕೆಳ ದರ್ಜೆಯ ಉಳಿದವರ ನಡುವೆ ಜಾತಿಗೋಡೆ ಇರುವುದರ ಬಗ್ಗೆ ಡ್ಯೂಮಾಂಟರೇ ಉಲ್ಲೇಖ ಮಾಡಿದ್ದಾರೆ. 'ಅಷ್ರಾಫ್ - ಅಲ್ಲದವರ' ಮಧ್ಯೆಯೇ ಮೂರು ಮಟ್ಟಗಳ ಸ್ಥಾನಮಾನದ ಜನರಿದ್ದಾರೆ : "(೧) ಪರಿವರ್ತಿತರಾದ ಮೇಲ್ಜಾತಿಯ ಜನ. ಇವರು ಪ್ರಧಾನವಾಗಿ ರಜಪೂತರು (ಅಷ್ರಾಫ್ ಪಂಗಡದೊಳಕ್ಕೆ ಸೇರಿಸಿಕೊಂಡಿರುವವರನ್ನು ಬಿಟ್ಟು). (೨) ಹಿಂದೂಗಳ ಕೈಕಸಬುದಾರರ ಜಾತಿಗಳಿಗೆ ಅನುಗುಣವಾದಂಥ ಅಧಿಕ ಸಂಖ್ಯೆಯ ವೃತ್ತಿಪರ ಗುಂಪುಗಳು... (೩) ಪರಿವರ್ತಿತರಾದ, ತಮ್ಮ ವೃತ್ತಿ ಕ್ರಿಯೆಗಳನ್ನು ಉಳಿಸಿಕೊಂಡಿರುವಂಥ, ಅಸ್ಪೃಶ್ಯರು. ಈ ವೃಂದಗಳು ನಿಜಕ್ಕೂ ಅಂತಃವೈವಾಹಿಕ (Endogamous) ವೃಂದಗಳೆಂದೇ ಕಂಡುಬರುತ್ತದೆ..."[೩] ಅಷ್ರಾಫ್‌ರ ಮತ್ತು ಅಷ್ರಾಫ್- ಅಲ್ಲದವರ ನಡುವೆಯೂ, ಅವರ ಸ್ಥಾನಮಾನದ ಕಾರಣದಿಂದಾಗಿ, ಸಹಭೋಜನ ಇಲ್ಲ.[೪] ಶ್ರೀಲಂಕದ ಬೌದ್ಧ ಜನರ ಮಧ್ಯೆಯೂ ಜಾತಿಪದ್ಧತಿ ಇದೆ. ತಾವು ವೇದಗಳನ್ನು ವರ್ಣ ಧರ್ಮವನ್ನು ಒಪ್ಪದ ಕಾರಣ ತಾವು ಹಿಂದೂಗಳಲ್ಲ ಎಂದು ಕೆಲವು ಲಿಂಗಾಯತರು ವಾದಿಸುತ್ತಾರೆ. ಆದರೂ ಅವರೂ ಜಾತಿಗಳಿಂದ ಮತ್ತು ಮೇಲುಕೀಳು ತಾರತಮ್ಯಗಳಿಂದ ಮುಕ್ತರಾಗಿಲ್ಲ. ಭಕ್ತಿ ಚಳವಳಿಯ ಮುಂದಾಳಾಗಿದ್ದ ಬಸವೇಶ್ವರರು (ಬಸವಣ್ಣ) – ನಿಜಕ್ಕೂ ಜಾತಿಪದ್ಧತಿಯ ವಿರುದ್ಧವಿದ್ದರು. ಆದರೆ ದುರದೃಷ್ಟವಶಾತ್ ಅವರ 'ಅನುಯಾಯಿಗಳ' ಮಧ್ಯೆಯೂ ಜಾತಿಪದ್ಧತಿ ಹೋಗಲಿಲ್ಲ. ಇದಕ್ಕೆ ಪ್ರತಿಯಾಗಿ ಭಾರತದ ಹೊರಗೆ ಸುರಿನಾಮ್, ವೆಸ್ಟ್ ಇಂಡೀಸ್, ಮಾರಿಷಸ್, ಬಾಲಿ, ಫಿಜಿ ಮತ್ತಿತರ ಕೇಂದ್ರಗಳಲ್ಲಿ ಅನೇಕ ತಲೆಮಾರುಗಳಿಂದ ಬೀಡು ಬಿಟ್ಟಿರುವ ಹಿಂದೂಗಳ ಮಧ್ಯೆ ಜಾತಿಪದ್ಧತಿ ಬಹಳ ದುರ್ಬಲವಾಗಿದೆ, ಬಹುಮಟ್ಟಿಗೆ ಇಲ್ಲವೇ ಇಲ್ಲವಾಗಿದೆ, ಎಂದು ಗೇಲ್ ಓಮ್‌ವೆಟ್ ಎತ್ತಿ ತೋರಿಸುತ್ತಾರೆ. ಅಲ್ಲಿ ವಿವಿಧ ಜಾತಿಗಳ ನಡುವೆ ಅಂತರ-ಭೋಜನ ಹಾಗೂ ಅಂತರ-ವಿವಾಹಗಳೂ ಒಳಗೊಂಡಂತೆ ಅಂತರ-ಮಿಶ್ರಣ ಹೆಚ್ಚು ಮುಕ್ತವಾಗಿ ನಡೆಯಿತು. ಅಲ್ಲಿ ಜಾತಿಪದ್ಧತಿಯನ್ನು ಯಾರೂ ಹೆಚ್ಚು ಗಹನವಾಗಿ ಪರಿಗಣಿಸಲಿಲ್ಲ. ಆದರೂ ಅಲ್ಲೂ ಪ್ರಾದೇಶಿಕ ಜಾತಿಗಳಂತೆ ಕಂಡುಕೊಂಡ ಗುಂಪುಗಳು (ಮಾರ್ವಾಡಿಗಳು ಮತ್ತು ಗುಜರಾತಿಗಳಂಥ ಗುಂಪುಗಳು) ಕಣ್ಮರೆಯಾಗಿಲ್ಲ. ಆದ್ದರಿಂದ ಜಾತಿಯು ವಾಸ್ತವವಾಗಿ ಹಿಂದೂಧರ್ಮಕ್ಕಿಂತ ಹೆಚ್ಚಾಗಿ ದಕ್ಷಿಣ ಏಷ್ಯಾದ ಒಂದು ಲಕ್ಷಣವಾಗಿದೆ, ಅದರ ಸಾಮಾಜಿಕ ಹಾಗೂ ಆರ್ಥಿಕ ವೈಶಿಷ್ಟ್ಯಗಳ ಕಾರಣದಿಂದಾಗಿ ಈ ಪ್ರದೇಶದಲ್ಲಿ ಬೇರುಬಿಟ್ಟಿದೆ, ಎಂದು ಗೇಲ್ ಓಮ್‌ವೆಟ್ ಹೇಳುತ್ತಾರೆ.

ಈಗ ನಾವು ಐತಿಹಾಸಿಕವಾಗಿ ಹಿಂದೂಧರ್ಮಕ್ಕೂ ಜಾತಿಪದ್ಧತಿಗೂ ನಡುವೆ ಸಂಬಂಧ ಇಲ್ಲದಿದ್ದನ್ನು ನೋಡಬಹುದು. ನಾಲ್ಕು ವರ್ಣಗಳ ಮೊದಲ ಉಲ್ಲೇಖ ಋಗ್ವೇದದ ಹತ್ತನೆಯ ಮಂಡಲದಲ್ಲಿ ಪುರುಷ ಸೂಕ್ತದ ಎರಡು ಶ್ಲೋಕಗಳಲ್ಲಿ (ಇದನ್ನು ಕೆಳಗೆ ಮತ್ತೊಂದು ವಿಭಾಗದಲ್ಲಿ ಉದ್ಧರಿಸಲಾಗಿದೆ) ಬರುತ್ತದೆ. ಈ ವಿಷಯಕ್ಕೆ ಸಂಬಂಧಿಸಿ ಗಾಢ ಸಂಶೋಧನೆ ನಡೆಸಿರುವ ಹಲವಾರು ವಿದ್ವಾಂಸರ ಪ್ರಕಾರ ಹತ್ತನೆಯ ಮಂಡಲವು, ಕಾಲಮಾಪನಕ್ಕನುಸಾರವಾಗಿ, ಕೊನೆಯಲ್ಲಿ ರಚಿತವಾದುದು. ಇದಕ್ಕೆ ಮುನ್ನ ವೈದಿಕ ಸಮಾಜದಲ್ಲಿ ವರ್ಣ ವ್ಯವಸ್ಥೆ ಇರಲಿಲ್ಲ ಎಂಬುದಕ್ಕೆ ಸಂಬಂಧಿಸಿ ಉತ್ತಮ ಒಮ್ಮತವಿದೆ. ಕೃತಯುಗದಲ್ಲಿ ಜಾತಿ ಇರಲಿಲ್ಲ, ಆದರೆ ಮಾನವ ಜೀವಿಗಳ ಒಂದೇ ಒಂದು ವರ್ಣವಿದ್ದಿತು – ವೈವಸ್ವತ ಮನುವಿನ ಮಕ್ಕಳ ವರ್ಣವಿದ್ದಿತು – ಎಂದು ಮಹಾಭಾರತ ಹಾಗೂ ಭಾಗವತ ಪುರಾಣಗಳೂ ತಿಳಿಸುತ್ತವೆ.[೫] ಇದರಿಂದಲೇ ಭಾರತದ ಎಲ್ಲ ಭಾಷೆಗಳಲ್ಲೂ ಜನಪ್ರಿಯವಾದ ಮಾನವ ಎಂಬ

ಪದ ಬಂದಿರುವುದು. ಜಾತಿ ಇರದಿದ್ದಂಥ ಗತ ಸುವರ್ಣಯುಗದ ಜನಾಂಗೀಯ ಸ್ಮೃತಿಯನ್ನು ಪುರಾಣಗಳೂ ಇತರ ಹಿಂದೂ ಧರ್ಮ ಗ್ರಂಥಗಳೂ ಕಾಪಾಡಿಟ್ಟಿವೆ.

ಡಾ॥ ಅಂಬೇಡ್ಕರ್‌ರವರ ಪ್ರಕಾರ, ವೈದಿಕ ಸಮಾಜದಲ್ಲಿ ಮೂರು ವರ್ಣಗಳಷ್ಟೆ ಇದ್ದವು, ನಾಲ್ಕನೆಯ ಶೂದ್ರರ ವರ್ಣ ಇರಲಿಲ್ಲ, ಆರ್ಥಿಕತೆಯು ಶ್ರಮ ವಿಭಜನೆಗೆ ಅವಕಾಶ ಕೊಡುವಷ್ಟು ಮುಂದುವರಿದಿದ್ದಿತು, ಆದರೆ ಶ್ರೇಣೀಕೃತ ವ್ಯವಸ್ಥೆ ಇರಲಿಲ್ಲ ಎನ್ನುತ್ತಾರೆ ಅವರು. ಅವರು ಹಿಂದೂ ಪಠ್ಯಗಳಲ್ಲಿರುವ ಇತರ ವಿಶ್ವಸೃಷ್ಟಿಕತೆಗಳನ್ನು ಉಲ್ಲೇಖಿಸುತ್ತಾರೆ. ಆದರೆ ಅವೆಲ್ಲವೂ ಜಾತ್ಯಾತೀತವಾದವು. ಅವುಗಳಲ್ಲಿ ಶ್ರೇಣೀಕೃತ ವ್ಯವಸ್ಥೆಯ ಒಂದು ಸೂಕ್ಷ್ಮ ಸೂಚನೆಯೂ ಇಲ್ಲ, ದೈವ ಮೂಲದ ಒಂದು ಸೂಕ್ಷ್ಮ ಸೂಚನೆಯೂ ಇಲ್ಲ, ಆದ್ದರಿಂದ ಪುರುಷಸೂಕ್ತದಲ್ಲಿನ ಎರಡು ಶ್ಲೋಕಗಳು ಪ್ರಕ್ಷೇಪಗಳು, ಜಾತಿಪದ್ಧತಿ ಸ್ಥಾಪಿತವಾದ ಬಹುಕಾಲದ ನಂತರ ಸೇರಿಸಲ್ಪಟ್ಟವು, ಎಂದವರು ಭಾವಿಸುತ್ತಾರೆ.[೬] ಅವರ ಪ್ರಕಾರ ಶೂದ್ರರು ಕ್ಷತ್ರಿಯರ ಒಂದು ಭಾಗವಾಗಿದ್ದರು, ಆರ್ಯನ್ ಸಮಾಜದ ಒಂದು ಭಾಗವೇ ಆಗಿದ್ದರು. ಶೂದ್ರರು ಮತ್ತು ಅಸ್ಪೃಶ್ಯರು ಮೂಲತಃ ಆರ್ಯರಿಂದ ಪರಾಜಿತರಾದ ಆರ್ಯೇತರರು, ಅವರನ್ನು ವೈದಿಕ ಸಮಾಜದೊಳಕ್ಕೆ ಸೇರಿಸಿಕೊಂಡು ಅವರಿಗೆ ನೀಚ ದರ್ಜೆ ನೀಡಲಾಯಿತು, ಎಂಬ ಪಾಶ್ಚಿಮಾತ್ಯ ವಿದ್ವಾಂಸರ ಸಿದ್ಧಾಂತವನ್ನು ಅವರು ಒಪ್ಪುವುದಿಲ್ಲ. ತದ್ವಿರುದ್ಧವಾಗಿ, ಶೂದ್ರರು ಆಳುವ ಸಮಾಜದ ಒಂದು ಭಾಗವೇ ಆಗಿದ್ದರು, ಅವರಲ್ಲಿ ಅನೇಕರು ರಾಜರುಗಳೂ ಆಗಿದ್ದರು. ಕೆಲವು ಶೂದ್ರ ರಾಜರುಗಳ ಕೈಗಳಲ್ಲಿ ಕಿರುಕುಳ ಹಾಗೂ ಅವಹೇಳನ ಅನುಭವಿಸಿದುದಕ್ಕೆ ಪ್ರತಿಯಾಗಿ ಸೇಡು ತೀರಿಸಿಕೊಳ್ಳಲು ಬ್ರಾಹ್ಮಣರು ಅವರಿಗೆ ಉಪನಯನ ಮತವಿಧಿ ನಿರಾಕರಿಸಿದಾಗ ಅವರು ಸಮಾಜದ ಅವಕೃಪೆಗೊಳಗಾಗಿ ನಾಲ್ಕನೆಯ ವರ್ಣವಾಗಿ ರೂಪುಗೊಂಡರು, ಎನ್ನುತ್ತಾರೆ ಡಾ॥ ಅಂಬೇಡ್ಕರ್. ಅಸ್ಪೃಶ್ಯತೆಯು ಬೌದ್ಧಕಾಲಾನಂತರದ ವಿದ್ಯಮಾನ ಎಂದವರು ಹೇಳುತ್ತಾರೆ. ಹಿಂದೂಗಳು ಬೌದ್ಧಮತದ ಪ್ರಭಾವಕ್ಕೊಳಗಾಗಿ ಪ್ರಾಣಿಗಳನ್ನು ಬಲಿ ನೀಡುವುದನ್ನೂ, ದನಗಳ ಮಾಂಸ ಭಕ್ಷಣೆಯನ್ನೂ ಬಿಟ್ಟುಕೊಟ್ಟರು. ಆದರೆ ಅವರು ಇದನ್ನು ಎಷ್ಟು ಪರಾಕಾಷ್ಠೆಗೆ ಒಯ್ದರೆಂದರೆ ದನದ ಮಾಂಸ ತಿನ್ನುವುದನ್ನು ಮುಂದುವರಿಸಿದವರನ್ನು ಅಸ್ಪೃಶ್ಯರೆಂದು ಭಾವಿಸತೊಡಗಿದರು, ಎಂದೂ ಡಾ॥ ಅಂಬೇಡ್ಕರ್ ಹೇಳುತ್ತಾರೆ.[೭]

ಶೂದ್ರರ ಹಾಗೂ ಅಸ್ಪೃಶ್ಯರ ಹುಟ್ಟಿಗೆ ಸಂಬಂಧಿಸಿದ ಡಾ॥ ಅಂಬೇಡ್ಕರ್‌ರವರ ಈ ಸಿದ್ಧಾಂತವನ್ನು ಒಪ್ಪಲಿ ಬಿಡಲಿ, ಹುಟ್ಟಿನ ಮೇಲೆ ಆಧರಿಸಿದ ವರ್ಣ ಪದ್ಧತಿ ಬಹುಮಟ್ಟಿಗೆ ಋಗ್ವೇದ ನಂತರದ ವಿದ್ಯಮಾನ ಮತ್ತು ಅಸ್ಪೃಶ್ಯತೆಯು ಬೌದ್ಧಾನಂತರದ ವಿದ್ಯಮಾನ, ಎಂಬುದನ್ನಂತೂ ವಿದ್ವಾಂಸರು ಒಪ್ಪುತ್ತಾರೆ. ಅಂದರೆ ಒಂದು ಕಾಲದಲ್ಲಿ – ಕ್ರಿ. ಪೂ. ೪೦೦೦ದಿಂದ ಇಂದಿನವರೆಗಿನ ಹಿಂದೂಧರ್ಮದ ದೀರ್ಘ ಇತಿಹಾಸದ ಸುಮಾರು ಮೊದಲ ಅರ್ಧಭಾಗದಲ್ಲಿ ಎಂದೇ ಹೇಳಬಹುದು – ಜಾತಿಪದ್ಧತಿ ರಹಿತ ಹಿಂದೂ ಧರ್ಮವಿದ್ದಿತು, ಎಂದಾಯಿತು. ಡಾ॥ ಅಂಬೇಡ್ಕರ್‌ರವರ ಪ್ರಕಾರವೂ ಇದು ಹೀಗೆಯೇ. ಮತ್ತೆ ಜಾತಿಪದ್ಧತಿ ಪತನಗೊಂಡ ನಂತರವೂ ಹಿಂದೂಧರ್ಮವು ಉಳಿದುಕೊಂಡಿರಬಲ್ಲದು ಎಂಬುದನ್ನು ನಾವು ಈ ಪ್ರಬಂಧದ ಮುಕ್ತಾಯ ಭಾಗದಲ್ಲಿ ಕಾಣಲಿರುವೆವು.

**ಸಾಮಾಜಿಕ ಹಾಗೂ ಔದ್ಯೋಗಿಕ ಗತಿಶೀಲತೆ**

ಜಾತಿಪದ್ಧತಿಯ ಲಕ್ಷಣಗಳೇನು ಎಂಬುದನ್ನು ನಾವು ಈ ಪ್ರಬಂಧದ ಮೊದಲ ವಿಭಾಗದಲ್ಲಿ ನಿರೂಪಿಸಿದ್ದೇವಷ್ಟೆ. ಆದರೆ ಅವು ಎಂದೂ ಆಚರಣೆಯಲ್ಲಿ ಕಟ್ಟುನಿಟ್ಟಾಗಿ ಇರಲಿಲ್ಲ, ಒಂದೊಂದು ಲಕ್ಷಣಕ್ಕೂ, ಒಂದೊಂದೂ ಜಾತಿ ನಿಯಮ ನಿರ್ಬಂಧಗಳಿಗೂ, ಯಾವತ್ತೂ ಅಪವಾದಗಳು ಇದ್ದೇ ಇರುತ್ತಿದ್ದವು. ಕಸುಬುಗಳು ವರ್ಣಪದ್ಧತಿಯಲ್ಲಿ ಸೈದ್ಧಾಂತಿಕವಾಗಿ ವರ್ಣಿತವಾಗಿರುವಂತೆ ಇಲ್ಲ, ಅವು ಆ ಮಾದರಿಯಿಂದ ವಾಸ್ತವವಾಗಿ ಈ ಅನೇಕ ಶತಮಾನಗಳಲ್ಲಿ ಭಿನ್ನ ಭಿನ್ನ ರೂಪಗಳಲ್ಲಿ ಬದಲಾಗಿವೆ. ಧರ್ಮಶಾಸ್ತ್ರಗಳೇ ಆಪದ್ಧರ್ಮ ಎಂಬ ಹೆಸರಿನಲ್ಲಿ ಅನೇಕ ಅಪವಾದಗಳಿಗೆ ಅವಕಾಶ ಮಾಡಿಕೊಟ್ಟಿದ್ದವು. ಅದರ ಪ್ರಕಾರ ತನ್ನ ಸ್ವಂತ ವರ್ಣದ ವೃತ್ತಿಯಿಂದ ಜೀವನೋಪಾಯ ನಡೆಸಲಾಗದಿದ್ದ ವ್ಯಕ್ತಿ ಬೇರೆ ಯಾವುದೇ ವೃತ್ತಿ ಹಿಡಿಯಬಹುದಿತ್ತು. ಹುಟ್ಟಿನಿಂದ ಬ್ರಾಹ್ಮಣರಾದವರು ತಮ್ಮ ವರ್ಣಕ್ಕೆ ತಕ್ಕಂತೆ ಪುರೋಹಿತ ವೃತ್ತಿ ಅನುಸರಿಸಬೇಕು. ಆದರೆ ನಾವು ಕಾಣುವುದೇನು ? ಅವರು ಪುರೋಹಿತ ವೃತ್ತಿಯನ್ನಷ್ಟೇ ಅಲ್ಲ ದೈಹಿಕ ಶ್ರಮವನ್ನೂ ಒಳಗೊಂಡಂತೆ ಅನೇಕ ಇತರ ರೀತಿಯ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಪರಿಶಿಷ್ಟ ಜಾತಿ (ಹಿಂದಿನ 'ಅಸ್ಪೃಶ್ಯರು') ಹಾಗೂ ಪರಿಶಿಷ್ಟ ಬುಡಕಟ್ಟಿನ ಸಚಿವರ ಹಾಗೂ ಅಧಿಕಾರಿಗಳ ಮನೆಗಳಲ್ಲಿ ಬ್ರಾಹ್ಮಣರು ಅಡುಗೆ ಮಾಡುವವರಾಗಿ ಕೆಲಸ ಮಾಡುತ್ತಿರುವುದನ್ನು ಕಾಣುವುದು ಅಪರೂಪವೇನಲ್ಲ. ಕರ್ನಾಟಕದಲ್ಲಿ ಹವ್ಯಕ ಬ್ರಾಹ್ಮಣರು ತೋಟಗಳ ಮಾಲೀಕರಾಗಿದ್ದಾರಷ್ಟೆ ಅಲ್ಲ ಅವುಗಳಲ್ಲಿ ದೈಹಿಕ ಶ್ರಮದಲ್ಲೂ ತೊಡಗಿರುವುದು ಸಾಮಾನ್ಯ. ವರ್ಣನೀತಿಯ ಪ್ರಕಾರ ಶೂದ್ರರು ದೈಹಿಕ ಶ್ರಮ (ಕೂಲಿಕಾರರ) ಹಾಗೂ ಕೈಕಸುಬುಗಳಲ್ಲಿ ತೊಡಗಿರಬೇಕು. ಆದರೆ ಪಾರಂಪರಿಕವಾಗಿ ಅವರು ಸೈನಿಕ ವೃತ್ತಿ ಹಿಡಿದಿರುವುದನ್ನು ಕಾಣುತ್ತೇವೆ. ಹೀಗೆ ಅವರು ಕ್ಷತ್ರಿಯರ ಹಾಗೂ ಶೂದ್ರರ ನಡುವಿನ ವ್ಯತ್ಯಾಸವನ್ನು ಮಸುಕುಗೊಳಿಸಿದ್ದಾರೆ.

ವೈದಿಕ ಹಾಗೂ ಉಪನಿಷತ್ತುಗಳ ಕಾಲಗಳಲ್ಲೇ ಸಾಮಾಜಿಕ ನೆಲೆಯಲ್ಲೂ ವೃತ್ತಿ ಕ್ಷೇತ್ರದಲ್ಲೂ ವಿವಿಧ ವರ್ಣಗಳ ಜನರು ವೃತ್ತಿಪರ ಗತಿಶೀಲತೆ ತಂದಿದ್ದುದಕ್ಕೆ ಡಾ॥ ಅಂಬೇಡ್ಕರ್‌ರವರೇ ಅನೇಕ ನಿದರ್ಶನಗಳನ್ನು ನೀಡಿದ್ದಾರೆ. ರೈಕ್ವ, ಜನಶ್ರುತಿ ಹಾಗೂ ಕವಸ ಐಲೂಷರವರು ಕೀಳು ಜಾತಿಯವರೆಂದು ತಿಳಿದುಬಂದ ನಂತರವೂ ಅವರನ್ನು ವೇದಪಾಠ ಕಲಿಯಲು ಆಶ್ರಮಗಳಿಗೆ ಸೇರಿಸಿಕೊಳ್ಳಲಾಯಿತು. ಛಾಂದೋಗ್ಯ ಉಪನಿಷತ್ತಿನಲ್ಲಿ ಸತ್ಯಕಾಮ ಜಾಬಾಲಿಯ ಒಂದು ಮಹತ್ವಪೂರ್ಣ ಕಥೆ ಬರುತ್ತದೆ. ಅವನು ವೇದಾಭ್ಯಾಸ ಮಾಡಲು ತನಗೆ ಪ್ರವೇಶ ನೀಡಬೇಕೆಂದು ಗೌತಮ (ಗೌತಮ ಬುದ್ಧನಲ್ಲ) ಋಷಿಯ ಆಶ್ರಮದಲ್ಲಿ ಕೇಳಿಕೊಂಡ. ಅವನು ಯಾವ ಕುಟುಂಬದಿಂದ ಬಂದವನು ಎಂದು ಕೇಳಿದಾಗ ಜಾಬಾಲ ಮುಚ್ಚುಮರೆ ಇಲ್ಲದೆ ಗೌತಮ ಋಷಿಗೆ ಹೇಳಿದ. "ನಾನು ಯಾವ ಕುಟುಂಬದಿಂದ ಬಂದವನು ಎಂಬುದು ನನಗೆ ತಿಳಿಯದು ಮಹರ್ಷಿಗಳೇ. ನಾನು ನನ್ನ ತಾಯಿಯನ್ನು ಕೇಳಿದೆ. ಆಕೆ ಹೇಳಿದಳು : 'ನಾನು ಯುವತಿಯಾಗಿದ್ದಾಗ ಅನೇಕ ಮನೆಗಳಲ್ಲಿ ಕೆಲಸಗಾರ್ತಿಯಾಗಿ ದುಡಿಯುತ್ತಿದ್ದೆ. ಆಗ ನೀನು ಹುಟ್ಟಿದೆ. ನೀನು ಯಾವ ಕುಟುಂಬದವನು ಅನ್ನುವುದು ನನಗೆ ತಿಳಿಯದು. ನನ್ನ ಹೆಸರು ಜಬಲಾ. ನಿನ್ನ ಹೆಸರು ಸತ್ಯಕಾಮ.' ಹೀಗೆ ನಾನು ಸತ್ಯಕಾಮ



**ಕೋರಿಕೆ**

ಅಮ್ಮ ಅಮ್ಮ ಶಾಲೆಗೆ ರಜೆ ಇದೆ
ಆಡಲು ಹೊರಗಡೆ ಕಳಿಸಮ್ಮ
ಬೇಸಿಗೆ ಬಿಸಿಲಿದೆ ಎನ್ನುತ ನನ್ನ
ಮನೆಯಲಿ ಕೂರಿಸಬೇಡಮ್ಮ

ಅಣ್ಣನ ಗೆಳೆಯ ಸುಬ್ಬು ನನ್ನ
ಕರೆಯಲು ಬಂದಿಹನು
ಚಿಣಫಣಿ ದಾಂಡು, ಚೆಂಡು-ಬುಗರಿ
ಜೊತೆಯಲಿ ತಂದಿಹನು

ಅಪ್ಪನು ಬರುವ ಹೊತ್ತಿಗೆ
ತಪ್ಪದೆ ಮನೆಯಲ್ಲೆ ಇರುವೆ
ಹೇಳಿದ ಪಾಠ ಸರಸರ ಓದಿ
ಒಪ್ಪಿಸಿಯೇ ಬಿಡುವೆ.

ಆಟದ ಬಯಲಲಿ ಬಿಸಿಲೇ ನೆರಳು
ಹರುಷದಿ ಆಡುವೆನಮ್ಮ
ಆಟವ ಮುಗಿಸಿ ಓಡುತ ಬಂದು
ಮುತ್ತನು ಕೊಡುವೆನು ಅಮ್ಮ

**ಅರುಣಾ ನರೇಂದ್ರ**
ನಂದಿನಗರ (ಮಿಲ್ ಹತ್ತಿರ)
ಕೊಪ್ಪಳ-೫೮೩೨೩೧

ಜಾಬಾಲಿ ಆದೆ, ಮಹರ್ಷಿಗಳೇ'' – ಅವನ ಸತ್ಯವಾಕ್ಯಕ್ಕೆ ಮೆಚ್ಚಿ ಋಷಿಗಳು ತಕ್ಷಣವೇ ಅವನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರು.[೯] ಅನೇಕ ಋಷಿಗಳ ಮೂಲವೇ ಅಸ್ಪಷ್ಟ. ಹಾಗಾಗಿಯೇ ಗಾದೆ : ಋಷಿ ಮೂಲ ಹುಡುಕಲು ಹೋಗಬಾರದು. ಋಷಿ ಪರಾಶರನು ಶ್ವಪಚ ಹೆಂಗಸಿಗೆ ಹುಟ್ಟಿದವನು. ಕಪಿಂಜಲನು ಚಂಡಾಲ ಹೆಂಗಸಿಗೆ, ಮದನಪಾಲನು ಅಂಬಿಗ ಸ್ತ್ರೀಗೆ ಜನಿಸಿದವರು. ಬ್ರಾಹ್ಮಣರು ಕೇವಲ ಪುರೋಹಿತರಾಗಿದ್ದರೆ ಋಷಿಗಳು ಇನ್ನೂ ಹೆಚ್ಚಿನ ಸ್ಥಾನಮಾನದವರಾಗಿದ್ದರು. ರಾಮಾಯಣದ ಕರ್ತೃ ವಾಲ್ಮೀಕಿ, ಮಹಾಭಾರತದ ರಚಯಿತ ಹಾಗೂ ವೇದಗಳ ಸಂಪಾದಕ ಹಾಗೂ ಸಂಕಲನಕಾರ ವ್ಯಾಸ, ಅಷ್ಟೇ ಅಲ್ಲ ಮಹರ್ಷಿ ವಸಿಷ್ಠ ಇವರೆಲ್ಲರೂ ಕೀಳು ಹುಟ್ಟು ಎನ್ನುವಂಥ ವರ್ಗಕ್ಕೆ ಸೇರಿದವರಾಗಿದ್ದರು. ಸಂಸ್ಕೃತದ ಮಹಾಕವಿಗಳಲ್ಲಿ ಮಹೋತ್ತಮನಾದ ಕಾಳಿದಾಸನ ಮೂಲವೂ ಅತಿ ಸಾಮಾನ್ಯ ಹಾಗೂ ಅಸ್ಪಷ್ಟ.

೧೨ನೆಯ ಶತಮಾನದಷ್ಟು ಈಚೆಗೆ ವಿಜ್ಞಾನೇಶ್ವರನು ಯಾಜ್ಞವಲ್ಕ್ಯ ಸ್ಮೃತಿಯ ಮೇಲಿನ ಭಾಷ್ಯದಲ್ಲಿ ಹೇಳಿದ್ದಾನೆ : ನೄನ್ ಪಾತಿ ಇತಿ ನೃಪಃ, ನ ತು ಕ್ಷತ್ರಿಯಃ ಇತಿ ನೇಮಃ' (ನರರನ್ನು ರಕ್ಷಿಸುವವನು ನೃಪ, ಅವನು ಕ್ಷತ್ರಿಯನೆ ಆಗಬೇಕೆಂಬ ನಿಯಮವಿಲ್ಲ).

ದಕ್ಷಿಣ ಹಾಗೂ ಉತ್ತರ ಭಾರತದಲ್ಲಿ ಭಕ್ತಿ ಚಳವಳಿಗಳಲ್ಲಿ ಅನೇಕ ಸಂತ ಕವಿಗಳು ಕೀಳು ಜಾತಿ ಎನ್ನಲಾದಂಥ ಜಾತಿಯವರೇ. ಅವರು ಚಳವಳಿಯಲ್ಲಿ ಮೇಲ್ಜಾತಿಯ ಬ್ರಾಹ್ಮಣರಿಗಿಂತ ಹೆಚ್ಚು ಪ್ರಮುಖರಾಗಿದ್ದರು. ಕರ್ನಾಟಕದಲ್ಲಿ ಬಸವಣ್ಣನವರ ಭಕ್ತಿ ಚಳವಳಿಯಲ್ಲಿ ಎಷ್ಟು ಅಪಾರ ಸಂಖ್ಯೆಯಲ್ಲಿ ದಲಿತ ಶರಣರೂ ಶರಣೆಯರೂ ಇದ್ದರೆಂದರೆ ಎಂ. ಎನ್. ಜವರಯ್ಯನವರು ಅವರ ಮೇಲೆ ೩೦೦ಕ್ಕೂ ಹೆಚ್ಚು ಪುಟಗಳ ಒಂದು ಉದ್ಗ್ರಂಥವನ್ನೇ ರಚಿಸಿದ್ದಾರೆ. ಆದ್ದರಿಂದ ವೈದಿಕಾನಂತರದ ಸಮಾಜದಲ್ಲೂ ಗಣನೀಯ ಪ್ರಮಾಣದಲ್ಲಿ ಸಾಮಾಜಿಕ ಗತಿಶೀಲತೆ ಇದ್ದಿತು ಎಂಬುದು ಸ್ಪಷ್ಟ ಇನ್ನು ವೈದಿಕ ಸಮಾಜದ ವಿಷಯ ಹೇಳಬೇಕಾಗಿಯೇ ಇಲ್ಲ. ಅಲ್ಲಿ ಇಂಥ ಗತಿಶೀಲತೆ ಇನ್ನೂ ಹೆಚ್ಚು ಸ್ಪಷ್ಟವಾಗಿದ್ದಿತು. ವಿಶದವಾಗಿದ್ದಿತು.

ಈ ಗತಿಶೀಲತೆಯ ಕಾರಣದಿಂದಾಗಿ ಯಾವ ಜಾತಿ ಬೇರೆ ಯಾವ ಜಾತಿಗಿಂತ ಮೇಲಾಗಿದ್ದಿತು ಎಂಬ ಬಗೆಗೆ ಸರ್ವಸಮ್ಮತಿ ಇರಲಿಲ್ಲ. ಒಂದೊಂದು ಜಾತಿಯೂ ತಾನು ಇತರ ಜಾತಿಗಳಿಗಿಂತ ಮೇಲೆಂದೇ ಪರಿಗಣಿಸಿಕೊಂಡಿದ್ದಿತು. ತಾವು ಇತರರಿಗಿಂತ ಮೇಲು ಎಂಬುದನ್ನು ತೋರಿಸಿಕೊಳ್ಳಲು ಅವು ಪರಿಶುದ್ಧತಾ ನಿಯಮಗಳ ಪಾಲನೆಯಲ್ಲಿ ಪರಸ್ಪರ ಸ್ಪರ್ಧಿಸುತ್ತಿದ್ದವು. ಹೀಗೆ ಅನೇಕ ಜಾತಿಗಳು ತಮ್ಮನ್ನು ಕ್ಷತ್ರಿಯರೆಂದು ಪರಿಗಣಿಸಿಕೊಂಡಿದ್ದವು. ಆದರೆ ಮೇಲ್ಜಾತಿಗಳು ಅವನ್ನು ಶೂದ್ರರೆಂದು ಪರಿಗಣಿಸಿದ್ದವು. ಜಾತಿಪದ್ಧತಿಯಲ್ಲಿ ಮೇಲಿನ ಅಂತಸ್ತು ಪಡೆಯಲು ಅವು ಮೇಲ್ಜಾತಿಗಳು ಆಚರಿಸುತ್ತಿದ್ದಂಥ ಉಪನಯನ ಹಾಗೂ ಕೆಲವು ಹೋಮ ಹವನಗಳನ್ನು ಪೂಜೆಗಳನ್ನೂ ಆಚರಿಸುತ್ತಿದ್ದವು. ಅಂಥ ಯತ್ನಗಳನ್ನು ಎಂ. ಎನ್. ಶ್ರೀನಿವಾಸ್‌ರು ಸಂಸ್ಕೃತೀಕರಣ ಎಂದು ಕರೆಯುತ್ತಾರೆ. ಅವುಗಳ ಮೂಲಕ ಹಲವಾರು ಜಾತಿಗಳು ಉನ್ನತ ಜಾತಿಗಳ ಸ್ಥಾನಮಾನ ಪಡೆಯುತ್ತಿದ್ದವು.[೧೦] ಇಡೀ ಜಾತಿಗಳೇ ಮೇಲಂತಸ್ತು ಪಡೆಯಲು ಅನುಸರಿಸುವ ಈ ಸಂಸ್ಕೃತೀಕರಣ ಪ್ರಕ್ರಿಯೆಯು ಕೇವಲ ೨೦ನೆಯ ಶತಮಾನದ ವಿದ್ಯಮಾನವಾಗಿರಲು ಸಾಧ್ಯವಿಲ್ಲ. ಆದರೂ ವಿದ್ವಾಂಸರು ತಮ್ಮ ಗಮನವನ್ನು ಆಧುನಿಕ ಕಾಲಕ್ಕಷ್ಟೆ ಹೆಚ್ಚಾಗಿ ಮೀಸಲಿರಿಸಿದ್ದಾರೆ.

ವಿಭಿನ್ನ ವರ್ಣಗಳ ನಡುವೆ ವಿವಾಹಗಳು ಕೂಡ ಅಪರೂಪವಾಗಿರಲಿಲ್ಲ. ಅವು ಮಹತ್ವಪೂರ್ಣವಾಗಿ ಆಗುತ್ತಿದ್ದುದರಿಂದಲೇ ಹಿಂದೂ ಪಠ್ಯಗಳಲ್ಲಿ ವಿಭಿನ್ನ ಮಾದರಿ ವಿವಾಹಗಳ ಬಗೆಗೆ ನಮೂದನೆ ಇದೆ. ಈ ಮಾದರಿಗಳನ್ನವಲಂಬಿಸಿಯೇ ಜಾತಿಗಳನ್ನು ನಿರ್ಧರಿಸುತ್ತಿದ್ದುದು. ಪತಿಯು ಪತ್ನಿಯ ಜಾತಿಗಿಂತ ಹೆಚ್ಚು ಮೇಲಿನ ಜಾತಿಯವನಾಗಿದ್ದರೆ ಅಂತಹ ವಿವಾಹವನ್ನು ಅನುಲೋಮ ಎಂದೂ, ತದ್ವಿರುದ್ಧವಾದುದನ್ನು ಪ್ರತಿಲೋಮ ಎಂದೂ ಕರೆಯಲಾಗುತ್ತಿದ್ದಿತು. ಅನುಲೋಮ ವಿವಾಹಗಳು ಸಹ್ಯವಾಗಿದ್ದರೆ, ಪ್ರತಿಲೋಮ ವಿವಾಹಗಳನ್ನು ನಿಂದಿಸಲಾಗುತ್ತಿತ್ತು. ಮತ್ತೊಂದು ರೀತಿಯ ವಿವಾಹ-ವರ್ಗೀಕರಣವೂ ಇದ್ದಿತು. ಅದರ ಪ್ರಕಾರ ಪ್ರೇಮ ವಿವಾಹವನ್ನು ಗಾಂಧರ್ವ ವಿವಾಹ ಎನ್ನಲಾಗುತ್ತಿತ್ತು. ಬಲತ್ಕಾರದಿಂದ ಹೆಂಗಸಿನ ವಿವಾಹವಾಗಿದ್ದರೆ ಅದನ್ನು ರಾಕ್ಷಸ ವಿವಾಹ ಎನ್ನಲಾಗುತ್ತಿತ್ತು. ಗಾಂಧರ್ವ ವಿವಾಹ ಸಹ್ಯವಾಗಿದ್ದರೆ ರಾಕ್ಷಸ ವಿವಾಹ ನಿಂದನೀಯವಾಗಿದ್ದಿತು. ಎಲ್ಲ ವಿವಾಹಗಳೂ ಹಿರಿಯರು ಏರ್ಪಟ್ಟಿಸಿದವಾಗಿರಲಿಲ್ಲ. ಮಿಶ್ರ ವಿವಾಹಗಳು ಅಪರೂಪವಾಗಿರಲಿಲ್ಲ ಎಂಬುದು ಸಾಹಿತ್ಯದಿಂದ ತಿಳಿದುಬರುತ್ತದೆ. ವರ್ಣ ಎಂದರೆ ಬಣ್ಣ ಎಂಬ ಅರ್ಥವಿದ್ದರೂ ಜಾತಿ ವೈಪರೀತ್ಯಗಳು ಕುಲ ಅಥವಾ ಬಣ್ಣ ವೈಪರೀತ್ಯಗಳನ್ನಾಧರಿಸಿರಲಿಲ್ಲ ಎಂಬುದರಲ್ಲಿ ಆಶ್ಚರ್ಯವೇನಿಲ್ಲ. ಭಾರತದಲ್ಲಿ ಪುರಾತನ ಕಾಲದಿಂದಲೂ ಎಲ್ಲ ಜಾತಿಗಳಲ್ಲೂ ಭಿನ್ನ ಭಿನ್ನ ಕುಲ ಹಾಗೂ ಬಣ್ಣಗಳು ಕಂಡುಬರುತ್ತವೆ. ಹಾಗಾಗಿ ಕುಲ ಹಾಗೂ ಬಣ್ಣದ ಆಧಾರದ ಮೇಲೆ ವ್ಯಕ್ತಿಯ ಜಾತಿ ನಿರ್ಧರಿಸಲು ಸಾಧ್ಯವಿಲ್ಲ. ಮೇಲು ಜಾತಿ ಜನರಲ್ಲಿ ಕಪ್ಪು ಮೈಬಣ್ಣದವರಿರುವಂತೆಯೇ ಕೀಳು ಜಾತಿ ಜನರ ಹಾಗೂ ಅಸ್ಪೃಶ್ಯರ ನಡುವೆ ಗೌರವರ್ಣದವರನ್ನು ಕಾಣುವುದು ಅಸಂಭವವೇನಲ್ಲ. ವಿವಿಧ ವರ್ಣ ಹಾಗೂ ಜಾತಿಗಳ ನಡುವೆ ಅಂತರ-ವಿವಾಹಗಳು ಗಣನೀಯ ಪ್ರಮಾಣದಲ್ಲಿ ಜರುಗದೇ ಇದ್ದಿದ್ದರೆ ಇದು ಸಾಧ್ಯವಿರುತ್ತಿರಲಿಲ್ಲ. ರಾಮ ಹಾಗೂ ಕೃಷ್ಣ ಇಬ್ಬರೂ ಕಪ್ಪು ಮೈ ಬಣ್ಣದ ದೇವರುಗಳೇ. ಆದರೂ ಅವರನ್ನು ಭಕ್ತಿ ವಿಶ್ವಾಸಗಳಿಂದ ಕಾಣುತ್ತಾರೆ, ಪೂಜಿಸುತ್ತಾರೆ.

ಈ ರೀತಿಯ ಸಾಮಾಜಿಕ ಹಾಗೂ ವೃತ್ತಿ - ಸಂಬಂಧಿತ ಬದಲಾವಣೆಗಳನ್ನೂ ಜಾತಿ-ಜಾತಿಗಳ ನಡುವಿನ ಕಲಬೆರಕೆಗಳನ್ನೂ ಧರ್ಮಕಟ್ಟಳೆಗಳ ಉಲ್ಲಂಘನೆಯೆಂದಾಗಲೀ ಅಪರೂಪದ ಅಪವಾದಗಳೆಂದಾಗಲೀ ಭಾವಿಸಲಾಗದು. ವ್ಯಕ್ತಿಯೊಬ್ಬನ ಅಂತಸ್ತು ಮತ್ತು ಸ್ವಭಾವವನ್ನು ಅವನ ಹುಟ್ಟನ್ನು ಆಧರಿಸಿ ನಿರ್ಧರಿಸುವುದನ್ನು ಪವಿತ್ರಗ್ರಂಥಗಳೇ ಗೌರವಿಸುತ್ತಿರಲಿಲ್ಲವೆಂಬುದನ್ನು ಈಗ ನೋಡಲಿರುವೆವು.

*(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುವುದು)*

**ಟಿಪ್ಪಣಿಗಳು ಹಾಗೂ ಉಲ್ಲೇಖಗಳು**

೧. ನೋಡಿ : ಲೂಯಿ ಡ್ಯೂಮಾಂಟ್ (೧೯೯೯, ಮೊದಲ ಪ್ರಕಟಣೆ ೧೯೭೦) ಹೋಮೋ ಹೈರಾರ್ಕಿಕಸ್ : ದಿ ಕಾಸ್ಟ್ ಸಿಸ್ಟಮ್ ಅಂಡ್ ಇಟ್ಸ್ ಇಂಪ್ಲಿಕೇಷನ್ಸ್, ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಇಂಡಿಯಾ. ಪೇಪರ್ ಬ್ಯಾಕ್, ಅದರಲ್ಲೂ, ಅಧ್ಯಾಯ ೩, ''ಹೈರಾರ್ಕಿ : ದಿ ಥಿಯರಿ ಆಫ್ 'ವರ್ಣ','' ಪು. ೬೫-೯೧.

೨. ಅದೇ ಗ್ರಂಥ. ಅಧ್ಯಾಯ ೧೦, ಗೈಲ್ ಓಮ್‌ವೆಟ್ (೧೯೯೪), ದಲಿತ್ಸ್ ಅಂಡ್ ಡೆಮೊಕ್ರಾಟಿಕ್ ರೆವೊಲ್ಯೂಷನ್, ನ್ಯೂಡೆಲ್ಲಿ, ಪು. ೩೧-೩೨.

೩. ಡ್ಯೂಮಾಂಟ್ (೧೯೯೯). ಪೂರ್ವೋಕ್ತ ಗ್ರಂಥ. ಪು. ೨೦೮

೪. ಅದೇ ಗ್ರಂಥ. ಪು. ೨೦೭.

೫. ನೋಡಿ : ಅರವಿಂದ್ ಶರ್ಮ (೨೦೦೦) ಕ್ಲಾಸಿಕಲ್ ಹಿಂದೂ ಥಾಟ್, ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಪು. ೧೩೬.

೬. ಇಲ್ಲಿ ಆರ್. ಎಸ್. ಶರ್ಮರು ಡಾ|| ಅಂಬೇಡ್ಕರ್‌ರನ್ನು ಬೆಂಬಲಿಸುತ್ತಾರೆ : ''ಶೂದ್ರರು ಅಥರ್ವವೇದ [ಕಾಲಾನುಕ್ರಮವಾಗಿ ವೇದಗಳಲ್ಲಿ ಕೊನೆಯದು] ಕಾಲದ ಕೊನೆಯ ಭಾಗದಲ್ಲಷ್ಟೆ ಒಂದು ಸಾಮಾಜಿಕ ವರ್ಗವಾಗಿ ಕಾಣಿಸಿಕೊಳ್ಳುತ್ತಾರೆ. ಆಗ ಅವರನ್ನು ಕುರಿತ ಪುರುಷಸೂಕ್ತ ಪಾಠಾಂತರವನ್ನು ಋಗ್ವೇದದ ಹತ್ತನೆಯ ಅಧ್ಯಾಯದೊಳಕ್ಕೆ ಸೇರಿಸಿರಬಹುದು.'' – ಆರ್. ಎಸ್. ಶರ್ಮ – 'ಪ್ರಾಚೀನ ಭಾರತದಲ್ಲಿ ಶೂದ್ರರು', ಪು. ೨೯. ಅರವಿಂದ್ ಶರ್ಮ (೨೦೦೦)ರು 'ಕ್ಲಾಸಿಕಲ್ ಹಿಂದೂ ಥಾಟ್', ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಪು. ೧೪೨ರಲ್ಲಿ ಉದ್ಧರಿಸಿರುವಂತೆ.

೭. ನೋಡಿ : ಡಾ|| ಬಿ. ಆರ್. ಅಂಬೇಡ್ಕರ್‌ರ ಎರಡು ಗ್ರಂಥಗಳು : ''ಶೂದ್ರರು ಯಾರಾಗಿದ್ದರು ? ಅವರು ಹೇಗೆ ಇಂಡೋ-ಆರ್ಯನ್ ಸಮಾಜದಲ್ಲಿ ನಾಲ್ಕನೆಯ ವರ್ಣವಾದರು'' (೧೯೪೨) ಹಾಗೂ ''ಅಸ್ಪೃಶ್ಯರು : ಅವರು ಯಾರಾಗಿದ್ದರು ? ಯಾಕೆ ಅಸ್ಪೃಶ್ಯರಾದರು'' (೧೯೪೮). ಎರಡೂ ಪುನರ್ಮುದ್ರಿತ : ''ಡಾ|| ಬಾಬಾಸಾಹೇಬ್ ಅಂಬೇಡ್ಕರ್ : ಬರಹಗಳು, ಭಾಷಣಗಳು'' ಸಂ. ೭, ಸಂಪಾದಕ : ವಸಂತ್ ಮೂನ್. ಮುಂಬಯಿ. ಮಹಾರಾಷ್ಟ್ರ ಸರಕಾರ ಶಿಕ್ಷಣ ಇಲಾಖೆ. ೧೯೯೦.

೮. ದೀಪಂಕರ್ ಗುಪ್ತ ಹೇಳುತ್ತಾರೆ : 'ವೈದಿಕ ಕಾಲದ ಬಹುಕಾಲಾನಂತರ, ಮೌರ್ಯ ಸಾಮ್ರಾಜ್ಯದ ಕಾಲಾನಂತರವೇ, ಅಸ್ಪೃಶ್ಯತೆಯ ಕಲ್ಪನೆ ಅಸ್ತಿತ್ವಕ್ಕೆ ಬಂದುದು. ಶತಪಥ ಬ್ರಾಹ್ಮಣದಲ್ಲಿ ವಿಶ್ ಮತ್ತು ಸಾಮಾನ್ಯನು ತಿಂದ ಪಾತ್ರೆಯಲ್ಲೇ ತಾನೂ ತಿನ್ನುವಂತೆ ಮುಖ್ಯಸ್ಥನಿಗೆ ಹೇಳಲಾಗುತ್ತದೆ.. ಋಗ್ವೇದದಲ್ಲೂ ಅಸ್ಪೃಶ್ಯತೆಯ ನಮೂದಿಲ್ಲ. ಕ್ರಿ.ಶ. ಸುಮಾರು ೨ನೇ ಶತಮಾನದಲ್ಲಷ್ಟೆ ಅಸ್ಪೃಶ್ಯ ಜನವಿಭಾಗ ಹಾಗೂ ಅಸ್ಪೃಶ್ಯತೆಯ ಕಲ್ಪನೆ ಕಾಣಬಂದಿತು, ಉದಾ: ಆಪಸ್ತಂಭ ಧರ್ಮಸೂತ್ರದಲ್ಲಿ.' ನೋಡಿ : ಅವರ *Interrogating Caste... Understanding Hierarchy and Difference in Indian Society*. (2000), New Delhi. Sage, P. 190.

೯. ನೋಡಿ : ಎಸ್. ರಾಧಾಕೃಷ್ಣನ್ (೧೯೯೪, ಮೊದಲ ಪ್ರಕಟಣೆ ೧೯೫೩). *The Principal Upanishads*, New Delhi, Harper Collins. ಪು. ೪೦೬-೭.

೧೦. ಈ ಮಾದರಿಯ ಉದಾಹರಣೆಗಳಿಗೆ, ನೋಡಿ : ಅರವಿಂದ್ ಶರ್ಮ (೨೦೦೦). ಪೂರ್ವೋಕ್ತ ಗ್ರಂಥ, ಅಧ್ಯಾಯ ೧೯, 'ವರ್ಣ', ಪು. ೧೩೨-೧೮೦.

---

ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್
ಮೂಲ : ಡಾ||ಎಂ. ವಿ. ನಾಡಕರ್ಣಿ
ಪರಿಜ್ಞಾನ ಬಾಲ ವಿಹಾರ (ಮಹಡಿ), ೨ನೇ ಕ್ರಾಸ್, ಐಸೆಕ್ ಪಶ್ಚಿಮ, ನಾಗರಭಾವಿ, ಬೆಂಗಳೂರು - ೫೬೦ ೦೭೨

ಮತ್ತೆ ಮತ್ತೆ ವಧು ಪರೀಕ್ಷೆ.

ರಮಾಗೆ ತನ್ನ ಒಳಗೆ ಏನೋ ಗಡ್ಡೆ ಕಟ್ಟಿಕೊಂಡ ಅನುಭವವಾಗುತ್ತಿತ್ತು. ಈಗ ಆರು ವರ್ಷಗಳಿಂದ ವರ್ಷಕ್ಕೆ ಐದಾರು ಬಾರಿಗೆ ಕಡಿಮೆ ಇಲ್ಲದಂತೆ ಈ ವಧು ಪರೀಕ್ಷೆಗಳು ನಡೆಯುತ್ತಲೇ ಇದ್ದುವು. ರಮಾ ಇಂಟರ್ ಎರಡನೆಯ ವರ್ಷಕ್ಕೆ ಬಂದಾಗಲಿಂದ ಎನ್ನ ಬಹುದು. ಅವಳು ಬಿ.ಎ. ಪಾಸ್ ಮಾಡಿ ಎರಡು ವರ್ಷಗಳಿಂದ ಉದ್ಯೋಗ ಮಾಡುತ್ತಿದ್ದಳು.

ಶ್ಯಾಮಲ ವರ್ಣ, ಕಳೆಯಾದ ಮುಖ-ಮೂಗು ಸ್ವಲ್ಪ ಚಿಕ್ಕದಾಗಿ ದಪ್ಪಗಿದೆ ಅನ್ನಿಸಿದರೂ ಕೆಟ್ಟ ಮೂಗು ಏನಲ್ಲ, ಉದ್ದವಾದ ಜಡೆ, ಸಾಕಷ್ಟು ಎತ್ತರ ಇದ್ದದ್ದರಿಂದ ಚೆನ್ನಾಗೆ ಇದ್ದಳು ರಮಾ.

ಆದರೆ ಸಮಸ್ಯೆ ಬೇರೆಯಾಗಿತ್ತು. ಬಂದು ನೋಡಿ ಹೋದವರಿಗೆಲ್ಲರಿಗೂ ಹುಡುಗಿ ಹಿಡಿಸಲಿಲ್ಲವೆಂದಲ್ಲ, ಹುಡುಗಿ ಹಿಡಿಸಲಿಲ್ಲವೆಂಬ ಪ್ರಶ್ನೆ- ತುಂಬಾ ಕಮ್ಮಿ ಸಲವೇ ಬಂದದ್ದು. ವಾಸ್ತವವಾಗಿ ಹಿಡಿಸದೆ ಇದ್ದದ್ದು ರಮಾಳ ತಂದೆ ಕೊಡುವ ವರದಕ್ಷಿಣೆ. ಇಷ್ಟಕ್ಕೆ, ನಿಜವಾದ ಸಮಸ್ಯೆ ಅದೇ !

ಆದರೆ ಯಾವುದು ಸಮಸ್ಯೆ ಎನ್ನುವುದು ಅರ್ಥವಾದರೆ, ನಿಜವಾದ ಸಮಸ್ಯೆ ಎಲ್ಲಿದೆ ಎಂದು ಸರಿಯಾಗಿ ಗುರುತಿಸಲು ಸಾಧ್ಯವಾದರೆ ಪ್ರಪಂಚದಲ್ಲಿನ ಸಮಸ್ಯೆಗಳೆಲ್ಲಾ ಸುಲಭವಾಗಿ ಬಗೆಹರಿದುಬಿಡುತ್ತವೆ.

ಒಂದು ಸಮಸ್ಯೆಯಲ್ಲಿ ಎಷ್ಟೋ ರೀತಿಯ ಕೋನಗಳೂ, ನೆರಳುಗಳೂ ಒಂದೆಡೆ ಇದ್ದರೆ ಅದರ ನೆರಳು ಇನ್ನೊಂದು ಕಡೆ ಕಾಣಿಸುತ್ತದೆ. ನೆರಳನ್ನೇ ನಿಜವಾದ ಸಮಸ್ಯೆ ಎಂದುಕೊಂಡು ನಾವು ಅದನ್ನು ಹಿಡಿದುಕೊಳ್ಳುತ್ತೇವೆ. ಹಾಗೆಯೇ ರಮಾಳ ವಧು ಪರೀಕ್ಷೆಯಲ್ಲಿ ಕೆಲವು ಸಲ ಸಮಸ್ಯೆಗಳೆಲ್ಲಾ ರಮಾಳ ಮೂಗಿನ ಮೇಲೆ ಕೇಂದ್ರಿತವಾಯಿತು.

ಚಿಕ್ಕಂದಿನಲ್ಲಿ ರಮಾಗೆ ಅವಳ ಅಜ್ಜಿ ಕಿವಿಗಳನ್ನು ಚುಚ್ಚಿಸಿದಾಗ ಮೂಗನ್ನೂ ಚುಚ್ಚಿಸಿದ್ದರು. ಮೂರು ವರ್ಷದ ರಮಾ ಗೊಳೋ ಎಂದು ಅಳುತ್ತಾ ತಪ್ಪಿಸಿಕೊಳ್ಳಲು ಹೋದಳಾದರೂ ಸಾಧ್ಯವಾಗಲಿಲ್ಲ. ರಮಾ ಸಹಕರಿಸದಿದ್ದಾಗ, ಒಂದು ಕಡೆಯಲ್ಲಿ ಚುಚ್ಚಿದ ಎರಡು ಕಡೆ ತೂತುಗಳು ಆದುವು. ಪುನಃ ಅಜ್ಜಿ ರಮಾಳ ಕಾಲುಗಳನ್ನೂ-ಕೈಗಳನ್ನೂ ಅದುಮಿ ಹಿಡಿದುಕೊಂಡರೆ ಎರಡು ಕಡೆ ಸೇರಿ ಒಂದೇ ದೊಡ್ಡ ತೂತು ಮಾಡಿದ ಮೂಗನ್ನು ಚುಚ್ಚಿದ ಅಕ್ಕಸಾಲೆ ಹುಡುಗ. ನಂತರ ಕಿವಿಗಳಿಗೆ ಆಗಿದ್ದ ಹುಣ್ಣು ಬೇಗನೆ ವಾಸಿಯಾದರೂ, ಮೂಗಿಗೆ ಆಗಿದ್ದ ಹುಣ್ಣು ಕೀವು ಹಿಡಿಯಿತು. ಜ್ವರ ಬಂತು. ಹದಿನೈದು ದಿವಸ ಹುಡುಗಿಯನ್ನು ಹಿಂಡಿ ಹಿಪ್ಪೆ ಮಾಡುವವರೆಗೂ ಜ್ವರ ವಾಸಿಯಾಗಲಿಲ್ಲ.

ಅಜ್ಜಿ ಬೇರೆ ತನ್ನ ಬೇಸರಿ ರಮಾಳಿಗೇ ಎಂದು ಬಹಿರಂಗವಾಗಿ ಪ್ರಕಟಿಸಿದ್ದಳು. ರಮಾಗೆ ಐದು ವರ್ಷ ವಯಸ್ಸಿನಲ್ಲಿ ಅಜ್ಜಿ ಸತ್ತು ಹೋದಾಗ ಆ ಬೇಸರಿಯನ್ನು ರಮಾಳ ಮೂಗಿಗೆ ಹಾಕಿದ್ದಳು ಅವಳ ಅಮ್ಮ. ಸ್ಕೂಲ್‌ನಲ್ಲಿ ಎಲ್ಲರೂ ಅಣಕಿಸಿ ಹಾಸ್ಯ ಮಾಡಿದ್ದರಿಂದ ರಮಾ ಅದನ್ನು ತೆಗೆದು ಪೆಟ್ಟಿಗೆಯಲ್ಲಿ ಬಚ್ಚಿಟ್ಟಳು.

ಆದರೆ ಮೂಗಿಗಾಗಿದ್ದ ಕನ್ನ ಮಾತ್ರ ಹಾಗೇ ಇತ್ತು. ಅಲ್ಲಿ ಆಗಿದ್ದ ಮಚ್ಚೆ ಸಹಾ ಕಪ್ಪಾಗಿ ಉಳಿದುಹೋಗಿತ್ತು. ರಮಾ ಕಾಲೇಜಿಗೆ ಹೋಗುವ ವೇಳೆಗೆ ಮೂಗುತಿ ಔಟ್ ಆಫ್ ಫ್ಯಾಶನ್ ಆಗಿ ಹೋಯ್ತು. ರಮಾ ಸಹಪಾಠಿಗಳಾರೂ ಮೂಗನ್ನು ಚುಚ್ಚಿಸಿಕೊಂಡೇ ಇರಲಿಲ್ಲ.

ಅನೇಕರು ರಮಾ ಮೂಗಿನ ಕಡೆ, ಅಲ್ಲಿದ್ದ ತೂತಿನ ಕಡೆ, ಮಚ್ಚೆಯ ಕಡೆ ಬೇಕೆಂದೇ ನೋಡುತ್ತಿದ್ದರು. ''ಅದೊಂದೇ ನಿನಗಿರೋ ಕೊರತೆ'', ಎನ್ನುತ್ತಿದ್ದರು.

ಅದಿದ್ದರೆ ಮಾತ್ರ ಏನಾಯ್ತೀಗ – ಗಾಳಿ ತೆಗೆದುಕೊಳ್ಳಲು ಅದು ಅಡ್ಡಿ ಇಲ್ಲವಲ್ಲಾ, ವಾಸನೆ ನೋಡಲು ಅದೇನು ಅಡ್ಡಿಯಿಲ್ಲ, ಮೂಗಿಗೆ ಸಂಬಂಧಪಟ್ಟ ಖಾಯಿಲೆಗಳೇನೂ ಇಲ್ಲ. ಕೊನೆಯ ಪಕ್ಷ ನಾಲ್ಕು ವರ್ಷಕ್ಕೊಮ್ಮೆಯಾದರೂ ನೆಗಡಿ ಸಹಾ ಬರುವುದಿಲ್ಲ.

''ಮಿಕ್ಕದ್ದಕ್ಕೆಲ್ಲಾ ಅದು ಅಡ್ಡಿಯಾಗದಿದ್ದರೂ ನಾಳೆ ನಿನ್ನ ಮದುವೆಗೆ ಅದೇ ಅಡ್ಡ ಬರುತ್ತೆ, ನೋಡ್ತಾ ಇರು'' ಎಂದಳು ಶೈಲ.

# ಮೂಗುತಿ

ತೆಲುಗು ಮೂಲ : ಓಲ್ಗಾ



ಶೈಲಳನ್ನು ಎಲ್ಲರೂ 'ಸೊಟ್ಟೆ ಮೂಗು' ಎನ್ನುತ್ತಿದ್ದರು.

ಶೈಲ ಮಾತ್ರವಲ್ಲ, ಯಾರಷ್ಟಕ್ಕೆ ತಮ್ಮ ಅವಯವಗಳು ಮುಖ್ಯ-ಮುಖ ಪರ್‌ಫೆಕ್ಟ್ ಆಗಿದೆಯೋ ಇಲ್ಲವೋ ಎಂದು ಪರೀಕ್ಷಿಸಿಕೊಳ್ಳುತ್ತಲೇ ಇರುತ್ತಿದ್ದರು. ಅದರ ಭಾಗವಾಗಿ ಮೂಗಿನ ಬಗ್ಗೆಯೂ ದಿಗಿಲುಪಡುತ್ತಿರುತ್ತಿದ್ದರು. ಒಬ್ಬ ಹುಡುಗಿಗೆ ಮೂಗು ತುಂಬಾ ಉದ್ದವೆಂಬ ಭಯ, ಒಂದು ಹುಡುಗಿಗೆ ಮೂಗು ದಪ್ಪವಾಗಿದೆ ಎಂದು ಭಯ. ಇನ್ನೊಂದು ಹುಡುಗಿಗೆ ಮೂಗು ಸೊಟ್ಟೆ ಎಂಬ ಭಯ. ಮತ್ತೊಬ್ಬರಿಗೆ ಮೂಗು ಕೆಳಗೆ ಬಾಗಿ ಹೋಗಿದೆ ಎನ್ನುವ ಭಯ. ಎಲ್ಲರ ಮನಸ್ಸುಗಳಲ್ಲೂ ಮೂಗಿನ ಸಮಸ್ಯೆ ಇರುತ್ತಿತ್ತು.

ನೆಟ್ಟಗೆ, ಸಣ್ಣಗೆ ಸೂಜಿಯಂತೆ ತಿದ್ದಿದ ಮೂಗು, ಕವಿಗಳೂ, ಲೇಖಕರೂ ವರ್ಣಿಸುವ ಮೂಗು. ''ಅಂತಹ ಮೂಗು ಇದ್ದರೆ ಎಷ್ಟು ಚೆನ್ನಾಗಿರುತ್ತೆ....'' ಎಂದಳು ಮಲ್ಲಿಕ, ಕನ್ನಡ ಪಂಡಿತರು ಮನು ಚರಿತ್ರೆಯಲ್ಲಿ ಮೂಗಿನ ಪದ್ಯ ಓದಿ ತಿಳಿಸಿದಾಗ.

ಸಂಪಿಗೆ ಮೊಗ್ಗಿನಂಥಹ ಮೂಗು, ಕಥೆಗಳಲ್ಲಿ-ಕಾದಂಬರಿಗಳಲ್ಲಿ ನಾಯಕರಿಗೆ ಇರುವ ಅಂದವಾದ ಮೂಗು – ತಮಗೆ ಇಲ್ಲದ ಆ 'ನಾಸಿಕ'ವನ್ನು ನೆನೆಸಿಕೊಂಡು ಹುಡುಗಿಯರೆಲ್ಲಾ ತಮ್ಮ ಮೂಗುಗಳ ಬಗ್ಗೆ ಅಸಂತೃಪ್ತಿಯಿಂದಿರುವುದು ರಮಾಗೆ ಬೇಸರವಾಗಿತ್ತು.

ವರಸೆಯಾಗಿ ನಾಲ್ಕು ಮದುವೆಯ ಸಂಬಂಧ ಬೆಳೆಸಲು ಬಂದವರು ರಮಾಳ ಮೂಗಿನ ಬಗ್ಗೆ, ಅದಕ್ಕಿರುವ ತೂತಿನ ಬಗ್ಗೆ – ಮಚ್ಚೆಯ ಬಗ್ಗೆ ಮಾತನಾಡುವ ವೇಳೆಗೆ ಮನೆಯಲ್ಲಿ ಎಲ್ಲರಿಗೂ ಭಯ ಹಿಡಿಯಿತು.

ಮೂಗು ಚುಚ್ಚಿಸಿ ಸತ್ತ ಅಜ್ಜಿಗೆ ಶಾಪ ಹಾಕತೊಡಗಿದಳು ರಮಾಳ ತಾಯಿ. ಐದನೆಯ ಸಂಬಂಧದವರು ''ಹಣದ ಬಗ್ಗೆ ಏನು ಬಿಡಿ. ನಮ್ಮ ಹುಡುಗನಿಗೆ ಅಂದವೇ ಪ್ರಧಾನ. ನಿಮ್ಮ ಹುಡುಗಿ ಶ್ಯಾಮಲ ವರ್ಣ ಮಾತ್ರವಲ್ಲ-ಮೂಗಿನ ಮೇಲೆ ತೂತು ಬೇರೆ'' ಎಂದು ಗೊಣಗಿದ್ದನ್ನು ನೋಡಿದ ನಂತರ, ಆ ತೂತನ್ನು ಹೇಗಾದರೂ ಮುಚ್ಚಿಸಬೇಕೆಂದು ಕೊಂಡರು ರಮಾಳ ತಂದೆ.

ರಮಾ ಬಿ.ಎ. ಎರಡನೆಯ ವರ್ಷದಲ್ಲಿ ಓದುತ್ತಿದ್ದಾಗ ಗುಂಟೂರಿನಲ್ಲಿ ಒಬ್ಬ ದೊಡ್ಡ ಸರ್ಜನ್ ಬಳಿಗೆ ಹೋಗಿ ಆ ಮಚ್ಚೆ ಕಾಣಿಸದಂತೆ ಸರ್ಜರಿ ಮಾಡಿಸಿದ್ದರು ರಮಾಗೆ.

ಮಚ್ಚೆ ಇಲ್ಲದ ಮೂಗು ತನ್ನನ್ನು ಅಣಗಿಸಿದಂತೆ ಇದ್ದರೆ ನಿಟ್ಟುಸಿರುಬಿಟ್ಟಳು ರಮಾ. ವರ್ಷಾಂತರದಿಂದ ಅಭ್ಯಾಸವಾಗಿದ್ದ ಆ ಮಚ್ಚೆ ರಮಾಳ ಶರೀರದಲ್ಲಿನ ಒಂದು ಭಾಗವಾಗಿತ್ತು. ಅದಿಲ್ಲದೆ ಹೋದಾಗ ಕೆಲವು ದಿವಸ ರಮಾಗೆ ಏನೋ ಕಳೆದುಕೊಂಡಂತೆ ಅನ್ನಿಸುತ್ತಿತ್ತು.

''ಹೋಗ್ಲೀ ಬಿಡು, ಇನ್ನೇನು ತಪ್ಪು ಹೇಳ್ತಾರೋ ?'' ಅನ್ನಿಸಿತು.

ಸ್ನೇಹಿತರೆಲ್ಲಾ ಸಂತೋಷಪಟ್ಟರು. ''ಇನ್ನು ನಿನ್ನ ಮದುವೆ ಆಗುತ್ತೆ ಬಿಡಮ್ಮ'' ಎಂದರು.

''ಮದುವೆಯಾಗುವ ಸಲುವಾಗಿ ಯುವತಿಯರು ತಮ್ಮ ಪ್ರತಿ ಅವಯವವನ್ನೂ ಬದಲಾಯಿಸಿಕೊಳ್ಳಬೇಕೇನೋ – ಆ ಮದುವೆಯಾಗುವವರ ಇಷ್ಟಕ್ಕೆ ಅನುಗುಣವಾಗಿ'' ಎಂದುಕೊಂಡಳು ರಮಾ.

ಬೆಳ್ಳಗಿರುವ ಶೋಭಾಳನ್ನು ''ಅಯ್ಯೋ ಅದೇನು ಬಿಳುಪಮ್ಮಾ। ಹುಚ್ಚು ಬಿಳುಪು – ಕಳೆಕಾಂತಿ ಇಲ್ಲದ್ದು'' ಎಂದರು.

ದೊಡ್ಡ ಕಣ್ಣುಗಳಿರುವವಳನ್ನು ''ಅದೇನು ಹಾಗಿದೆ ಕಣ್ಣುಗುಡ್ಡೆಗಳು, ಅದೇನು ನೋಟ...!'' ಎನ್ನುತ್ತಾರೆ.

ತಮ್ಮೆದುರಿಗೆ ವಧು ಪರೀಕ್ಷೆಗೆಂದು ಒಬ್ಬ ಹುಡುಗಿ ಕುಳಿತರೆ, ಹುಡುಗನ ಕಡೆಯವರ ಕಣ್ಣುಗಳಿಗೆ ಏನೋ ಕಾಯಿಲೆ ಬರುತ್ತದೆಂಬ ನಂಬಿಕೆ ದೃಢವಾಯಿತು ರಮಾಗೆ.

ರಮಾ ಬಿ.ಎ. ಮುಗಿಸಿದಳು. ಎರಡು ವರ್ಷಗಳಿಂದ ಟೈಪಿಸ್ಟ್ ಆಗಿ ಉದ್ಯೋಗದಲ್ಲಿದ್ದಳು. ಆದರೂ ಸಂಬಂಧ ಕುದುರಿರಲಿಲ್ಲ. ಪ್ರಯತ್ನಗಳೂ ನಿಲ್ಲಲಿಲ್ಲ. ಈ ಎರಡು ವರ್ಷಗಳಲ್ಲಿ ಒಬ್ಬ ಸಿನಿಮಾ ತಾರೆಯ ಕೃಪೆಯೋ ಎಂಬಂತೆ ಮೂಗುತಿಗಳು ಪುನಃ ಫ್ಯಾಶನ್ ಆಯ್ತು. ಹುಡುಗಿಯರೆಲ್ಲಾ ಆ ತಾರೆಯನ್ನು ಕಂಡು ತಾವೂ ಮೂಗುಗಳನ್ನು ಚುಚ್ಚಿಸಿಕೊಳ್ಳಲಾರಂಭಿಸಿದರು. ತನ್ನ ಮೂಗಿನಲ್ಲಿನ ತೂತನ್ನು ನೋಡಿ ನಕ್ಕವರೆಲ್ಲಾ ಮೂಗು ಚುಚ್ಚಿಸಿಕೊಳ್ಳಲು ಓಡುತ್ತಿದ್ದರೆ ರಮಾ ಆಶ್ಚರ್ಯದಿಂದ ತಲೆಕೆಡಿಸಿಕೊಂಡಳು.

ಅಂದು ಬರಲಿದ್ದ ಸಂಬಂಧದ ಬಗ್ಗೆ ಎಲ್ಲರಿಗೂ ಆಸೆಯಿತ್ತು. ವರ ಲೆಕ್ಚರರ್ ! ವರದಕ್ಷಿಣೆ ಇಪ್ಪತ್ತೈದು ಸಾವಿರ ಸಾಕೆಂದು ಒಪ್ಪಿದ್ದ. ವರನಿಗೆ ಒಬ್ಬಳೇ ಅಕ್ಕ. ಆ ಅಕ್ಕ ಮೂರು ವರ್ಷಗಳಿಂದ ರಮಾ ಅವರ ಪಕ್ಕದ ಮನೆಯಲ್ಲಿ ಬಾಡಿಗೆಗೆ ಇದ್ದರು. ಆಕೆಯ ಹೆಸರು ಸಾವಿತ್ರಿ. ಆಕೆ ಸ್ವಲ್ಪ ಸಲುಗೆ ವಹಿಸಿ ಈ ಸಂಬಂಧವನ್ನು ಬಹುಮಟ್ಟಿಗೆ ದೃಢಪಡಿಸಿದ್ದರು. ಹುಡುಗನ ಫೋಟೊ ಹುಡುಗಿ, ಹುಡುಗಿಯ ಫೋಟೊ ಹುಡುಗ ನೋಡಿದ್ದರು. ಹುಡುಗ ಒಂದೆರಡು ಬಾರಿ ಸಾವಿತ್ರಿಯ ಮನೆಗೆ ಬಂದಿದ್ದಾಗ ರಮಾ ಹಠಾತ್ತಾಗಿ ಕಾಣಿಸಿಕೊಂಡು ಮಾಯವಾಗಿದ್ದಳು. ಹುಡುಗ ಸಂಪ್ರದಾಯ ಪಾಲಿಸುವ ಸಲುವಾಗಿ ವಧು ಪರೀಕ್ಷೆಗೆ ಬರುವವನೇ ಹೊರತು, ಹುಡುಗಿ ಹಿಡಿಸಲಿಲ್ಲವೆಂದು ಹೇಳಲು ಬರುವುದಿಲ್ಲವೆಂಬ ವಿಷಯದಲ್ಲಿ ಎಲ್ಲರಿಗೂ ನಂಬಿಕೆ.

ಆದರೂ ಎಲ್ಲರಿಗೂ ಏನೋ ಭಯ.

'ಸ್ವಲ್ಪ ಬಣ್ಣ ಇದ್ದಿದ್ದರೆ ಇಷ್ಟು ಕಷ್ಟವಾಗಿರಲಿಲ್ಲ' ಎಂದು ಗೊಣಗಿದರು ರಮಾ ತಾಯಿ. ರಮಾಗೂ ಅಂಥ ಉತ್ಸಾಹವೇನೂ ಇರಲಿಲ್ಲ. ಪ್ರತಿಯೊಂದು ಬಾರಿ ಸಿದ್ಧವಾಗುತ್ತಿದ್ದಂತೆಯೇ ಈ ಬಾರಿಯೂ ಸಿದ್ಧವಾದಳು.

ವಧು ಪರೀಕ್ಷೆ ಮುಗಿಯಿತು. ಗಂಡಿನ ಕಡೆಯವರೂ ಸಂತೋಷದಿಂದ ಹೋದರು. ಹತ್ತು ದಿವಸಕ್ಕೇ ನಿಶ್ಚಿತಾರ್ಥದ ಏರ್ಪಾಡು ಮಾಡುವಂತೆ ಹೇಳಿದರು. ರಮಾಗೆ ತಲೆಯ ಮೇಲಿನ ದೊಡ್ಡ ಭಾರವೇನೋ ಇಳಿದಂತಾಯಿತು.

ಚೆನ್ನಾಗಿ ಊಟ ಮಾಡಿ ಸಂಜೆ ಐದರವರೆಗೆ ಚೆನ್ನಾಗಿ ನಿದ್ರೆ ಮಾಡಿದಳು.

ಐದು ಗಂಟೆಗೆ ಸಾವಿತ್ರಿ ಬಂದು ಎಬ್ಬಿಸಿದಳು, ''ಏಳು... ಏಳು, ನಿದ್ದೆಯಲ್ಲಿ ನನ್ನ ತಮ್ಮನನ್ನು ಮೀರಿಸೋ ಹಾಗಿದ್ದೀಯಲ್ಲಾ'', ಎಂದಳು.

ರಮಾ ನಾಚುತ್ತಾ ಎದ್ದಳು.

''ಈಗ ನೀನು ಅರ್ಜೆಂಟಾಗಿ ಮಾಡಬೇಕಾದ ಕೆಲಸ ಒಂದಿದೆ'' ಎಂದಳು ಸಾವಿತ್ರಿ.

''ಏನದು...?'' ಪ್ರಶ್ನಿಸಿದಳು ರಮಾ ಸೋಮಾರಿತನದಿಂದ ಆಕಳಿಸುತ್ತಾ. ''ಮೂಗು ಚುಚ್ಚಿಸ್ಕೋಬೇಕು.''

ಆಕಳಿಕೆ ನಿಂತರೂ ರಮಾಳ ಬಾಯಿ ಮುಚ್ಚಲಿಲ್ಲ.

''ನನ್ನ ತಮ್ಮನಿಗೆ ಮೂಗುತಿ ಅಂದ್ರೆ ವಿಪರೀತ ಇಷ್ಟ. 'ಮೂಗುತಿ ಇಲ್ಲದ ಹೆಂಗಸಿನ ಮೂಗು ಅಂದವಾಗೇ ಇರುವುದಿಲ್ಲ', ಅನ್ನುತ್ತಾನೆ.''

''ಎಲ್ಲಾ ಸರಿಯೇ, ಆಗಲಿ ಆ ಹುಡುಗಿಗೆ ಮೂಗುತಿ ಇಲ್ಲಕ್ಕ ಅಂದ, ಅದೇನು ಮಹಾ ದೊಡ್ಡ ಕೆಲಸಾನಾ, 'ಮೂಗು ಚುಚ್ಕೋ' ಅಂದ್ರಾಯ್ತು'' ಎಂದಳು. ''ನಿನಗೆ ವಜ್ರದ ಮೂಗುತಿ ಮಾಡಿಸ್ತೀನಿ ಅಂದ. ಐದು ಸಾವಿರಕ್ಕೆ ಕಮ್ಮಿ ಇಲ್ಲ. ಅದೃಷ್ಟ ಅಂದ್ರೆ ನಿಂದೇ! ಏಳು... ಏಳು ಮೂಗು ಚುಚ್ಚಿಸ್ಕೋತೀಯಂತೆ ನಡಿ – ಹೋಗೋಣ'' ಎಂದು ಗಲಗಲನೆ ಮಾತನಾಡಿದಳು ಸಾವಿತ್ರಿ.

''ನಾನು ಮೂಗು ಚುಚ್ಚಿಸ್ಕೊಳ್ಳೋದಿಲ್ಲಾ – ಈ ಮದುವೆ ನಿಂತು ಹೋದರೂ ಸರಿ'', ಎಂದ ರಮಾಳ ಮೂಗಿನ ಹೊಳ್ಳೆಗಳು ಅದುರುತ್ತಿದ್ದುವು.

ಅವು ಅಂದವಾಗಿದ್ದವೋ – ಇಲ್ಲವೋ ಹೇಳಬಲ್ಲವರಾರು ?



ಕನ್ನಡಕ್ಕೆ : ಮಿಸ್. ಸಂಪತ್

ನಂ. ೫, 'ಕೃಪಾ', ೮ನೇ ಬ್ಲಾಕ್, ಕುಮಾರ ಪಾರ್ಕ್ ಪಶ್ಚಿಮ,
ಬೆಂಗಳೂರು - ೫೬೦ ೦೨೦

# ಸಂಧಿಕಾಲ

ವಸುಮತಿ ಉಡುಪ

ಗಣೇಶ, ಮಹೇಶ ಅಂತ ಇಬ್ರು ಅಣ್ಣ ತಮ್ಮಂದ್ರು. ಇಬ್ರಿಗೂ ಹನ್ನೊಂದು ತಿಂಗಳ ಅಂತರ. ಈ ಮಕ್ಕಳ ತಾಯಿ ಲೀಲಾಂಬನಿಗೆ ಹೊಟ್ಟೆಗೆ ಏಳು ತಿಂಗಳು ತುಂಬೋವರೆಗೆ ಎರಡನೇದೊಂದು ಹೊಟ್ಟೆಯೊಳಗೆ ಬೆಳೀತಿದೆ ಅನ್ನೋ ಅಂದಾಜೇ ಆಗಿರ್ಲಿಲ್ಲಂತೆ. ಒಂದು ವಾಂತಿಯಿಲ್ಲ, ಭ್ರಾಂತಿಯಿಲ್ಲ, ಎಂತಂದ್ರೆಂತದೂ ಸುಳ್ಳು, ಸೂಕ್ಷ್ಮ ಇಲ್ಲ. ಇನ್ನೂ ಚೊಚ್ಚಲು ಬಾಣಂತನದ ಗುಂಗಲ್ಲೇ ಇದ್ದ ಮೊದ್ದು ಹುಡುಗಿ. ಅತ್ತೆಗೂ ಗೊತ್ತಾಗಲಿಲ್ಲ. ಲೀಲಾಂಬ ಮೊದಲೇ ಗುಜ್ಜುಗುಜ್ಜು. ಹೊಟ್ಟೆ ದಪ್ಪ. ಕೆಲವರಿಗೆ ಬಾಣಂತನದಲ್ಲಿ ಹೊಟ್ಟೆ ನಿಂತು ಬಿಡುತ್ತೆ. ಸಮಾ ಎರಡೆರಡು ಸೀರೆ ಸುತ್ತು ಕಟ್ಟಿಕೊಳ್ಳದಿದ್ದರೆ ಇದೇ ಹಣೆಬರ. ಅತ್ತೆ ಒಂಚೂರು ಪಿರಿಪಿರಿ ಮಾಡಿದ್ರು. ಚಾಳಿಸೋಕೆ ಅವ್ರಿಗೆ ಒಂದು ನೆಪ ಬೇಕಾಗಿತ್ತು.

'ಬಾಣಂತಿ ನೋಡಿದ್ರೆ ಬಸುರಿ ನೋಡಿದ ಹಂಗೆ ಕಾಣುತ್ತೆ. ಬಾಣಂತನ ಮಾಡೋ ಹುಟ್ಟಾ ಇದು ? ಬಾಣಂತನದಲ್ಲಿ ಮೈ ಇಳೀದಿದ್ರೆ ಮತ್ಯಾವಾಗ ಇಳಿಯೋದಂತೆ. ಎಂತೋ ಒಂದು ಬಾಣಂತನಾಂತ ಮಾಡಿ ಕಳ್ಸಿದಾರೆ.....'

ಮನೆಗೆ ಕೂಸು, ಬಾಣಂತೀನ ನೋಡೋಕೆ ಬಂದೋರ ಎದುರು ಹಿಂಗಿದ್ದೊಂದು ನಂಜಿನ ಮಾತು ನಡೀತಿರ್ತಿತ್ತು. ಲೀಲಾಂಬ ತಲೆಕೆಡಿಸಿಕೊಳ್ತಿರ್ಲಿಲ್ಲ. ಗಂಡನೂ ಹೇಳಿಟ್ಟಿದ್ದ,

'ಏನಾರೂ ಹೇಳ್ಕಂತಿರ್ಲಿ, ನಿಂಗಲ್ಲ ಅಂತ ತೆಪ್ಪಗಿದ್ಬಿಡು. ಮಾತಿಗೆ ಮಾತು ತಿರುಗಿ ಹೇಳಿದ್ರೆ ರಗಳೆ ತಪ್ಪಿದ್ದಲ್ಲ. ನಿಂಗೂ ಗೊತ್ತುಂಟಲ್ಲ ?'

ಗೊತ್ತಿತ್ತಪ್ಪಾ, ಲೀಲಾಂಬನಿಗೆ ಚೆನ್ನಾಗೇ ಗೊತ್ತಿತ್ತು. ಅವಳ ತೌರಿನಲ್ಲೂ ಮೂರು ಮಂದಿ ಅಣ್ಣದಿಕ್ಳು ಇದಾರೆ. ಎಲ್ರಿಗೂ ಹೆಂಡಿರು ಬಂದಾಗಿದೆ. ಲೀಲಾಂಬನ ಅಮ್ಮ ಲೀಲಾಂಬನ ಥರವೇ ಸಾಧು ಹೆಂಗಸು. ಹೇಳಿದ್ದು ಸರಿಯಾಗಲಿಲ್ಲ ಅನಿಸಿದ್ರೆ ತಿರುಗಾಮುರುಗಾ ಓದಿಕೊಳ್ಳಿ. ಹೀಗಾಗಿ ಅಲ್ಲಿ ಅತ್ತೆ, ಸೊಸೆಯರ ಜಗಳ ಅನ್ನೋದೇನಿಲ್ಲ. ಇಬ್ಬರು ಅಣ್ಣಂದಿರು ಪರವೂರಲ್ಲಿ ನೌಕರಿ ಮಾಡ್ತಿರೋದ್ರಿಂದ ಮನೆಯಲ್ಲಿ ದೊಡ್ಡಣ್ಣಂದೇ ಯಜಮಾನಿಕೆ. ಅವನ ಹೆಂಡತಿಯೇ ಮಹಾರಾಣಿ. ಲೀಲಾಂಬನ ಚೊಚ್ಚಲು ಬಾಣಂತನ ಕ್ರಮಪ್ರಕಾರ ಎಷ್ಟು ಚೆನ್ನಾಗಿ ನಡೀತು ಅಂತ ? 'ಅದ್ಯಾಕೆ ಅಷ್ಟು ಹಾಲು ? ಅದ್ಯಾಕೆ ಅಷ್ಟು ತುಪ್ಪ ?' ಅಂತ ಅತ್ತಿಗೆ ಕಡೆಯಿಂದ ಒಂದು ಸಣ್ಣ ಮಾತಿಲ್ಲ. ಅಮ್ಮ ತಾನಾಗಿ ಏನೂ ಕೇಳುತ್ತಿರಲಿಲ್ಲ. ಅತ್ತಿಗೆಗೇ ಜವಾಬ್ದಾರಿ. ಹೀಗೆ ಜವಾಬ್ದಾರಿ ಕೊಟ್ಟಿದ್ದರಿಂದ ಎಲ್ಲಾ ಸುಸೂತ್ರವಾಗಿ ನಡೀಬೇಕು ಅಂತ ಅವಳಿಗೆ ಹುಮ್ಮಸ್ಸು. 'ಪೇಟೆಗೆ ಹೊರ್ಟಿದಾರೆ, ಎಂತೆಂತಾ ತರ್ಬೇಕು ಹೇಳಿ.....' ಎನ್ನುವ ಅತ್ತಿಗೆಯ ಮಾತು ಇನ್ನೂ ಲೀಲಾಂಬನ ಕಿವಿಯಲ್ಲುಂಟು. ಬೇಜಾರಿಲ್ಲದೆ ಅಮ್ಮ ಥರಥರದ ಲೇಹ್ಯ ಮಾಡಿ ತಿನ್ನಿಸಿ ರಾಜೋಪಚಾರ ಮಾಡಿ ಕಳಿಸಿದ್ದಳು. ಮಗನಿಗೆ ಇನ್ನೇನು ಐದು ತಿಂಗಳು ತುಂಬುತ್ತೆ ಅನ್ನುವಾಗ ಲೀಲಾಂಬ ಗಂಡನ ಮನೆಗೆ ತಿರುಗಿ ಬಂದದ್ದು. ಆಗಲೇ ಗಣೇಶ ಕೌಂಚಿಕೊಂಡು ಮುಂದೆ ತೆವಳೋಕೆ ನೋಡ್ತಿದ್ದ. ಎರಡನೆಯ ಸಲ ಮತ್ತೆ ಬಸುರು ನಿಂತಿದೆ ಅನ್ನೋದು ಕೊನೇ ಗಳಿಗೆಯಲ್ಲಿ ಗೊತ್ತಾಯ್ತಲ್ಲ, ಲೀಲಾಂಬನ ಅಮ್ಮನಿಗೆ ಬೆರಗು.

'ರಾತ್ರಿ ನಾ ಇಲ್ಲೇ ಬಾಣಂತಿ ಕೋಣೇಲಿ ಮಲಗ್ತಿದ್ನಲ್ಲ....' ಎಂದೇನೋ ಹೇಳಲು ಹೋಗಿ ಸೊಸೆ ಅವರ ಬಾಯಿ ಮುಚ್ಚಿಸಿದ್ದಳು.

'ಸುಮ್ಗಿರಿ ಅತ್ತೆ, ಯಾರಾದರೂ ಕೇಳಿಸ್ಕೊಂಡ್ರೆ ನಗ್ತಾರೆ. ಸುಮ್ಗಿದ್ಬಿಡಿ. ಹಗಲು, ರಾತ್ರಿ ಅಂತ ಎಂತೆಂತೋ ಮಾತಾಡೋಕೆ ಹೋಗ್ಬೇಡಿ. ಒಂದೊಂದ್ಸಲ ಏನೋ ಕಿತಾಪತಿ ಆಗ್ಬಿಡುತ್ತಪ್ಪ.....'

ಸುಮ್ಮಗಾದರು ಲೀಲಾಂಬನ ಅಮ್ಮ. ಆ ಸಲ ಲೀಲಾಂಬ ಬಾಣಂತನಕ್ಕೆ ತೌರುಮನೆಗೆ ಹೋಗಲಿಲ್ಲ. ಇನ್ನೂ ಮೊನ್ನೆ ಮೊನ್ನೆ ತಿರುಗಿ ಬಂದವಳಿಗೆ ಮತ್ತೆ ಹೊಟ್ಟೆ ಹೊತ್ತು ಹೋಗಲು ನಾಚಿಕೆ. ಅತ್ತೆ ಬಾಣಂತನ ಮಾಡಿದರು. ಮಹೇಶ ಹುಟ್ಟಿದ. ಅಲ್ಲಿಗೆ ಕೈದಾಯ್ತು ಕೈದು ಮಾಡಿಕೊಂಡ್ರು. ಕಾಲ ನಿಲ್ಲುವುದಿಲ್ಲವಲ್ಲ. ಮಕ್ಕಳು ದಿನಕ್ಕೊಂದು ಚಂದದಿಂದ ಬೆಳೆಯುತ್ತಾ ಬಂದರು. 'ಒಟ್ಟೊಟ್ಟಿಗೆ ದೊಡ್ಡೋರಾಗ್ತಾರೆ, ಒಂಥರಕ್ಕೆ ಒಳ್ಳೇದೇ ಆಯ್ತು ಅಂತ ಲೀಲಾಂಬನಿಗೂ ಸಮಾಧಾನವೇ. ದೊಡ್ಡದಕ್ಕೆ ನಾಲ್ಕೋ, ಐದೋ ವರ್ಷ ಆದ ಮೇಲೆ, ಎಳೆ ಮಗುವಿನ ಲಾಲನೆ ಪಾಲನೆ ಮರೆತುಹೋಗಿದೆ ಅನ್ನುವ ಹಾಗಾದ ಮೇಲೆ ಮತ್ತೆ ಹೊಸ್ತಾಗಿ ಎಲ್ಲಾ ಕಲಿಯಬೇಕಾದ್ದಿಲ್ಲವಲ್ಲ? ಅವಳಿ ಮಕ್ಕಳನ್ನು ಸಾಕಿದ ಹಾಗೆ ಶುರೂವಿನಲ್ಲಿ ಸ್ವಲ್ಪ ಕಷ್ಟ ಅನಿಸಿದರೂ ಆಮೇಲೆ ಒಂದು ಅಂಕ ಮುಗಿದ ಹಾಗಾಗುತ್ತೆ. ಆಗಿದ್ದೂ ಹಾಗೇ ಅನ್ನಿ.

ಈ ಮಕ್ಕಳ ಅಪ್ಪ ಜನಾರ್ದನ ಸ್ವಲ್ಪ ಹಳೆಗಾಲದ ಮನೋಭಾವದವನು. ಜಾತಕ, ಜ್ಯೋತಿಷ್ಯ ಇತ್ಯಾದಿಗಳಲ್ಲಿ ಭಾರೀ ನಂಬಿಕೆ. ಒಂದು ಲೆಕ್ಕದಲ್ಲಿ ಈ ಹಳೆಗಾಲ, ಹೊಸ ಕಾಲ ಅನ್ನೋದೆಲ್ಲ ಸುಳ್ಳು ಅನ್ನಿಸುತ್ತೆ. ಭವಿಷ್ಯ ಅಂದುಬಿಟ್ಟರೆ ಸಾಕು, ಎಂತೋರಿಗೂ ಕೇಳುವ ಚಪಲ. ವರ್ತಮಾನಕ್ಕಿಂತಾ ಭವಿಷ್ಯ ಕಾಲವೇ ಜನರ ನಿದ್ದೆಗೆಡಿಸುವಂತಾದ್ದು ಅನ್ನುವುದು ವಿಚಿತ್ರವಾದರೂ ಸತ್ಯ. 'ಹೀಗೇನಾದ್ರೂ ಆಗಿಬಿಟ್ಟರೆ......' ಅನ್ನುವುದರ ಕುರಿತೇ ಮನುಷ್ಯ ಜಾತಿಗೆ ಚಿಂತೆ. ಇದೇ ಹುಟ್ಟಿನವನು ನಮ್ಮ ಜನಾರ್ದನ. ಆಗ, ಈಗ ಮನೆ ಮಂದಿ ಎಲ್ಲರ ಜಾತಕದ ಪ್ರತಿ ಹೊತ್ತುಕೊಂಡು ಹೋಗಿ ಪರಿಚಯದ ಜೋಯಿಸರ ಹತ್ತಿರ ಫಲ ಕೇಳಿಕೊಂಡು ಬರೋದು ಅವನಿಗೆ ಅಭ್ಯಾಸ ಆಗಿಹೋಗಿತ್ತು. ಜೋಯಿಸರು ಒಂದೊಂದು ಜಾತಕದ ಪ್ರತಿ ಹಿಡಿದು ಕಿರೀ ನೋಡುವಾಗಲೂ ಅವನೆದೆಯಲ್ಲಿ ಅವಲಕ್ಕಿ ಭತ್ತ ಕುಟ್ಟಿದ ಹಾಗಾಗುತ್ತಿತ್ತು. ಅವರ ಬಾಯಿಂದ ಉದುರುವ ಅಣಿಮುತ್ತುಗಳನ್ನು ಹೆಕ್ಕಿಕೊಳ್ಳಲು ಕಿವಿಗಳು ಕಾತರಿಸಿ ಕಾದಿರುತ್ತಿದ್ದುವು. ಜೋಯಿಸರು ಯಾರಿಗೆ ಯಾವ ದೆಸೆ, ಯಾರಿಗೆ ಸಾಡೇಸಾತಿ,



ಯಾರಿಗೆ ಸಂಧಿಕಾಲ, ಇತ್ಯಾದಿ ಇತ್ಯಾದಿಗಳನ್ನು ವಿವರವಾಗಿ ಹೇಳಿ ಯಾವ ಶಾಂತಿ ಮಾಡಿಸಬೇಕು, ಯಾವ ದೇವರಿಗೆ ಪೂಜೆ ಮಾಡಬೇಕು, ಮುಂತಾದ್ದನ್ನು ಇವನ ತಲೆಗೆ ತುಂಬಿ, ಜೊತೆಗೆ ಕಾಗದದ ಹಾಳೆಯ ಮೇಲೆ ಬರೆದುಕೊಟ್ಟು, ಅವನು ಯಥಾಶಕ್ತಿ ಕೊಟ್ಟ ದಕ್ಷಿಣೆಯನ್ನು ಸ್ವೀಕರಿಸಿ, ಆಶೀರ್ವದಿಸಿ ಕಳುಹಿಸಿಕೊಡುತ್ತಿದ್ದರು. ದೊಡ್ಡವನು ಗಣೇಶನಿಗೆ ಇಪ್ಪತ್ತೆರಡನೇ ವಯಸ್ಸಿಗೆ ಕುಜ, ರಾಹು, ಸಂಧಿ ಅನ್ನೋದು ಜನಾರ್ದನನಿಗೆ ಬಾಯಿಪಾಠ ಆಗಿಹೋಗಿತ್ತು. 'ಆರು ತಿಂಗಳ ಮೊದಲೇ ಶಾಂತಿ ಮಾಡಿಸ್ಬೇಕು' ಅಂತ ಅವನು ಜಪ ಮಾಡೋದು ಕೇಳಿ ಕೇಳಿ ಮನೆಯವರಿಗೂ ಈ ಸಂಧಿಕಾಲ ಯಾವತ್ತು ಅನ್ನೋದು ಅಚ್ಚೊತ್ತಿದ ಹಾಗೆ ತಲೆಯಲ್ಲಿ ನಿಂತುಬಿಟ್ಟಿತ್ತು. ರಾಹು ಅನ್ನೋದು ಧನುರಾಶಿಯಲ್ಲಿ ನೀಚಸ್ಥಾನದಲ್ಲಿದ್ದಾನೆ. ಕೋದಂಡರಾಹು ದೆಸೆ ಇದ್ರೂ ನೀಚಸ್ಥಾನ ನೀಚವೇ. ಯಾವ ಗ್ರಾಚಾರ ತನ್ನ ಮಗನಿಗೆ ಕಾದು ಕೂತಿರುತ್ತದೆಯೋ ಎಂದು ಜನಾರ್ದನ ಕಂಗೆಡುತ್ತಿದ್ದ. ಹೆದರುವವರ ಮೇಲೆ ಹಲ್ಲಿ ಬಿಸಾಕಿದ ಹಾಗೆ ಇದ್ದ ಊರಲ್ಲೇ ಇಂಜಿನಿಯರಿಂಗ್ ಮುಗಿಸಿದ ಗಣೇಶ ಮುಂದಿನ ಓದಿಗೆ ಬೆಂಗಳೂರಿಗೆ ಹೋಗುತ್ತೇನೆ ಅಂತ ಹಟ ಹಿಡಿದು ಕೂರುವುದಕ್ಕೂ, ಈ ಕಡೆ ಸಂಧಿಕಾಲ ಅನ್ನೋದು ಸದ್ದಿಲ್ಲದೆ ಅವನ ಜಾತಕದ ಪ್ರಕಾರ ಅವನ ಜೀವನದಲ್ಲಿ ಕಾಲಿಡೋಕೂ ಸಮಸಮ. ಓದೋಕೆ, ದುಡಿಯೋಕೆ, ಪರವೂರಿಗೆ ಕಳಿಸೋದು ಕಳಿಸಲೇಬೇಕು. ಮನೆಯಲ್ಲಿ ಇಟ್ಟುಕೊಂಡು ಉಪ್ಪಿನಕಾಯಿ ಹಾಕೋಕೆ ಬರಲ್ವಲ್ಲ? ಹಾಗೆ ಉಪ್ಪಿನಕಾಯಿ ಹಾಕಬೇಕೂಂತಾದರೆ ಮಹೇಶ ಇದ್ದಾನಲ್ಲ? ಓದು ಅಂದರೆ ಅಷ್ಟಕ್ಕಷ್ಟೇ. ಅಪ್ಪನ ದಿನಸಿ ಅಂಗಡಿಯಲ್ಲಿ ಕೂತು ಕಾರುಬಾರು ಮಾಡುವುದು ಅಂದರೆ ಯಾವತ್ತೂ ಮುಂದೆ. ಅವನ ರಾಶಿಯೇ ತುಲಾರಾಶಿ. 'ತಕ್ಕಡಿ ಹಿಡಿಯೋ ಕೈ' ಅಂತ ಜೋಯಿಸರು ಹೇಳಿದ ಮೇಲೆ ಅವನ ಬಗ್ಗೆ ಜನಾರ್ದನ ಹೆಚ್ಚಿಗೆ ಕನಸು ಕಾಣುವುದಕ್ಕೆ ಹೋಗಿರಲೂ ಇಲ್ಲ. ಒಂದು ಲೆಕ್ಕದಲ್ಲಿ ತಮ್ಮಂತವರ ಮಕ್ಕಳು ಅತೀ ಬುದ್ಧಿವಂತರಾಗದೆ ಕಣ್ಣೆದುರು ಇರುವಂತಾದರೆ ಒಳ್ಳೆಯದು ಅನಿಸುವುದೂ ಇತ್ತು. ಆದರೆ ಕಾಲ ಎಂತಾದ್ದು? ಯಾರ ಮನೆಯಲ್ಲಿ ನೋಡಿದರೂ ಯಾರೋ ಒಬ್ಬರು ಅಮೆರಿಕಾದಲ್ಲಿ ತಳ ಊರಿಬಿಟ್ಟಿದ್ದಾರೆ. ಅಪ್ಪ, ಅಮ್ಮ ಮಗಳ ಬಾಣಂತನಕ್ಕೋ, ಸೊಸೆಯ ಬಾಣಂತನಕ್ಕೋ ಅಮೆರಿಕಾ ಅನ್ನುವ ದೇಶಕ್ಕೆ ವಿಮಾನದಲ್ಲಿ ಕೂತು ಹಾರಿಹೋಗಿ ವಾಪಸು ಬಂದಮೇಲೆ ನೋಡಬೇಕು ಆ ಠೇಂಕಾರವನ್ನು. ಬೀದಿಯಲ್ಲಿ ಮೂಗು ಮೇಲೆ ಮಾಡಿಕೊಂಡು ಓಡಾಡೋದನ್ನು. ನಾಕು ಜನ ಸೇರಿದಲ್ಲಿ ಯಾವ ವಿಷಯ ಮಾತಾಡುತ್ತಿದ್ದರೂ ಅದನ್ನು ಅಮೆರಿಕಾ ಕಡೆ ತಿರುಗಿಸಿ ಕೊಚ್ಚಿ ಕೊಚ್ಚಿ ಇಳಿಸಲು ಶುರು ಮಾಡಿದರು ಅಂದರೆ ಕೇಳುವವರಿಗೆ ಅವರು ಸೀದಾ ಸ್ವರ್ಗಕ್ಕೆ ಭೇಟಿ ಕೊಟ್ಟು ಹಿಂದಿರುಗಿ ಬಂದಿರುವವರೇನೋ ಅನ್ನುವ ಹೊಟ್ಟೆ ಸಂಕಟ. ಇವೆಲ್ಲಾ ಜನಾರ್ದನನ ಅತಿರೇಕದ ಕಲ್ಪನೆಗಳೂ ಇದ್ದೀತು. ಅಂತೂ ಅವನಿಗೆ ಹಾಗೆನ್ನಿಸುತ್ತಿದ್ದುದ್ದು ಹೌದು. 'ನಮ್ಮ ಗಣೇಶನಿಗೂ ಅಲ್ಲಿಯ ನೀರಿನ ಋಣ ದೇವರು ಬರೆದಿರಬಹುದು' ಎಂದುಕೊಳ್ಳುವಾಗ ಜನಾರ್ದನನಿಗೆ ಕೋಡು ಬಂದಂತಾಗುತ್ತದೆ. ವಿಮಾನದಲ್ಲಿ ಕೂತು ಮೇಲೆ ಹಾರಿದಾಗ ಉಸಿರುಕಟ್ಟಿದಂತಾಗಿ ತಟ್ಟನೆ ಕನಸು ಕಡಿದು ಹೋದಂತಾಗಿದ್ದೂ ಉಂಟು. ಸುಡುಗಾಡು ಸಂಧಿಕಾಲ ಅನ್ನುವುದೊಂದು ಮಧ್ಯೆ ಹೊಂಚುಹಾಕಿ ನಿಂತಿದೆಯಲ್ಲ? ಸಲೀಸಾಗಿ ಪರಮಾತ್ಮ ಪಾರು ಮಾಡಿದರೆ ಸಾಕು ಅಂದುಕೊಳ್ಳುತ್ತಾನೆ ಜನಾರ್ದನ. ಮಗ ಗಣೇಶ 'ಎಂ.ಬಿ.ಎ. ಓದೋಕೆ ಹೋಗೇಹೋಗೋನು ನಾನು' ಎಂದು ಹಟ ಹಿಡಿದು ಕೂತಾಗ ಭರ್ಜರಿಯಾಗಿ ಒಂದು ಸಂಧಿಶಾಂತಿ, ಮೃತ್ಯುಂಜಯ ಜಪ ಮಾಡಿಸಿ, ಅವನನ್ನು ಅವನ ಇಚ್ಛೆಗೆ ಬಿಡುವುದು ಅನ್ನುವುದು ಮನೆಯಲ್ಲಿ ತೀರ್ಮಾನವಾಯಿತು.

'ಬೇರೆ ಕಸುಬಿಲ್ಲ ನಿಮ್ಗೆ. ರಾಹು ನನ್ನನ್ನೇ ಹಿಡ್ಕೋಳ್ಳೋಕೆ ಕಾದು ಕೂತಿರ್ತಾನಾ ? ಹಂಗಾರೆ ನಾ ಹುಟ್ಟಿದ ದಿನ ಅದೆಷ್ಟು ಸಾವಿರ ಮಕ್ಕಳು ಪ್ರಪಂಚದಲ್ಲಿ ಹುಟ್ಟಿದಾವೋ, ಅವಕ್ಕೆಲ್ಲಾ ಕುಜ-ರಾಹು ಶಾಂತಿ ಮಾಡಿಸ್ತಾರಂತಾ ? ಮಾಡಿಸ್ದಿದ್ರೆ ಅವ್ರೆಲ್ಲಾ ನೆಗೆದು ಬೀಳ್ತಾರಂತಾ ?' ಗಣೇಶ ಈ ಥರದ ಅಪದ್ಧ ಮಾತಾಡಿದ್ದು ಅಮ್ಮನ ಮುಂದೆ. ಜನಾರ್ದನನ ಎದುರು ಹೇಳಿದ್ದರೆ ಅದಕ್ಕೆ ಉತ್ತರ ಇತ್ತು. ಬೇರೆ ಬೇರೆ ಊರಲ್ಲಿ ಹುಟ್ಟಿದೋರ ಜಾತಕದಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳಾಗ್ತಾವೆ ಅನ್ನೋದನ್ನ ಜೋಯಿಸರು ಅವನಿಗೆ ಯಾವತ್ತೋ ಹೇಳಿದ್ದು ಅವನ ನೆನಪಿನಲ್ಲಿತ್ತು. ಮಗ ಅಪ್ಪನ ಎದುರು ತುಟಿಪಿಟಕೆ ಅನ್ನುವವನಲ್ಲ. ಹೆದರಿಕೆ ಅಂತೇನಲ್ಲ. ಅಮ್ಮನ ಹತ್ತಿರ ಏನು ಮಾತಾಡಬೇಕಾದ್ರೂ, ನಾಲಿಗೆಗೆ ಲಗಾಮು ಹಾಕಬೇಕಾದ್ದಿಲ್ಲ. ಅಮ್ಮ ಅಂದ್ರೆ ಬಲು ಸಲೀಸು, ತಲೆಯಲ್ಲಿ ಬಂದಿದ್ದು ನಾಲಿಗೆಗೆ ಇಳಿದುಬಿಡುತ್ತೆ.



..... ಇನ್ನು ನಿಮಗೂ ಸಲಾಂ ಹೊಡೆಯಬೇಕಲ್ರೀ....

*　　*　　*

ಜೋಯಿಸರು ತಾರಾನುಕೂಲ ನೋಡಿ ದಿನ ಹೊಂದಿಸಿಕೊಟ್ಟರು. ಸ್ವತಾ ನಾಲ್ಕು ಜನ ಪುರೋಹಿತರನ್ನು ಕರೆದುಕೊಂಡು ಬಂದು ಎಲ್ಲವನ್ನೂ ಸಾಂಗವಾಗಿ ನಡೆಸಿಕೊಡುವುದಾಗಿ ಭರವಸೆ ಕೊಟ್ಟರು. ಅವರ ಪಟ್ಟಿಯ ಪ್ರಕಾರ ಬೇಕಾದ್ದೆಲ್ಲಾ ಹೊಂದಿಸಿಕೊಳ್ಳುವ ತಯಾರಿ ಶುರುವಾಯ್ತು. ಮನೆಯಲ್ಲಿ ಎಂತದೋ ಸಂಭ್ರಮ, ಗಡಿಬಿಡಿ. ಮೂಲೆ ಮೂಲೆ ಹುಡುಕಿ ಜೇಡಂಭಟ್ಟರು ಕಟ್ಟಿದ ಬಲೆ ಝಾಡಿಸಿ, ಅಂಗಳ ಬಾಗಿಲು ಚೊಕ್ಕ ಮಾಡಿ, ಅಟ್ಟದಿಂದ ಪಾತ್ರೆ ಪಗಡಿ ಇಳಿಸುವ ತರಾತುರಿಯಲ್ಲಿ ಲೀಲಾಂಬ ದಣಿದಳು. ಹೊರಗಿನ ಕೆಲಸಕ್ಕೆ ಮಹೇಶ ಸೊಂಟ ಕಟ್ಟಿದ. ಜವಳಿ ಅಂಗಡಿ, ಅಕ್ಕಸಾಲಿ ಅಂಗಡಿ, ಅಡುಗೆ ಭಟ್ಟರು ಮನೆ, ಬೇಕಾದವರಿಗೆ ಹೇಳಿಕೆ, ಎನ್ನುತ್ತಾ ಅವನ ಸ್ಕೂಟರ್ ಗಿರಿಗಿಟ್ಟಿ ಹೊಡೆಯತೊಡಗಿತು. ದಿನಸಿಗೆ ಅಡ್ಡಿ ಇಲ್ಲ. ಸ್ವಂತದ ಅಂಗಡಿಯೇ ಉಂಟು. ಜನಾರ್ದನ ನೆಪಕ್ಕೆ ಅಂಗಡಿಯಲ್ಲಿ ಕೂತಿರುತ್ತಿದ್ದೂ ಮನಸ್ಸೆಲ್ಲಾ ಇನ್ನೂ ಏನೇನು ಕೆಲಸ ಬಾಕಿ ಉಂಟು ಎನ್ನುವುದರ ಕಡೆ ತೊಡಗಿಕೊಂಡಿರುತ್ತಿತ್ತು. 'ಸಂಧಿಶಾಂತಿ ಅಂದರೆ ಅಂದುಕೊಂಡಷ್ಟು ಸಲೀಸಾಗಿ ನಡೆಯುವುದಿಲ್ಲ. ಏನೇನೋ ವಿಘ್ನ ಬಂದುಬಿಡುತ್ತೆ' ಎಂದು ಜೋಯಿಸರು ಲೋಕಾರೂಢಿಗೆನ್ನುವಂತೆ ಹೇಳಿದ್ದು ಗೋಂದು ಹಾಕಿ ಅಂಟಿಸಿದಂತೆ ತಲೆಯೊಳಗೆ ಗಟ್ಟಿಯಾಗಿ ಕೂತು ಆಗ ಈಗ ನೆಮ್ಮದಿಗೆಡಿಸುತ್ತಿತ್ತು. ಒಂದು ಸಲ ಸುಸೂತ್ರವಾಗಿ ಎಲ್ಲಾ ಮುಗಿದುಹೋದರೆ ಸಾಕು ಎಂದು ಜನಾರ್ದನ ಹರಕೆ ಕಟ್ಟಿಕೊಂಡಿದ್ದ. ಶಾಂತಿ ಮಾಡಿಸದೆ ಮಗನನ್ನು ಬೆಂಗಳೂರಿನ ಬಸ್ ಹತ್ತಿಸಲು ಅವನ ಅಳ್ಳೆದೆ ಸುತರಾಂ ಸಿದ್ಧವಿರಲಿಲ್ಲ.....

ಆ ಬೆಂಗಳೂರೋ, ಜನಾರ್ದನನಿಗೆ ನೆನೆಸಿಕೊಂಡರೇ ಮೈ ನಡುಕ. ಮೈಮೇಲೆ ನುಗ್ಗಿ ಬರುವಂತೆ ಬಸ್ಸು, ಕಾರು, ಲಾರಿ, ರಿಕ್ಷಾಗಳ ಪ್ರವಾಹ. ರಸ್ತೆ ದಾಟುವುದೆಂದರೆ ಜೀವ ಬಾಯಿಗೆ ಬಂದಂತೆ ಪುಕುಪುಕು. ಇಷ್ಟಕ್ಕೂ ಜನಾರ್ದನ ಬೆಂಗಳೂರು ನೋಡಿದ್ದು ಒಂದೇ ಸಲ. ನೆಂಟರ ಮನೆಯ ಒಂದು ಮದುವೆಗೆ ಹೋದವನಿಗೆ ತಿರುಗಿ ತನ್ನ ಊರು ಕಾಣುವವರೆಗೆ ಕಣ್ಮುಚ್ಚಿ ನಿದ್ದೆ ಹತ್ತಿರಲಿಲ್ಲ. 'ಕಣ್ಣು ಕಟ್ಟಿ ಕಾಡಲ್ಲಿ ಬಿಟ್ಟಂತೆ' ಜನಾರ್ದನ ಕಂಗೆಟ್ಟು ಹೋಗಿದ್ದ. 'ಇನ್ನು ಈ ಜನ್ಮಕ್ಕೆ ಬೆಂಗಳೂರಿನ ಸಾವಾಸ ಬೇಡ' ಅಂದುಕೊಂಡವನು ಅನಿವಾರ್ಯವಾಗಿ ಈಗ ಮಗನನ್ನು ಆ ಸಮುದ್ರಕ್ಕೆ ದೂಕಬೇಕಾಗಿದೆ. ಬೇಡ ಅನ್ನುವ ಹಾಗಿಲ್ಲ. ಬದುಕು 'ಬೇಡ' ಅಂದರೆ ಮಗ ಕೇಳುವ ಪೈಕಿಯೂ ಅಲ್ಲ. ಒಟ್ಟಿನಲ್ಲಿ ಕಾಯುವ ದೇವರು ಕೈ ಹಿಡಿಯಬೇಕೇ ವಿನಾ ನರಮನುಷ್ಯರ ಕೈಯಲ್ಲಿ ಏನೂ ಇಲ್ಲ ಎನ್ನುವ ತೀರ್ಮಾನಕ್ಕೆ ಬಂದು ನೆಮ್ಮದಿ ಕಂಡುಕೊಳ್ಳುವ ಪ್ರಯತ್ನ ಮಾಡುತ್ತಿದ್ದ ಜನಾರ್ದನ.

ಇನ್ನೇನು ಶಾಂತಿ ಮನೆಗೆ ಮಧ್ಯ ಒಂದೇ ದಿನ ಬಾಕಿ. ನಾಳೆ ಇಷ್ಟು ಹೊತ್ತಿಗೆ ಅಂದರೆ ಹತ್ತಿರದ ಬಳಗ ಮನೆಗೆ ಬಂದುಬಿಟ್ಟಿರುತ್ತಾರೆ. ಮೂರುಸಂಜೆ ಹೊತ್ತು ಅಂಗಡಿಯಲ್ಲಿ ಗಿರಾಕಿಗಳು ಗಿಜಿಗುಟ್ಟುತ್ತಿದ್ದಾರೆ. ತಿಂಗಳ ಮೊದಲ ವಾರ ಅಂದರೆ ಹೀಗೇ. ತುರಿಸಿಕೊಳ್ಳುವುದಕ್ಕೂ ಪುರುಸೊತ್ತಿಲ್ಲದೆ ಜನಾರ್ದನ ಅಂಗಡಿಯ ಹುಡುಗರು ತೂಗುವ ತಕ್ಕಡಿಯ ಮೇಲೆ ಒಂದು ಕಣ್ಣು, ಕೈಲಿರುವ ಗಿರಾಕಿಗಳ ಸಾಮಾನುಗಳ ಪಟ್ಟಿಯ ಮೇಲೊಂದು ಕಣ್ಣು ಇಟ್ಟುಕೊಂಡು, ದರ ಲೆಕ್ಕ ಹಾಕಿ ದುಡ್ಡು ಇಸಿದುಕೊಳ್ಳುವ ಗಡಿಬಿಡಿಯಲ್ಲಿ ಕಂಠಮಟ್ಟ ಮುಳುಗಿಹೋಗಿರುವಾಗ ಸುದ್ದಿ ಬಂತು, 'ಮಹೇಶ ಹೋಗಿಬಿಟ್ಟ.'

*　　*　　*

ಕ್ರೂರಗ್ರಹಗಳ ಯಾವ ವಕ್ರದೃಷ್ಟಿಯೂ ಇಲ್ಲದಿದ್ದ ದೈತ್ಯನಂತಾ ಹುಡುಗನಿಗೆ ಮೃತ್ಯುವಾಗಿದ್ದು ಒಂದು ಖಾಲಿ ಎಳನೀರು ಬುರುಡೆ ಅಂದರೆ ಯಾರು ನಂಬಬೇಕು ? ಸ್ಕೂಟರ್ ನಿಲ್ಲಿಸಿ ಒಂದು ಗೂಡಂಗಡಿಯ ಎದುರಲ್ಲಿ ಒಂದು ಜರ್ದಾ ಬೀಡಾ ಕಟ್ಟಿಸಿಕೊಳ್ಳಲು ನಿಂತಿದ್ದ. ಪಕ್ಕದಲ್ಲಿ ಹಾದು ಹೋದ ಬಸ್ಸಿನ ಕಿಟಕಿಯಿಂದ ಎಳನೀರು ಕುಡಿದು ಪುಣ್ಯಾತ್ಮರ್‍ಯಾರೋ ಖಾಲಿ ಬುರುಡೆ ಬಿಸಾಕಿದ್ದು ಒಂದು ಹೆಳೆ. ಆ ಬುರುಡೆ ಇವನ ಬುರುಡೆಯ ಮೇಲೆ ಬಿದ್ದು ಬುರುಡೆ ಒಡೆದಿತ್ತು. ಹೀಗೂ ಉಂಟಾ ಅನ್ನಬೇಡಿ. ಹೀಗೂ ಆಗುತ್ತದೆ ಅಂದುಕೊಳ್ಳಿ. ಯಾಕೆಂದರೆ ಹೀಗಾಗಿದ್ದಂತೂ ಹೌದು, ಸತ್ಯಕ್ಕಾರೂ.....


**ವಸುಮತಿ ಉಡುಪ**
'ಗೌರಿ', ೪ನೇ ಕ್ರಾಸ್, ಗಾಂಧಿನಗರ
'ಎ' ಬ್ಲಾಕ್, ಶಿವಮೊಗ್ಗ - ೫೭೭ ೨೦೧




# ೨೧ನೇ ಶತಮಾನದ ಮುನ್ನಡೆ

ಶತಶತಮಾನಗಳು ಉರುಳಿದರೂ ನಮ್ಮ ಹಳೆಯ ಪದ್ಧತಿಗಳು, ಅರ್ಥವಿಲ್ಲದ ಸಂಪ್ರದಾಯಗಳು ಹಾಗೂ ಮೂಢ ನಂಬಿಕೆಗಳನ್ನು ಬಿಟ್ಟಿಲ್ಲ. ವಿಜ್ಞಾನದ ಪ್ರಗತಿ, ಕಂಪ್ಯೂಟರ್ ಯುಗ, ವೈಚಾರಿಕ ಮನೋಭಾವ, ಇತ್ಯಾದಿಗಳನ್ನು ಸಾಧಿಸಿದ್ದೇವೆ ಎಂದು ಸಾರಿದರೂ ಹಳೆಯ ಕಂದಾಚಾರಗಳು ನಡೆದೇ ಇವೆ. ನಮ್ಮ ದೇಶದ ಸಂಸ್ಕೃತಿಯನ್ನು ಉಳಿಸಿಕೊಳ್ಳುವಂತಹ ವಿಚಾರ, ವಿಷಯಗಳನ್ನು ಕಾಪಾಡಿಕೊಂಡು, ಕಲೆ, ಅರ್ಥಬದ್ಧವಾದ ಹಲವು ಸಂಸ್ಕಾರಗಳನ್ನು ಆಚರಣೆಯಲ್ಲಿ ಇಟ್ಟುಕೊಂಡು, ಅಸಂಬದ್ಧವಾದ ಅರ್ಥವಿಲ್ಲದ ಕೆಟ್ಟ ಪದ್ಧತಿಗಳನ್ನು ತೊಡೆದು ಹಾಕುವುದರಲ್ಲಿ ನಾವೆಷ್ಟು ಸಮರ್ಥರಾಗಿದ್ದೇವೆ ? ಸಂಸ್ಕಾರ, ಆಚಾರ, ಸಂಪ್ರದಾಯದ ಹೆಸರಿನಲ್ಲಿ ಆಗಿರುವ, ಆಗುತ್ತಿರುವ ಹಿಂಸೆ, ಅನ್ಯಾಯ, ಅದರಿಂದ ಬೀಳುವ ಚೇತರಿಸಿಕೊಳ್ಳಲಾಗದಂತಹ ಹೊಡೆತ, ಆತ್ಮಾಭಿಮಾನವನ್ನು ಸಂಪೂರ್ಣವಾಗಿ ತೊಡೆದು ಹಾಕುವಂತಹ ಹಳೇ ಪದ್ಧತಿಗಳಿಗೆ ಕೊನೆಯಿಲ್ಲವೆ ? ೨೦೦೩ರಲ್ಲೂ ಏನೂ ಮಾಡುವಂತಿಲ್ಲವೆ ? ಎಚ್ಚೆತ್ತ ಮಹಿಳೆಯರು, ಕಾನೂನು, ಮಸೂದೆ ಎಲ್ಲಕ್ಕೂ ಹೊಡೆದಾಡುತ್ತಾರೆ. ಆದರೆ ಬಡತನ, ಮೂಢತನ, ಕಾರ್ಪಣ್ಯದಿಂದ ನರಳುತ್ತಿರುವ ನಿರಕ್ಷರ ಕುಕ್ಷಿಗಳ ಉದ್ಧಾರಕ್ಕಾಗಿ ಸ್ವಲ್ಪ ಗಮನ ಕೊಟ್ಟರೆ ಸಮಾಜ ಎಚ್ಚೆತ್ತು ಮುಂದೆ ಸಾಗುವುದರಲ್ಲಿ ಸಂಶಯವಿಲ್ಲ. ಈಚೆಗೆ ನಡೆದ ಒಂದು ಸತ್ಯ ಘಟನೆಯಿಂದ ಮನ ತಲ್ಲಣಗೊಂಡಿತು.

* * *

''ಮದುವೆ ಗೊತ್ತಾಗಿದೆ, ಅಡಿಗೆಗೆ ಮತ್ತು ಮದುವೆ ಮನೆ ಕೆಲಸಕ್ಕೆ ಯಾರಾದರೂ ಬೇಕು ಅಂದಿದ್ದರಲ್ಲಾ, ನಮ್ಮನೆ ಹತ್ತಿರ ಭಾಗೀರತಮ್ಮ ಅಂತಿದ್ದಾರೆ. ಎಲ್ಲಾ ಕೆಲಸ ಬರುತ್ತೆ ಅಂದ್ರು. ನಿಮಗೆ ಬೇಕೇ ?'' ಗೇಟಿನ ಹತ್ತಿರ ನಿಂತಿದ್ದ ನನ್ನನ್ನು ಕಂಡು ಮಠದಿಂದ ವಾಪಸ್ಸು ಹೋಗುತ್ತಿದ್ದ ಅಂಬುಜಮ್ಮ ಕೇಳಿದರು.

''ಖಂಡಿತ ಬೇಕು. ಆದ್ರೆ ಈ ಕಾಲದಲ್ಲಿ ತುಂಬಾ ದುಬಾರಿ ಆದಲ್ಲಿ ನಂಗೆ ಆಗಲ್ಲ! ಹೆಚ್ಚು ಕಡಿಮೆ....''

''ಅಯ್ಯೋ, ಹಾಗೇನಿಲ್ಲ, ಪಾಪ, ತುಂಬಾ ಕಷ್ಟದಲ್ಲಿದ್ದಾರೆ. ನಾಳೆ ಕರ್ಕೊಂಡು ಬರ್ತೀನಿ, ನೀವೇ ಮಾತಾಡಿ.'' ಅಂಬುಜಮ್ಮ ಹೊರಟರು.

ಮಾರನೆ ದಿನ ಭಾಗೀರತಮ್ಮನನ್ನು ಕರೆದುಕೊಂಡು ಅಂಬುಜಮ್ಮ ಬಂದರು. ಅಚ್ಚಕಪ್ಪಿನ ಗುಂಗರು ಕೂದಲು, ಗೋಧಿ ಮೈ ಬಣ್ಣ, ಎತ್ತರವೂ ಅಲ್ಲ, ಕುಳ್ಳೂ ಅಲ್ಲದ ನಿಲುವು. ಉಟ್ಟ ಮಾಸಲು ಸೀರೆಯಾದರೂ ಬಹಳ ಲಕ್ಷಣವಾದ ಹೆಂಗಸು. ೩೦ ಅಥವಾ ೩೫ರ ಪ್ರಾಯ. ''ಬನ್ನಿ,'' ಒಳಗೆ ಕರೆದು ಕೂರಿಸಿದೆ. ''ನೀವು ನೀವು ಮಾತಾಡಿ. ನಾನು ನಮ್ಮಣ್ಣನ ಮನೆಗೆ ವಿಜಯನಗರಕ್ಕೆ ಹೋಗಬೇಕು, ಬರ್ತೀನಿ'' ಅಂಬುಜಮ್ಮ ಎದ್ದರು. ''ಭಾಗೀರತಮ್ಮ, ನಿಮಗೆ ಬಸ್ಸಿನ ನಂಬರ್ ಗೊತ್ತಲ್ವೆ। ಸೀದಾ ಮನೆಗೆ ಹೋಗ್ತೀರಾ''. ''ಸರಿ, ಹುಷಾರಮ್ಮಾ ಕ್ರಾಸು ಮಾಡುವಾಗ ಜಾಗ್ರತೆ''. ''ತುಂಬಾ ಥ್ಯಾಂಕ್ಸ್ ಅಂಬುಜಮ್ಮ ಎಲೆ ಅಡಿಕೆ ತಗೊಳ್ಳಿ.''

''ನಿಮಗೆ ಅಡಿಗೆ ಕೆಲಸವೆಲ್ಲಾ ಬರುತ್ತೆ ಅಂದ್ರು. ನೀವು ಎಲ್ಲಾ ತರಹದ ಅಡಿಗೇನೂ ಮಾಡ್ತೀರಾ ? ಮದ್ವೆ ಮನೆ. ಊರಿಂದ ನೆಂಟರಿಷ್ಟರು, ದೆಹಲಿ, ಕಲ್ಕತ್ತಾಯಿಂದ ಸ್ನೇಹಿತರು, ಹೀಗೆ ಎಲ್ರೂ ಬರೋದ್ರಿಂದ ನಿಮಗೆ ರೊಟ್ಟಿ, ಪಲ್ಯ ಎಲ್ಲಾ ಮಾಡಕ್ಕೆ ಬರುತ್ತೆ ?''

''ನಮ್ಮಡಿಗೆ ಎಲ್ಲಾ ಗೊತ್ತು. ಆ ಕಡೆ ಅಡಿಗೆ ಹೇಳಿ ಕೊಟ್ಟರೆ ಮಾಡ್ತೀನಿ. ಎರಡು ದಿನ ತೋರಿಸಿಕೊಟ್ರೆ ಸಾಕು'' ಬಹಳ ನಯ ವಿನಯದಿಂದ ಹೇಳಿದರು.

''ನೋಡಿ ಭಾಗೀರತಮ್ಮ ಬೆಳಿಗ್ಗೆ ಆರು ಗಂಟೆಗೆ ಸರಿಯಾಗಿ ಬರಬೇಕು. ತಪ್ಪಿಸ್ಕೊಳ್ಳುವುದು, ರಜಾ ಹಾಕುವುದು ಈ ಸಮಯದಲ್ಲಿ ನನಗೆ ಆಗುವುದಿಲ್ಲ. ಕಾಫಿ, ತಿಂಡಿ, ಅಡಿಗೆ, ಊಟ ಎಲ್ಲಾ ಆದ ಮೇಲೆ ರಾತ್ರಿಗೆ ಅಡಿಗೆ ಮಾಡಿಟ್ಟು ಆರು ಗಂಟೆಗೆ ಹೋದರೆ ಸಾಕು. ಇದು ನಿಮಗೆ ಒಪ್ಪಿಗೆ ಆದ್ರೆ, ಸಂಬಳ ಎಷ್ಟು ಕೊಡಬೇಕು ಹೇಳಿ'' ಎಂದೆ.

ಆಕೆ ಮುಖ ಕೆಳಗೆ ಹಾಕಿದರು. ''ನಿಮಗೊಂದು ವಿಷಯ ಹೇಳಬೇಕು. ಮುಚ್ಚು ಮರೆ ಬೇಡ.''

ನನಗೆ ಗಾಬರಿ ಆಯಿತು. ''ಏನದು ?'' ಎಂದೆ.

''ನಮ್ಮೆಜಮಾನರು ಹೋಗಿ ಆರು ತಿಂಗಳಾಗಿದೆ. ನಾನು ವಿಧವೆ. ಸಕೇಶಿ. ಮದುವೆ ಮನೆ ಕೆಲಸ, ಮಂಗಳ ಕಾರ್ಯ ಅಂತ ನಿಮಗೆ ಏನಾದರೂ ಅಭ್ಯಂತರ ಇದ್ದರೆ....''

ನನಗೆ ಬಹಳ ಸಂಕಟವಾಯ್ತು. ಅಯ್ಯೋ ಪಾಪ। ಏನಾಗಿತ್ತು, ಏನನ್ಯಾಯ।

''ತುಂಬಾ ಕಾಹಿಲೆ ಮಲಗಿ, ಆರು ತಿಂಗಳು ನರಳಿ ಹೋದರು. ಇದ್ದುದೆಲ್ಲಾ ಕೈ ಬಿಟ್ಟಿತಮ್ಮ...'' ಕಣ್ಣೊರಿಸಿಕೊಂಡರು.

''ಛೇ, ಛೇ ನಿಮಗೆ ಸಹಾಯ ಮಾಡಬೇಕಾದ್ದು ನಮ್ಮ ಕರ್ತವ್ಯ. ನನಗೆ ಯಾವ ಅಭ್ಯಂತರವೂ ಇಲ್ಲ. ನಾಳೆಯಿಂದಲೇ ಕೆಲಸಕ್ಕೆ ಬನ್ನಿ. ಸಂಬಳದ ಮಾತೇ ಆಡ್ಲಿಲ್ಲ।'' ಎಂದೆ.

''ಅಮ್ಮಾ। ಮದ್ವೆ ಮನೆ ಕೆಲಸ ಅಂತೀರ. ಎರಡು ತಿಂಗಳಿದೆ ಅಂದ್ರೆ ನಾನು ಇಲ್ಲೇ ಕೆಲಸ ಮಾಡ್ಕೊಂಡು ಇದ್ರೆ ಹೇಗೆ, ನಿಮ್ಗೂ ಅನುಕೂಲ ಅಲ್ವೇ ?'' ಅಂದ್ರು.

ನನಗೆ ತಟ್ಟನೆ ಏನೂ ಹೇಳಲಾಗದೆ ''ಆದರೆ....'' ಎನ್ನುವಷ್ಟರಲ್ಲಿ ಆಕೆ ನನ್ನ ಕಾಲು ಹಿಡಿದು ''ಅಮ್ಮಾ ಆದರೆ ಅಂತ ಅನ್ಬೇಡಿ. ಕಣಕಟ್ಟೆ ಹತ್ತಿರ ಸಣ್ಣ ಹಳ್ಳಿ ನನ್ನೂರು. ಮೂರು ಮಕ್ಕಳು. ಹಳ್ಳಿಯಲ್ಲಿ ತಾಯಿ ಮನೇಲಿ ಬಿಟ್ಟು ಬಂದಿದ್ದೇನೆ. ಕೆಲ್ಸ ಹುಡುಕಲು ಇಲ್ಲಿಗೆ ಬಂದು ತಿಂಗಳಾಯಿತು. ನೆಂಟರ ಮನೆಯಲ್ಲಿ ಇದ್ದೀನಿ. ಕೆಲ್ಸ ಸಿಗಲಿಲ್ಲ, ಅವರಿಗೆ ಬೇಜಾರಾಗದೆ ಇರುತ್ಯೇ. ನಾನು ಇಲ್ಲಿದ್ದುಕೊಂಡೇ ಬೇರೆ ಕಡೆ ಪ್ರಯತ್ನ ಮಾಡ್ತೀನಿ. ಇಲ್ಲ ಅನ್ಬೇಡಿ. ಸಂಬಳ ನಿಮ್ಮ ಮನಸ್ಸಿಗೆ ಬಂದಷ್ಟು ಕೊಡಿ. ಜಾಗ ಮಾತ್ರ ಕೊಡಿ'' ಅಂಗಲಾಚಿದರು.

''ಆಗಲಮ್ಮಾ। ನಾಳೇನೆ ಬನ್ನಿ, ನಂಗೂ ಅನುಕೂಲ. ಇಗೊಳ್ಳಿ ಬಸ್ಸಿಗೆ ಹಣ''.

''ತುಂಬಾ ಉಪಕಾರ ಆಯಿತಮ್ಮಾ. ನಿಮ್ಮ ಋಣ ತೀರಿಸಲಾರೆ.'' ನಮಸ್ಕರಿಸಿ ಹೊರಟರು.

* * *

ಮದುವೆ ಮನೆಯ ಸಡಗರ, ಸಂಭ್ರಮದಲ್ಲಿ ಮನೆಯವರಿಗಿಂತ ಹೆಚ್ಚಾಗಿ ಪಾಲ್ಗೊಂಡರು ಭಾಗೀರತಮ್ಮ.

ಹಸೆಗೆ ಕರೆದು ಹಾಡು, ಉರುಟಣೆ, ಆರತಿ, ನಾಗೋಲಿ ಎಲ್ಲಕ್ಕೂ ತಮ್ಮ ಇಂಪಾದ ಕಂಠದಲ್ಲಿ ಹಾಡಿದಾಗ ಬಂದವರೆಲ್ಲಾ ಅವರು ಯಾರು, ಸಂಗೀತ ಎಲ್ಲಿ ಕಲಿತರು ಎಂದು ಕೇಳಿದರು. ಬಾಗಿನದ ತಿಂಡಿಗಳ ವೈಖರಿ, ಎಲ್ಲರನ್ನೂ ಉಪಚರಿಸಿ ವಿಶ್ವಾಸ, ವಿನಯದಿಂದ ನಡೆದುಕೊಂಡ ರೀತಿ ಎಲ್ಲರ ಮೆಚ್ಚುಗೆ ಗಳಿಸಿತು. ಎರಡು ತಿಂಗಳಿಂದ ಜೊತೆಯಲ್ಲೇ ಇದ್ದು, ಸ್ವಂತದವರಂತೆ ಆಗಿಬಿಟ್ಟಿದ್ದರು. ಮಗಳು ಗಂಡನ ಮನೆಗೆ ಹೊರಟಾಯಿತು. ನಮ್ಮವರು ಮದುವೆ ಮುಗಿದ ವಾರಕ್ಕೇ ಕೆಲಸಕ್ಕೆ ಹಾಜರಾಗಬೇಕಾಗಿತ್ತು. ಹಾಗಾಗಿ, ಮದುವೆ ಮನೆಯ ಉಳಿದ ಎಲ್ಲಾ ಕಾರುಭಾರ ಮುಗಿಸಿ, ನಾನೂ ದೆಹಲಿಗೆ ಹೊರಡಲು ರಿಸರ್ವೇಷನ್ ಮಾಡಿಸಿ, ಭಾಗೀರತಮ್ಮನವರನ್ನು ಕಳುಹಿಸಲು ಅನುವಾದೆ. ಅಷ್ಟು ಹೊತ್ತಿಗೆ ಅವರು ಬೇರೊಂದು ಕಡೆ ಕೆಲಸ ನೋಡಿಕೊಂಡಿದ್ದೇನೆಂದು ತಿಳಿಸಿ, ಅವರ ಕಷ್ಟಕಾಲದಲ್ಲಿ ಸಹಾಯ ಮಾಡಿದ್ದಕ್ಕೆ ಕೃತಜ್ಞತೆ ಹೇಳಿ ಹೊರಟರು. ''ಭಾಗೀರತಮ್ಮ, ನಾವು ಇನ್ನಾರು ತಿಂಗಳಲ್ಲಿ ಬೆಂಗಳೂರಿಗೇ ಟ್ರಾನ್ಸ್‌ಫರ್ ತಗೊಂಡು ಬರುತ್ತೇವೆ. ಆಗ ಖಂಡಿತ ಬಂದು ನೋಡಿ. ಮನೆ, ಜನ ಎಲ್ಲಾ ನಿಮಗೆ ತಿಳಿದಿರುವುದರಿಂದ ಹೆಚ್ಚಿಗೇನೂ ಹೇಳುವಷ್ಟಿಲ್ಲ, ಆಗ ನನ್ನ ಕೈಲಾದಷ್ಟು ಸಹಾಯ ಮಾಡುತ್ತೇನೆ'' ಎಂದೆ.

''ಇದಕ್ಕಿಂತ ಇನ್ನೇನು ಬೇಕಮ್ಮ। ನನ್ನವರೆಲ್ಲಾ ಕೈ ಬಿಟ್ಟಾಗ ನೀವು ಕೈ ಹಿಡಿದಿರಿ. ಖಂಡಿತ ಬಂದು ನೋಡಿಕೊಂಡು ಹೋಗುತ್ತೇನೆ'' ಎಂದರು.



ನವಕರ್ನಾಟಕ ಪ್ರಕಾಶನ ಸಂಸ್ಥೆಯ ನಿರ್ದೇಶಕರಲ್ಲೊಬ್ಬರಾಗಿ ಹಲವು ವರ್ಷ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿ ಇತ್ತೀಚೆಗೆ ೨-೧೧-೨೦೦೩ರಂದು ನಿಧನರಾದ ಹಿರಿಯ ಸಂಗಾತಿ ಪಿ. ರಾಮನ್ ಅವರ ನೆನಪಿಗೆ ''ಹೊಸತು'' ಗೌರವ ಸಲ್ಲಿಸುತ್ತದೆ.

* * *

ದೆಹಲಿಯಿಂದ ಬೆಂಗಳೂರಿಗೆ ಬರಲು ವರ್ಷವೇ ಆಯಿತು. ಬಂದು ಎಲ್ಲಾ ಸೆಟಲ್ ಆಗುವ ಹೊತ್ತಿಗೆ ಎರಡು ತಿಂಗಳ ಮೇಲಾಯಿತು. ಭಾಗೀರತಮ್ಮನ ಸುಳಿವು ಸಿಗಲಿಲ್ಲ. ಅಂಬುಜಮ್ಮನವರನ್ನು ವಿಚಾರಿಸಿದಾಗ ಅವರ ನೆಂಟರಿಗೂ ಏನೂ ತಿಳಿಯದು, ನಮ್ಮನೆ ಮದುವೆ ಕೆಲಸಕ್ಕೆ ಬಂದವರು ಅವರಿಗೊಂದಷ್ಟು ಹಣ ಕೊಟ್ಟು ಹೋದವರು ಮತ್ತೇ ಬರಲಿಲ್ಲ, ಹಳ್ಳಿಯಲ್ಲೇ ಇರಬಹುದು ಎಂದರಂತೆ. ಇದಾದ ನಾಲ್ಕು ತಿಂಗಳ ನಂತರ ಒಂದು ಮಧ್ಯಾಹ್ನ ಎರಡು ಗಂಟೆ ಸಮಯದಲ್ಲಿ ಕರೆ ಗಂಟೆಯ ಧ್ವನಿಗೆ ಎದ್ದೆ. ಬಾಗಿಲ ಬಳಿ ಕೆಂಪು ಸೀರೆಯನ್ನುಟ್ಟ ಮಡಿ ಹೆಂಗಸರೊಬ್ಬರು ನಿಂತಿದ್ದರು. ''ಯಾರಮ್ಮಾ ?'' ಎಂದೆ.

ಆ ವ್ಯಕ್ತಿ ನಕ್ಕು ''ಗುರುತು ಸಿಗಲಿಲ್ಲವೇ'' ಎಂದಾಗ ಧ್ವನಿಯಿಂದ ತಿಳಿಯಿತು – ಭಾಗೀರತಮ್ಮ !

''ಅಂ। ಏನಾಯಿತು ಭಾಗೀರತಮ್ಮ! ಇದೇನು ವೇಷ! ನಿಮ್ಮನ್ನು ಈ ಊರಿಗೆ ಬಂದಾರಭ್ಯ ನೆನೆಸಿಕೊಳ್ಳುತ್ತಿದ್ದೆ. ನಿಮ್ಮ ಪತ್ತೆ ತಿಳಿಯಲಿಲ್ಲ, ಛೇ, ಛೇ ಒಳಗೆ ಬನ್ನಿ'' ಎಂದೆ. ಶಾಕ್‌ನಿಂದ ಸುಧಾರಿಸಿಕೊಳ್ಳಲು ಸಮಯ ಬೇಕಾಯಿತು.

ಆಕೆ ತಮ್ಮ ಕಥೆ ಹೇಳಿದರು –

ನಮ್ಮನೆಯಿಂದ ಹಳ್ಳಿಗೆ ಹೋಗಿ, ಅಲ್ಲಿ ಅವರ ಖರ್ಚಿಗಿಷ್ಟು ಕೊಟ್ಟು ಕೆಲಸ ಕೊಡುತ್ತೇನೆಂದು ಹೇಳಿದವರ ಬಳಿಗೆ ಬಂದರಂತೆ. ಅವರು ನಮಗೆ ಈಗ ಬೇಡ, ಬೇಕಾದಾಗ ಕರೆಯುತ್ತೇನೆ ಎಂದುಬಿಟ್ಟರು. ಬಾಣಂತನದ ಮನೆ ಇದೆ. ಮೂರು ತಿಂಗಳು ಮಾಡುತ್ತೀರಾ ಎಂದು ಪಕ್ಕದವರು ಹೇಳಿದಾಗ, ಸಧ್ಯ ಕೆಲಸ ಸಿಕ್ಕಿದರೆ ಸಾಕು ಅಂತ ಒಪ್ಪಿಕೊಂಡೆ. ಅಲ್ಲಿಗೆ ಹೋಗಿ ಒಂದು ವಾರಕ್ಕೆಲ್ಲಾ ಆ ಮನೆಯ ಹಿರಿಯರು ಬಂದರು. ಮನೆಯಾಕೆ ನನ್ನ ಕರೆದು, ನನಗೆ ಸಂಪ್ರದಾಯ ಮಡಿ, ಮೈಲಿಗೆ ತಿಳಿಯದು. ನಿಮ್ಮ ಕೈಲಿ ನಮ್ಮ ಅತ್ತೆ, ಮಾವನವರು ಊಟ ಮಾಡುಲ್ಲವಂತೆ. ದಯವಿಟ್ಟು ಏನೂ ತಿಳಿದುಕೊಳ್ಳದೆ ಈ ಹದಿನೈದು ದಿನದ ಸಂಬಳ ತೆಗೆದುಕೊಂಡು ಹೋಗಿ. ಬೇಜಾರು ಮಾಡಿಕೊಳ್ಳಬೇಡಿ ಅಂದುಬಿಟ್ಟರು. ಯಾರೋ ಅಲ್ಲೊಂದು ಅಡಿಗೆ ಕೊಠಡಿ ನಡಸ್ತಾ ಇದ್ದಾರೆ, ಇಲ್ಲಿ ವಿಚಾರಿಸಿ ಅಂದರು. ಅವರು ನನ್ನನ್ನು ನೋಡಿದ ಕೂಡಲೆ, ಕೆಲಸವಿಲ್ಲ ಎಂದರು. ನನ್ನ ಜೊತೆಗೇ ಬಂದ ನನ್ನ ವಯಸ್ಸಿನ ಮುತ್ತೈದೆಯನ್ನು ಕೆಲಸಕ್ಕೆ ತೆಗೆದುಕೊಂಡರು. ನನ್ನ ಸಪ್ಪೆ ಮುಖ ನೋಡಿ, ಅವರಿಗೆ ಏನೆನ್ನಿಸಿತೋ, ''ಇಲ್ಲಿ, ಆಚಾರ, ಅನುಷ್ಠಾನ ಹೆಚ್ಚು. ಸಂಪ್ರದಾಯಸ್ಥರು ಮಾಡುವ ಶ್ರಾದ್ಧ, ಮಾಸಿಕ ಇತ್ಯಾದಿಗಳಿಗೆ ನೀವು ಮಡಿಗೆ ಬರುವುದಿಲ್ಲ. ಹಾಗಾಗಿ ನಿಮಗೆ ನಾನು ಸಹಾಯ ಮಾಡಲಾರೆ'' ಅಂದರು. 'ಮುಂದೇನು ?' ಎಂಬ ಬೃಹದಾಕಾರವಾದ ಪ್ರಶ್ನೆ ಪ್ರತಿ ನಿಮಿಷ ಕಾಡಿಸುತ್ತಿತ್ತು. ಆದರೆ ದೇವರ ದಯೆ ! ನನ್ನವರ ದಾಯಾದಿಯೊಬ್ಬರು ತೀರಿಕೊಂಡರು. ಅವರೆಲ್ಲಾ ಕರ್ಮ ಮಾಡಲು ಗೋಕರ್ಣಕ್ಕೆ ಹೊರಟರು. ನಾನೂ ಅವರೊಂದಿಗೆ ಹೋಗಿ ತಲೆಭಾರ ಇಳಿಸಿಕೊಂಡು ಬಂದೆ. ಈಗ ಬೇಕಾದಷ್ಟು ಕೆಲಸ ಬರತ್ತೆ. ಜೀವನಕ್ಕೆ ತೊಂದರೆ ಇಲ್ಲ. ನಿಮ್ಮನ್ನು ನೋಡಿ ವರ್ಷವೇ ಆಯಿತು. ಅದಕ್ಕೇ ಬಂದೆ.''

ನಾನು ಮೂಕಳಾಗಿದ್ದೆ. ೧೯೩೭ರಲ್ಲಿ ದ. ರಾ. ಬೇಂದ್ರೆಯವರ ಕವನ ''ಪುಟ್ಟ ವಿಧವೆ'' ಕಣ್ಣಿಗೆ ಕಟ್ಟಿತು. ಕುರುಡು ಸಂಪ್ರದಾಯ, ಮೂಢನಂಬಿಕೆಗೆ ಕೊನೆ ಎಂದು ? ''ತಲೆ ಭಾರ ಇಳಿದಿತ್ತು, ಅಂಗಾರ ಬೆಳೆದಿತ್ತು. ಮೈಯನ್ನು ಮುಚ್ಚಿತ್ತು ಕೆಂಪು ಸೀರೆ....'' ಕುರುಡು ಧರ್ಮಕ್ಕೆ ಸ್ಮಾರಕವು ನಿಂತಂತಾಕೆ, ಮೈ ಮರೆತು ನಿಂತಾಗ್ಗೆ ಗೂಗೆ ಹಾಡಿತ್ತು. ೨೦೦೩. ನಾವು, ನಮ್ಮ ಮುನ್ನಡೆ ಎತ್ತ ಸಾಗಿದೆ ! ಉತ್ತರ ಸಿಗುವುದೇ !

**ಕಮಲಾ ರಾಮಸ್ವಾಮಿ**
೪೧೦, ೧ನೇ ಲಿಂಕ್ ರಸ್ತೆ, ೫ನೇ ಮುಖ್ಯರಸ್ತೆ ಜಯನಗರ ೩ನೇ ಬ್ಲಾಕ್, ಬೆಂಗಳೂರು - ೫೬೦ ೦೧೧

ನಾನು ಯಾರೆನ್ನುವುದು
ಅವರಿಗೂ ಗೊತ್ತು.
ಆದರೆ ಕುಹಕದ ನಿರ್ಲಕ್ಷ್ಯ.
ಅವರು ಕೇಳುತ್ತಾರೆ ನನ್ನ :
ಯಾರು ನೀನು ?
ಅವರಿಗೆ ಹೇಳುತ್ತೇನೆ :
ಈ ತಲೆ ಶಂಭೂಕನದು
ಇವು ಏಕಲವ್ಯನ ಕೈಗಳು
ಈ ಹೃದಯ ಕಬೀರನದು
ನಾನು ಜಾಬಾಲಿ ಸತ್ಯಕಾಮ
ಆದರೆ ನನ್ನ ಪಾದಗಳು ಮಾತ್ರ
ಇವತ್ತಿಗೂ ಅಸ್ಪೃಶ್ಯ
ಈ ದಿನ
ನಾನೊಬ್ಬ ಮನುಷ್ಯ.
ಇಷ್ಟು ಸಾಕಲ್ಲ ಉತ್ತಮ ಮುಕ್ತಾಯಕ್ಕೆ ?
ಹೌದು, ನೀವು ಯಾರು ?

ಮೂಲ ಗುಜರಾತಿ : **ಯಶವಂತ ವಘೇಲಾ**
ಕನ್ನಡಕ್ಕೆ : **ಬಸೂ**
೪೨, ಪ್ರಸಾದ ಲಾಜ್, ಗದಗ



# ಭಾರತ ಚೀನಾ ನಡುವೆ ಅಭಿವೃದ್ಧಿ ಸಮರವೆ ?

ಚೀನಾದ ಏಳಿಗೆಯು ಕಾರ್ಮಿಕರ ಮತ್ತು ಕೃಷಿ ಕಾರ್ಮಿಕರ ಅಭಿವೃದ್ಧಿಯಲ್ಲಿ ವ್ಯಕ್ತಗೊಂಡಿದೆ. ಚೀನಾವು ತನ್ನ ಅಪರಿಮಿತ ವೇಗದ ಕೈಗಾರಿಕಾ ಕ್ರಾಂತಿ ಮತ್ತು ಮೂಲಭೂತ ಸೌಕರ್ಯಗಳ ಅಭಿವೃದ್ಧಿಯಿಂದ ಉತ್ತಮ ಗುಣಮಟ್ಟದ ಉತ್ಪನ್ನಗಳನ್ನು ಅತ್ಯಂತ ಕಡಿಮೆ ಬೆಲೆಯಲ್ಲಿ 'ವಿಶ್ವ ಮಾರುಕಟ್ಟೆ'ಯಲ್ಲಿ ರಾಶಿ ಮಾಡಬಲ್ಲದು ಮತ್ತು ಮಾರುಕಟ್ಟೆಯ ಪಾಲನ್ನು ತನ್ನದಾಗಿಸಿಕೊಳ್ಳಬಲ್ಲದೆಂಬ ಅರಿವಿನಿಂದ ಚೀನಾದ WTO ಪ್ರವೇಶವನ್ನು ಅಭಿವೃದ್ಧಿ ಹೊಂದಿದ ದೇಶಗಳು ನಿಧಾನಗೊಳಿಸಿದರು. ಆದರೆ ಚೀನಾದ ಶಕ್ತಿ ಭಾರತಕ್ಕಿಲ್ಲ.

ಚೀನಾ ಪ್ರವಾಸ ಮಾಡಿದ ತಕ್ಷಣ ಭಾರತವನ್ನು ಚೀನಾದಂತೆ ದೈತ್ಯ ದೇಶವನ್ನಾಗಿ ಮಾಡಬಹುದೆಂಬ ಭ್ರಮೆಯಲ್ಲಿ ಮುಳುಗಿರುವವರು, ಬಂಡವಾಳಶಾಹಿ ಪರವಾದ ನಾಯಕರು ಮತ್ತು ಅವರ ಅಧಿಕಾರಶಾಹಿ, ಚೀನಾದ ಅಭಿವೃದ್ಧಿಯ ತಳಹದಿಯು ಭದ್ರವಾದ ಜನತಾಕ್ರಾಂತಿಯ ಸಮಾಜವಾದಿ ತತ್ವದ ಮೇಲೆ ನಿಂತಿದೆ ಎಂಬುದನ್ನು ದೇಶದ ಬಗ್ಗೆ ಕಾಳಜಿ ಇರುವ ಪ್ರತಿಯೊಬ್ಬ ಪ್ರಜೆಯೂ ತಿಳಿದುಕೊಳ್ಳಬೇಕಿದೆ.

ಇಂದಿನ ಜಾಗತೀಕರಣದಂಥ ಅನಾಗರಿಕ ವ್ಯಾಪಾರ ನೀತಿಗಳಿಂದ ತೃತೀಯ ದರ್ಜೆ ರಾಷ್ಟ್ರಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳುತ್ತಿರುವ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಕುಯುಕ್ತಿಗಳ ನಡುವೆ, ಚೀನಾ ಕೂಡ WTO (ವಿಶ್ವವ್ಯಾಪಾರ ಸಂಸ್ಥೆ)ಗೆ ಬಹು ತವಕದಿಂದ ಸೇರಿಕೊಂಡಿರುವುದು, ನಮ್ಮ ಭಾರತೀಯ ಆಳುವ ವರ್ಗದ ನಾಯಕರಿಗೆ ತಮ್ಮನ್ನು ರಕ್ಷಿಸಿಕೊಳ್ಳಲು ಬಹುದೊಡ್ಡ ಪುಷ್ಟಿ ಸಿಕ್ಕಂತಾಗಿದೆ. ಭಾರತವು ಕಳೆದ ಹತ್ತು ವರ್ಷಗಳಲ್ಲಿ ನಿಧಾನವಾಗಿ, ಭಾಜಪದ ಅಧ್ಯಕ್ಷತೆಯಲ್ಲಿ ಬಹಳ ಅಪರಿಮಿತ ವೇಗದಲ್ಲಿ WTOನ ಒಪ್ಪಂದಗಳಿಗೆ ಸಹಿ ಹಾಕಿ, ಅಭಿವೃದ್ಧಿ ಹೊಂದಿದ ದೇಶಗಳ ಪಾಲಿಗೆ ದಾಸನಾಗಿಬಿಟ್ಟಿದೆ. ಆದರೆ ಚೀನಾವನ್ನು ಅದಕ್ಕೆ ಬಹಳ ಇಚ್ಛೆ ಇದ್ದರೂ, WTOಗೆ ನಿಧಾನವಾಗಿ ಸೇರಲು ಅವಕಾಶ ನೀಡಲಾಯಿತು. ಇದರಿಂದ "ಖಾಸಗೀಕರಣ, ಜಾಗತೀಕರಣ ಮತ್ತು ಉದಾರೀಕರಣ ನೀತಿಗಳಿಂದ ಮಾತ್ರ ರಾಷ್ಟ್ರದ ಉದ್ಧಾರ ಸಾಧ್ಯ. ಇಂತಹ ಕ್ಲಿಷ್ಟಕರ ಪರಿಸ್ಥಿತಿಯಲ್ಲಿ ಪ್ರಪಂಚದ ಮುಖ್ಯ ವಾಹಿನಿಯನ್ನು ನಾವು ಸೇರದಿದ್ದರೆ ನಮ್ಮ ರಾಷ್ಟ್ರದ ಏಳಿಗೆ ಸಾಧ್ಯವೇ ಇಲ್ಲ. ಇದಕ್ಕೆ ಸಮಾಜವಾದಿ ಚೀನಾದ ನಿರ್ಧಾರವೇ ಸಾಕ್ಷಿ" ಎಂದು ನಮ್ಮ ಆಳುವ ವರ್ಗದವರು ಪುಂಗಿಯೂದಲು ಪ್ರಾರಂಭಿಸಿದರು.

ಆದರೆ ವಸ್ತುಸ್ಥಿತಿಯನ್ನು ಅವಲೋಕಿಸಿ ನೋಡಿದಾಗ ನಮಗೆ ನಿಜ ಚಿತ್ರಣದ ಅರಿವು ಉಂಟಾಗುವುದು. ಸ್ವಾತಂತ್ರ್ಯಾನಂತರ ಭಾರತದ ಗದ್ದುಗೆಯನ್ನು ಬಂಡವಾಳಶಾಹಿ ಪರವಾದ ನಾಯಕರು ಏರಿದರೆ, ಚೀನಾವು ಸಮಾಜವಾದಿ ಜನತಾಕ್ರಾಂತಿಯ ನೇತಾರ ಮಾವೋರವರ ಅಧ್ಯಕ್ಷತೆಯಲ್ಲಿ ಮುನ್ನಡೆಯಿತು. ಕಳೆದ ೫೦ ವರ್ಷಗಳಲ್ಲಿ ಬಂಡವಾಳಶಾಹಿ ಪರವಾದ ನಾಯಕರುಗಳ ನಾಯಕತ್ವದಲ್ಲಿ ಭಾರತವು ಭ್ರಷ್ಟಾಚಾರ, ಕೋಮುವಾದೀಕರಣ ಮತ್ತು ಜನಸಂಖ್ಯಾ ಸ್ಫೋಟದಿಂದ ಸರಿ ಸುಮಾರು ೪೦ ಕೋಟಿ ಜನರು ಬಡತನ ರೇಖೆಯಿಂದ (ದಿನಕ್ಕೆ ತಲಾ ಕೇವಲ ರೂ. ೧೦ನ್ನು ಮಾತ್ರ ಗಳಿಸುವವರು) ನರಳುವಂತೆ ಮಾಡಿ, ವಿಶ್ವ ಹಣಕಾಸು ಸಂಸ್ಥೆಗಳ ಮುಂದೆ ಆರ್ಥಿಕ ದಿವಾಳಿತನದಿಂದಾಗಿ ದಾಸನಂತೆ ಸಾಲಕ್ಕಾಗಿ ಕೈ ಚಾಚುತ್ತಿದೆ. ನಮಗೆ ಸ್ವಾತಂತ್ರ್ಯ ಸಿಕ್ಕ ಎರಡು ವರ್ಷದ ನಂತರ ಅಧಿಕಾರಕ್ಕೆ ಬಂದ ಸಮಾಜವಾದಿ ಜನತಾ ಸರ್ಕಾರವು ಚೀನಾದಲ್ಲಿ ಭೂಸುಧಾರಣೆಗಳ ಮೂಲಕ, ಕೈಗಾರಿಕಾ ಕ್ರಾಂತಿಯ ಮೂಲಕ ಮತ್ತು ಭ್ರಷ್ಟಾಚಾರವನ್ನು ಧೂಳಿಪಟ ಮಾಡುವ ಮೂಲಕ ಅಮೇರಿಕಾವು ತನ್ನ ೪೦೦ ವರ್ಷಗಳ ಇತಿಹಾಸದಲ್ಲಿ ಸಾಧಿಸಿರಬಹುದಾದದ್ದೆಲ್ಲವನ್ನೂ ಕೇವಲ ೫೦ ವರ್ಷಗಳಲ್ಲಿ ಚೀನಾ ಸಾಧಿಸಿ ಯಶಸ್ವಿಯಾಗಿದೆಯೆಂದರೆ ಉತ್ಪ್ರೇಕ್ಷೆಯಾಗುವುದಿಲ್ಲ. ಆದರೆ ಅಮೇರಿಕಾದಲ್ಲಿ ಇಂದಿಗೂ ಪಕ್ಕಾ ಬಂಡವಾಳಶಾಹಿಯ ದುಷ್ಪರಿಣಾಮಗಳು ಖಾಸಗೀಕರಣದ ಮೂಲಕ, ಷೇರು ಪೇಟೆ ದಿವಾಳಿತನದ ಮೂಲಕ, ದೊಡ್ಡ ದೊಡ್ಡ ಕಂಪನಿಗಳ ಲೆಕ್ಕ ಪತ್ರಗಳ ಅವ್ಯವಹಾರಗಳಿಂದಾಗಿ ಜನಸಾಮಾನ್ಯರಿಗೆ ನೆಮ್ಮದಿಯಿಲ್ಲದಂತಾಗಿದೆ. ಆದರೆ ಚೀನಾದ ಏಳಿಗೆಯು ಕಾರ್ಮಿಕರ ಮತ್ತು ಕೃಷಿ ಕಾರ್ಮಿಕರ ಅಭಿವೃದ್ಧಿಯಲ್ಲಿ ವ್ಯಕ್ತಗೊಂಡಿದೆ. ಚೀನಾವು ತನ್ನ ಅಪರಿಮಿತ ವೇಗದ ಕೈಗಾರಿಕಾ ಕ್ರಾಂತಿ ಮತ್ತು ಮೂಲಭೂತ ಸೌಕರ್ಯಗಳ ಅಭಿವೃದ್ಧಿಯಿಂದ ಉತ್ತಮ ಗುಣಮಟ್ಟದ ಉತ್ಪನ್ನಗಳನ್ನು ಅತ್ಯಂತ ಕಡಿಮೆ ಬೆಲೆಯಲ್ಲಿ 'ವಿಶ್ವ ಮಾರುಕಟ್ಟೆ'ಯಲ್ಲಿ ರಾಶಿ ಮಾಡಬಲ್ಲದು ಮತ್ತು ಮಾರುಕಟ್ಟೆಯ ಪಾಲನ್ನು ತನ್ನದಾಗಿಸಿಕೊಳ್ಳಬಲ್ಲದೆಂಬ ಅರಿವಿನಿಂದ ಚೀನಾದ WTO ಪ್ರವೇಶವನ್ನು ಅಭಿವೃದ್ಧಿ ಹೊಂದಿದ ದೇಶಗಳು ನಿಧಾನಗೊಳಿಸಿದರು. ಆದರೆ ಚೀನಾದ ಶಕ್ತಿ ಭಾರತಕ್ಕಿಲ್ಲ. ಭಾರತವನ್ನು ನವಬಂಡವಾಳಶಾಹಿ ವಸಾಹತುವನ್ನಾಗಿ ಮಾಡಿಕೊಳ್ಳಲು ಬೇಗನೆ ಪ್ರವೇಶ ನೀಡಿ ದಿವಾಳಿತನದ ದಡಕ್ಕೆ ತಲುಪಿಸಿದರು. ಇದರಿಂದ WTO ಭಾರತಕ್ಕೆ ತಲೆದಂಡವಾದರೆ ಚೀನಾಕ್ಕೆ ತನ್ನ ವಸ್ತುಗಳಿಗೆ ವಿಶಾಲ ಮಾರುಕಟ್ಟೆ ದೊರೆಯುವುದರಿಂದ ಇದೊಂದು ಸುವರ್ಣಾವಕಾಶ ಎನ್ನುವುದನ್ನು ಮನಗಾಣಬಹುದು. ಚೀನಾ ಪ್ರವಾಸ ಮಾಡಿದ ತಕ್ಷಣ ಭಾರತವನ್ನು ಚೀನಾದಂತೆ ದೈತ್ಯ ದೇಶವನ್ನಾಗಿ ಮಾಡಬಹುದೆಂಬ ಭ್ರಮೆಯಲ್ಲಿ ಮುಳುಗಿರುವವರು, ಬಂಡವಾಳಶಾಹಿ ಪರವಾದ ನಾಯಕರು ಮತ್ತು ಅವರ ಅಧಿಕಾರಶಾಹಿ ಚೀನಾದ ಅಭಿವೃದ್ಧಿಯ ತಳಹದಿಯು ಭದ್ರವಾದ ಜನತಾಕ್ರಾಂತಿಯ ಸಮಾಜವಾದಿ ತತ್ವದ ಮೇಲೆ ನಿಂತಿದೆ ಎಂಬುದನ್ನು ದೇಶದ ಬಗ್ಗೆ ಕಾಳಜಿ ಇರುವ ಪ್ರತಿಯೊಬ್ಬ ಪ್ರಜೆಯೂ ತಿಳಿದುಕೊಳ್ಳಬೇಕಿದೆ.

ಬಾಲ್ಯ ವಿವಾಹಕ್ಕೆ ಒತ್ತುಕೊಡುತ್ತಿರುವ ಭಾರತೀಯ ಪುರೋಹಿತಶಾಹಿ ವರ್ಗಕ್ಕೆ 'ಚೀನಾದಲ್ಲಿ ಚೀನಾದ ಯುವತಿಯರ ಲಗ್ನದ ಸರಾಸರಿ ವಯಸ್ಸು ೨೩, ೫೭ ವರ್ಷಗಳೆಂದರೆ ಆಶ್ಚರ್ಯವಾಗಬಹುದು. ಭಾರತದ ಜನಸಂಖ್ಯೆ ೧೦೨ ಕೋಟಿ ಇದ್ದು ಪ್ರತಿವರ್ಷ ೨ ಕೋಟಿ ೭೦ ಲಕ್ಷ ಮಕ್ಕಳ ಜನನ ಪ್ರಮಾಣವಿದ್ದರೆ, ೧೨೬ ಕೋಟಿ ಜನಸಂಖ್ಯೆಯಿರುವ ಚೀನಾದಲ್ಲಿ ಕೇವಲ ೧ ಕೋಟಿ ೩೦ ಲಕ್ಷ ಮಕ್ಕಳ ಜನನ ಪ್ರಮಾಣವಿದೆ. ಭಾರತವು ಪ್ರತಿವರ್ಷ ಆಸ್ಟ್ರೇಲಿಯಾದ ಜನಸಂಖ್ಯೆಯಷ್ಟು ಮಕ್ಕಳ ಜನನ ಪ್ರಮಾಣವನ್ನು ಉಂಟುಮಾಡುತ್ತಿದೆ.

**ಬಡತನ ರೇಖೆ**

ಕಳೆದ ೫೦ ವರ್ಷಗಳಲ್ಲಿ ಭಾರತವು ತನ್ನ ಜನಸಂಖ್ಯೆಯ ಶೇ. ೪೦ರಷ್ಟನ್ನು (೪೦ ಕೋಟಿ) ಬಡತನ ರೇಖೆಯಿಂದ ಕೆಳಗೆ ತಳ್ಳಿದೆ. ಆದರೆ ಚೀನಾದಲ್ಲಿ ಆ ಸಂಖ್ಯೆ ಒಟ್ಟು ಜನಸಂಖ್ಯೆಯ ಶೇ. ೩.ರಷ್ಟಿದೆ (೪ ಕೋಟಿ). ಭಾರತದ ತಲಾ ಆದಾಯವು ಕೇವಲ US $ ೪೪೦ ಆಗಿದ್ದು ಇದು ವಿಶ್ವಬ್ಯಾಂಕ್‌ನ ಕನಿಷ್ಠ ಬಡತನ ರೇಖೆಯ ತಲಾ ಆದಾಯವಾದ US $ ೩೬೫ನ ಹತ್ತಿರವಿದೆ. ಚೀನಾದ ತಲಾ ಆದಾಯವು ವಾರ್ಷಿಕ US $ ೯೯೦ರಷ್ಟಿದೆ.

**ಶಿಕ್ಷಣ**

ಚೀನಾದಲ್ಲಿ ಎಲ್ಲಾ ಚಿಕ್ಕ ಮಕ್ಕಳು ಕನಿಷ್ಠ ೯ ವರ್ಷ ಶಾಲೆಗೆ ಹಾಜರಾಗುವುದರಿಂದ, ಅಲ್ಲಿ ಶೇ. ೧೦೦ರಷ್ಟು ಸಾಕ್ಷರತೆ ಇದೆ. ಆದರೆ ಭಾರತದಲ್ಲಿ ಇದು ಕೇವಲ ಶೇ. ೫೦ ಇದೆ. ಇದರ ಜೊತೆಗೆ ಚೀನಾದ ಒಟ್ಟು ದೇಶೀಯ ಉತ್ಪನ್ನ ಭಾರತದ ೨.೫ ಪಟ್ಟು ಇದೆ.

ಜಯ

### ಭಾರತದ ಸ್ಥಿತಿ

ಭಾರತವು ವಿಶ್ವದ ಶೇ. ೧೭ರಷ್ಟು ಜನಸಂಖ್ಯೆ ಹೊಂದಿದ್ದು, ಶೇ. ೨.೨ರಷ್ಟು ಭೂಪ್ರದೇಶವನ್ನು ಮಾತ್ರ ಹೊಂದಿದೆ. ವಿಶ್ವದ ಒಟ್ಟು ಆಂತರಿಕ ಉತ್ಪನ್ನ GDPಯಲ್ಲಿ ಭಾರತದ ಪಾಲು ಕೇವಲ ಶೇ. ೧.೪ರಷ್ಟು. ವಿಶ್ವದ ವ್ಯಾಪಾರದಲ್ಲಿ ಭಾರತದ ಪಾಲು ಬರೇ ಶೇ. ೦.೬ರಷ್ಟು ಎಂದರೆ ನಿಜಕ್ಕೂ ಬೆಚ್ಚಬೇಕಾಗಿರುವ ವಿಷಯ.

### ಸಾಫ್ಟ್‌ವೇರ್ ತಂತ್ರಜ್ಞಾನ

ಈ ಕ್ಷೇತ್ರವಂತೂ ಭಾರತೀಯ ಪದವೀಧರರಿಗೆ ಮತ್ತೆ ತಿರುಗಿ ನೋಡಬಾರದಂತಹ ಏಟು ನೀಡಿದೆ. ಪ್ರಾರಂಭದಲ್ಲಿ ಒಂದೆರಡು ಲಕ್ಷ ಇಂಜಿನಿಯರುಗಳಿಗೆ ಉದ್ಯೋಗ ಮತ್ತು ಆಕರ್ಷಕ ಸಂಬಳದ ಆಸೆ ತೋರಿಸಿ, ನಂತರ ೨೦ ಲಕ್ಷಕ್ಕೂ ಹೆಚ್ಚು ಪದವೀಧರರು ತಮ್ಮಲ್ಲಿದ್ದದ್ದೆಲ್ಲವನ್ನು ಅಡವಿಟ್ಟು ಸಾಫ್ಟ್‌ವೇರ್ ತರಬೇತಿ ಕೇಂದ್ರಗಳಿಗೆ ಸುರಿದು ದಿವಾಳಿಯಾಗುವ ಹಾಗೆ ಮಾಡಿದೆ. ಸಾಫ್ಟ್‌ವೇರ್ ತಂತ್ರಜ್ಞಾನದಲ್ಲಿ ತನ್ನ ಮಾರುಕಟ್ಟೆಗಾಗಿ ಭಾರತವು ಹೊರದೇಶದ ಕಂಪೆನಿಗಳ ಮೇಲೆ ಅವಲಂಬಿತವಾಗಿ, ಹಾರ್ಡ್‌ವೇರ್ ಕ್ಷೇತ್ರವನ್ನು ನಿರ್ಲಕ್ಷಿಸಿತು ಮತ್ತು ದೇಶಿಯ ಮಾರುಕಟ್ಟೆಯನ್ನು ಬೆಳೆಸುವಲ್ಲಿ ವಿಫಲವಾಯಿತು. ಇದರಿಂದ ಹೊರದೇಶದಲ್ಲಿ ಸಾಫ್ಟ್‌ವೇರ್ ತಂತ್ರಜ್ಞಾನದ ಬೇಡಿಕೆ ಕುಸಿದಾಗ ಭಾರತದ ಕಂಪೆನಿಗಳು ತಿಪ್ಪರಲಾಗ ಹಾಕಿದವು. ಆದರೆ ಚೀನಾ ತನ್ನ ದೇಶಿಯ ಮಾರುಕಟ್ಟೆಯನ್ನು ಬೆಳೆಸಿತು ಮತ್ತು ಹಾರ್ಡ್‌ವೇರ್ ಕ್ಷೇತ್ರದಲ್ಲಿ ಹಿಂದೆಂದೂ ಕಾಣದ ಅಭಿವೃದ್ಧಿಯನ್ನು ಗಳಿಸಿ, ಸಾಫ್ಟ್‌ವೇರ್ ತಂತ್ರಜ್ಞಾನದ ಬೇಡಿಕೆ ಒಂದೇ ಮಟ್ಟದಲ್ಲಿರುವಂತೆ ನೋಡಿಕೊಂಡಿತು.

ಭಾರತಕ್ಕೂ, ಚೀನಾಕ್ಕೂ ಇರುವ ಅಜಗಜಾಂತರ ವ್ಯತ್ಯಾಸವನ್ನು ಮುಂದಿರುವ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

| ಉತ್ಪಾದನೆ | ಚೀನಾ | ಭಾರತ |
|---|---|---|
| ಸ್ಟೀಲ್, ಮಿಲಿಯನ್ ಟನ್/ವರ್ಷ | ೧೦೩ | ೨೪.೦ |
| ಸಿಮೆಂಟ್, ಮಿಲಿಯನ್ ಟನ್/ವರ್ಷ | ೬೫೦ | ೯೫.೦ |
| ಕಚ್ಚಾ ತೈಲ, ಮಿಲಿಯನ್ ಟನ್/ವರ್ಷ | ೧೫೦ | ೩೦.೦ |
| ಕಲ್ಲಿದ್ದಲು, ಮಿಲಿಯನ್ ಟನ್/ವರ್ಷ | ೧೩೦೦ | ೩೦೦.೦ |
| ಪ್ರವಾಸಿಗರು, ಮಿಲಿಯನ್ | ೬೦ | ೨.೫ |
| ವಿದೇಶಿ ನೇರ ಬಂಡವಾಳ US $ ಬಿಲಿಯ | ೪೬ | ೨.೦ |
| ರಫ್ತು US $ ಬಿಲಿಯ | ೨೬೦ | ೪೨.೦ |
| ಟೆಲಿಫೋನ್ ಸಂಖ್ಯೆ, ಮಿಲಿಯನ್ | ೨೨೦ | ೨೭.೦ |
| ಆಹಾರ ಧಾನ್ಯ, ಮಿಲಿಯನ್ ಟನ್/ವರ್ಷ | ೪೧೦ | ೨೦೮.೦ |
| ಕಲರ್ ಟಿವಿ ಸಂಖ್ಯೆ, ಮಿಲಿಯನ್ | ೪೦೦ | ೭೫.೦ |
| ಕೃಪೆ : ಇಂಡಿಯ ವಾಚ್ ಫೌಂಡೇಶನ್ | | |

ಭಾರತ ಇದೇ ಗತಿಯಲ್ಲಿ ಮುಂದುವರಿದರೆ ಚೀನಾದ ಇಂದಿನ ಮಟ್ಟವನ್ನು ತಲುಪಲು ಕಡಿಮೆಯೆಂದರೆ ೧೦೦ ವರ್ಷಗಳು ಬೇಕಾದೀತು. ಎಲ್ಲಾ ದೇಶಪ್ರೇಮಿಗಳು, ಕಾರ್ಮಿಕರು, ಕೃಷಿಕಾರರು ಮುಂತಾದವರೆಲ್ಲರೂ ಹೊಸ ಸಮಾಜವಾದಿ ಜನತಾ ಕ್ರಾಂತಿಗಾಗಿ ಪಣತೊಟ್ಟು ಹೋರಾಡದಿದ್ದರೆ ನಾವು ನಮ್ಮ ಮುಂದಿನ ಪೀಳಿಗೆಯನ್ನು ಕೋಮುವಾದೀಕರಣ, ಜಾತೀಯತೆ, ಭ್ರಷ್ಟಾಚಾರಗಳಿಂದ ಬಂಧಿಸಿ ಅವರ ಕೊರಳಿಗೆ ಉರುಳಾಗಿಬಿಡುತ್ತೇವೆ.

■ 'ಜಯ'



## ಒಂದು ಸಂವಾದ ಗೀತೆ

ನಡಿಯಮ್ಮ ನಡಿ ತಂಗಿ ನೀ.....
ಕಲಿಯಾಕ ಸಾಲೀಗಿ
ಎಳೆಮಾವಿನ ಚಿಗುರ ಹುಡುಗಿ ।ಪ।

ಬರುತೀನಿ ಬರುತೀನಣ್ಣ
ಕಲಿಯಾಕ ಸಾಲೀಗಿ
ಕತ್ತಲನು ಕಳೆಯೋ ಗುಡಿಗಿ ।ಪ।



ಚಿಗುರ ಚಿವುಟುತಾರೆ
ಬುಡವ ಕಡಿಯುತಾರೆ
ಅರಳೀದ ಹೂಹೂವ
ಕಾಲಿಂದ ಹೊಸಕುತಾರೆ
ಯಾಕೆಂದು ಕೇಳಲು
ಕಲೀಬೇಕು ಅಕ್ಷರವ ।ನಡಿಯಮ್ಮ।

ಗುಡ್ಡ ಬೆಟ್ಟ ಸುತ್ತೀ
ಸದೆ ಸೊಪ್ಪು ತರಬೇಕು
ಒಣಕಲ ದನಗಳ
ಮೇವಾಡಿಸಿ ಬರಬೇಕು
ಸುಟ್ಟಂತ ಪಾದಗಳಿಗೆ
ಇಟ್ಟರೆ ಕೈಯೆಣ್ಣೆ ।ಬರುತೀನಿ।



ಬಿಸಿಲಿನ ಜಳಕಕ್ಕೆ
ನಿನಮೈಯಿ ಸೀದೋಗಿ
ದೂಳಿನ ಕೆಂಡದಲಿ
ನಿನ ಪಾದ ಬೆಂದೋಗಿ
ಪಡುವ ಸಂಕಟದಿಂದ
ಪಾರಾಗಿ ನೀ ನಗಲು ।ನಡಿಯಮ್ಮ।



ಅಳುವ ಕಂದಮ್ಮಗಳ
ಕಣ್ಣಲ್ಲೇ ಕಾಯಬೇಕು
ಅಪ್ಪನ ಕುಡಿತಕ್ಕೆ
ಹೆಂಡವ ತರಬೇಕು
ಖಂಡಖಂಡದ ಸಕುತಿ
ಉಳಿದುಕೊಂಡರೆ ನನಗೆ ।ಬರುತೀನಿ।

ಹಿಟ್ಟು ಬೇಸುತ್ತಲೇ
ಸೊಪ್ಪನ್ನು ಬೆಳೆಸಿರುವೆ
ಕಣ್ಣ ನೀರಿಂದಲೇ
ಗಂಟಲ ನೆನೆಸಿರುವೆ
ಸೌದೆಯ ಹೊತ್ತುಕೊಂಡೇ
ಮಸಣಕ್ಕೆ ಹೋಗದಿರಲು ।ನಡಿಯಮ್ಮ।



ದಣಿಯರ ಮನೆಗೋಗಿ
ಬೆರಣಿಯ ತಟ್ಟಬೇಕು
ನವಣೇಯ ಹೊಲಕೋಗಿ
ಸಗಣೀಯ ಚೆಲ್ಲಬೇಕು
ಕತ್ತಲ ಬದುಕೀಗೆ
ಮಿಂಚೊಂದು ಬಂದರೆ ।ಬರುತೀನಿ।

ಡಾ|| ರಂಗಾರೆಡ್ಡಿ ಕೋಡಿರಾಂಪುರ
೯೪೬, ವಿ. ವಿ. ಪುರ, ಗೌರಿಬಿದನೂರು

# ಸುಖ ಸಂಸಾರ...?

ಬಂದಗದ್ದೆ ರಾಧಾಕೃಷ್ಣ

**ಪಿ.** ಲಂಕೇಶರು ಬರೆದ **ಟಿ. ಪ್ರಸನ್ನನ ಗೃಹಸ್ಥಾಶ್ರಮ** ಐದು ಪಾತ್ರಗಳ ಪುಟ್ಟ ನಾಟಕ. ಹಳ್ಳಿಯಿಂದ ನಗರಕ್ಕೆ ಬಂದು ಮುನಿಸಿಪಾಲಿಟಿಯಲ್ಲಿ ನೌಕರನಾದ ಪ್ರಸನ್ನ ಹೆಂಡತಿಯೊಂದಿಗೆ ಹೊಂದಿಕೊಂಡು ಬಾಳಲು ಏಗುತ್ತಿರುವವನು. ತನ್ನ ತಂದೆಯ ಕೃಪೆಯಿಂದಲೇ ಮುನಿಸಿಪಾಲಿಟಿಯಲ್ಲಿ ಕೆಲಸ ಸಿಕ್ಕಿತೆಂಬ ಹಮ್ಮುಳ್ಳ ಲಕ್ಷ್ಮಿ ಸೀರೆ, ಬಂಗಾರ, ತಿರುಗಾಟ, ಸಿನೆಮಾ ಮುಂತಾಗಿ ಆಸೆ ಆಕಾಂಕ್ಷೆ ಉಳ್ಳವಳು. ಆದರೆ ಅವಳಿಗೆ ಮಗುವಿಲ್ಲ. ಗಂಡನ ಜೊತೆ ಬಾಳುವುದೂ ಕಷ್ಟ, ಪರಿಚಯವಾದ ಡಾ॥ ಶಿವಶಂಕರನೊಂದಿಗೆ ಸ್ನೇಹ ಬೆಳೆಸಿದ್ದಾಳೆ. ಅವನೊಂದಿಗೆ ದೂರದ ಊರಿಗೆ ಹೋಗಿ 'ಸುಖ ಸಂಸಾರ' ಹೂಡುವುದೆಂದು ಕನಸು ಕಂಡಿದ್ದಾಳೆ. ಆದರೆ ಇವಳ ಈ ಎಲ್ಲಾ ಹುನ್ನಾರಗಳನ್ನೂ ಪ್ರಸನ್ನ ಬಲ್ಲ. ತಾನು ಸಂಜೆ ಮನೆಯಿಂದ ಹೊರಟ ನಂತರ ಡಾಕ್ಟರ್ ಮನೆಗೆ ಬರುತ್ತಾನೆಂದು ಗೊತ್ತಿದ್ದ ಪ್ರಸನ್ನ ಆ ವೇಳೆಗೆ ಸರಿಯಾಗಿ ಡಾ॥ ಶಿವಶಂಕರನ ಹೆಂಡತಿ ಸುಲೋಚನಾಳನ್ನು ಮನೆಗೆ ಕರೆದುಕೊಂಡು ಬರುತ್ತಾನೆ. ಎಲ್ಲಾ ಗುಟ್ಟುಗಳನ್ನೂ ಬಯಲುಗೊಳಿಸುತ್ತಾನೆ. ತನ್ನ ಹೆಂಡತಿ ಲಕ್ಷ್ಮಿಗೂ ಡಾಕ್ಟರಿಗೂ ತಾನೇ ಮದುವೆ ಮಾಡಿಸುತ್ತೇನೆಂದು ಹೇಳುತ್ತಾನೆ. ಪುಕ್ಕ ಡಾಕ್ಟರ್ ತನ್ನ ಪ್ರೇಮ ಸುಳ್ಳೆಂದು ತಿಳಿಸಿದಾಗ ಲಕ್ಷ್ಮಿ ತನ್ನ ಗಂಡ ಮತ್ತು ಡಾಕ್ಟರ್ ಎಲ್ಲರಿಗೂ ಉಗುಳಿ, ಇವರೆಲ್ಲರನ್ನೂ ಬಿಟ್ಟು ಹೊರಟುಹೋಗುತ್ತಾಳೆ. ಈ ಸಂಗತಿಗಳಿಂದ ಮನಸ್ಸು ಛಿದ್ರಗೊಂಡ ಸುಲೋಚನ ''ನನಗಿನ್ನು ಸಂಸಾರ ಬೇಡ'' ಎನ್ನುತ್ತಾಳೆ. ಆದರೆ ಅವಳಿಗೆ ಹೊಂದಿಕೊಂಡು ಬಾಳುವಂತೆ ಬುದ್ಧಿವಾದ ಹೇಳುವ ಪ್ರಸನ್ನ ''So,...... ಇನ್ನು ಹೊರಡಿ. ಸಾಧ್ಯವಾದಷ್ಟು ದಿನ ಸುಖವಾಗಿ ಸಂಸಾರ ಮಾಡಿ....'' ಎನ್ನುತ್ತಾನೆ.

ಇಲ್ಲಿ 'ಸಾಧ್ಯವಾದಷ್ಟು ದಿನ' ಎನ್ನುವುದು ಬಹಳ ಮುಖ್ಯವಾದ ಮಾತು. ಸಂಸಾರದಲ್ಲಿ ಇದ್ದ ಲಕ್ಷ್ಮಿ ಎಲ್ಲವನ್ನೂ ಬಿಟ್ಟು, ಸ್ನೇಹಿತನನ್ನೂ ಬಿಟ್ಟು ಸುಖಸಂಸಾರ ಅರಸಿ ಹೋಗಿರಬಹುದೇ? 'ಸುಖ ಸಂಸಾರ'ದಲ್ಲಿ ಇದ್ದ ಸುಲೋಚನಾ ಸಂಸಾರವೇ ಬೇಡ ಎನ್ನುವ ಸ್ಥಿತಿಗೆ ಬಂದಳೇ? ಸುಖ ಸಂಸಾರದ ಅನುಭವಿ ಪ್ರಸನ್ನ ಈ ಸ್ಥಿತಿಗಳನ್ನು ಗಮನಿಸಿಯೇ 'ಸಾಧ್ಯವಾದಷ್ಟು ದಿನ' ಎಂಬ ಅಪ್ಪಟ ಸತ್ಯದ ನುಡಿಗಳನ್ನು ಆಡಿರಬಹುದೇ?

ಪೂರ್ಣವಾಗಿ ಹೊಂದಿಕೊಂಡು ಬದುಕುವವನು ಅರ್ಧ ಸತ್ತಿರುತ್ತಾನೆ. ಸಾಧ್ಯವಾದಷ್ಟು ದಿನ ಹೊಂದಿಕೊಳ್ಳುವವನು ತನಗೆ ಬೇಕಾದಂತೆ ಬದುಕಲು ಬಯಸುವವನು ಎಂದು ನನ್ನ ನಂಬಿಕೆ. ಹೀಗೆ ಯೋಚಿಸುವಾಗ ಗಂಡ, ಹೆಂಡತಿ ನಿಜಕ್ಕೂ ಪ್ರೀತಿಸುತ್ತಾರಾ? ಹೆಂಡತಿಯನ್ನು ನಿಜಕ್ಕೂ ನಾನು ಪ್ರೀತಿಸುವೆನೇ? ಇನ್ನೊಂದು ಹೆಂಗಸಿನ ವಿಷಯ ನನ್ನ ತಲೆಯಲ್ಲೇಕೆ ಸುಳಿಯುತ್ತದೆ? ಹೆಣ್ಣು ಅಂದೊಡನೆ ನನ್ನಲ್ಲುಂಟಾಗುವುದು ಲೈಂಗಿಕ ಜಾಗೃತಿ ಮಾತ್ರವೇ? ಹಾಗಾದರೆ ಪ್ರೀತಿ ಅಂದರೇನು? ಸ್ವಾರ್ಥವನ್ನು ಮೀರಲು ನನ್ನಿಂದ ಸಾಧ್ಯವಾಗಿದೆಯೇ?

ರಸವೇ ಜನನ<br>
ವಿರಸವೇ ಮರಣ<br>
ಸಮರಸವೇ ಜೀವನ

ಎಂಬ ಕವಿವಾಣಿಯನ್ನು ಸ್ಮರಿಸುತ್ತ ತೆಪ್ಪಗೆ ಬದುಕೋಣವೇ? ಎಷ್ಟೆಲ್ಲ ಪ್ರಶ್ನೆಗಳು ನಮ್ಮೆದುರು ನಿಲ್ಲುತ್ತವೆ!

ನಾಟಕದ ಪ್ರಾರಂಭದಲ್ಲೇ ಬರುವ ರಂಗನಾಥನ ವಿಷಯ ಈ ಹಿಂದೆ ಸೂಚಿಸಲಿಲ್ಲ. ರಂಗನಾಥ, ಪ್ರಸನ್ನ ಡಿಗ್ರಿ ಓದುವಾಗಿನಿಂದ ಸ್ನೇಹಿತರು. ಗೃಹಸ್ಥಾಶ್ರಮಕ್ಕೆ ಮೊದಲಿನ ತಮ್ಮ ಜೀವನದ ನೆನಪುಗಳನ್ನು ಬಿಚ್ಚಿಡುತ್ತ ಗೃಹಸ್ಥಾಶ್ರಮದ ಹೊಸ್ತಿಲವರೆಗೆ ನಾಟಕವನ್ನು ತರುತ್ತಾರೆ. ಕಾಮಾಲೆ ಆದವನಿಗೆ ಎಲ್ಲವೂ ಹಳದಿಯಾಗಿ ಕಾಣುವಂತೆ, ತನ್ನ ಹೆಂಡತಿ ಇನ್ನೊಬ್ಬನೊಂದಿಗೆ ಹೋದಂತೆ, ಜಗತ್ತಿನ ಎಲ್ಲಾ ಗೃಹಸ್ಥಾಶ್ರಮದ ಹೆಂಗಸರೂ ಇನ್ನೊಬ್ಬನೊಂದಿಗೆ ಓಡಿಹೋಗುತ್ತಾರೆ ಎಂಬುದು ಪ್ರಸನ್ನನ 'ಗೆಸ್ ವರ್ಕ್'. ಸಂಗೀತಪಾಠ ಹೇಳಲು ಬರುವವನೊಂದಿಗೆ ರಂಗನಾಥನ ಹೆಂಡತಿ ಓಡಿ ಹೋಗುವವಳಿದ್ದಾಳೆ ಎಂಬುದು ಪ್ರಸನ್ನನ ಗೆಸ್ ವರ್ಕ್. ಇಷ್ಟು ಹೇಳಿ ರಂಗನಾಥನನ್ನು ಕಳಿಸುವಾಗ –

''ಗುಡ್ ನೈಟ್, ಹೆದರ್ಕೋಬೇಡ ಮರೀ, ಏನಾದ್ರೂ ಕೆಟ್ಟದ್ದಾದ್ರೆ ಬಂದ್ಬಿಡು. ಇಲ್ಲೇ ಇರಬಹುದು'' – ಪ್ರಸನ್ನ ಹೇಳುತ್ತಾನೆ.

ಡಾ॥ ಶಿವಶಂಕರ್ ಮತ್ತು ಸುಲೋಚನಾರನ್ನು ಕಳಿಸಿದ ನಂತರ ರಂಗನಾಥನ ಪ್ರವೇಶವಾಗುತ್ತದೆ.

''ಯಾರು ರಂಗನಾಥನೋ? ಬಾರಯ್ಯ ಬಾ. ಕೂತ್ಕೋ. ಯಾಕೆ ಸಪ್ಪಗಿದ್ದೀಯಾ?'' ಪ್ರಸನ್ನ ಕೇಳುತ್ತಾನೆ. ಈ ಮಾತು ಏನನ್ನು ಧ್ವನಿಸುತ್ತದೆ? ನಮ್ಮೆಲ್ಲಾ ಗೃಹಸ್ಥಾಶ್ರಮದ ಅಶಾಂತಿಗೂ ಲೈಂಗಿಕ ಅನಿರ್ಬಂಧತೆಯೇ ಕಾರಣವೇ? ಹೀಗೆ ಪ್ರಶ್ನೆ ಏಳಲು ಸಾಧ್ಯತೆಯಿರುವ ಕಾರಣ ನಾಟಕದ ಅಂತ್ಯದಲ್ಲಿ ರಂಗನಾಥನ ಪ್ರವೇಶ ಅವಶ್ಯಕವೇ? ಆದರೂ ಅನಿರ್ಬಂಧತೆಯ ಛಾಯೆ ನಮ್ಮ ಸುತ್ತ ಸುಳಿದಾಡುತ್ತಿರುತ್ತದೆ ಎಂಬುದನ್ನು ಬಿಚ್ಚು ಮನಸ್ಸಿನಿಂದ ಒಪ್ಪಿಕೊಳ್ಳುವುದು ಲೇಸಲ್ಲವೇ? ಒಬ್ಬ ದ್ರೌಪದಿ, ಐವರು ಗಂಡಂದಿರು – ಈ ಒಪ್ಪಂದವೇ ನಮ್ಮನ್ನು ತಬ್ಬಿಬ್ಬುಗೊಳಿಸುವುದಿಲ್ಲವೇ?

ಮಂಡೋದರಿಯಂತಹ ಸುಂದರ ಹೆಂಡತಿಯನ್ನು ಹೊಂದಿದ ರಾವಣ ಸೀತೆಯನ್ನು ಮೋಹಿಸುವುದಿಲ್ಲವೇ? ಕೃಷ್ಣನ ವ್ಯಕ್ತಿತ್ವವೇ ಬಹು ಹೆಂಗಸರಲ್ಲಿ ಮೋಹವನ್ನು, ಪ್ರೀತಿಯನ್ನು, ಒಲುಮೆಯನ್ನು ಸಾರುವುದಿಲ್ಲವೇ? ಮತ್ತೊಬ್ಬ ಹೆಂಗಸು ಅಥವಾ ಗಂಡಸಲ್ಲಿ ಉಂಟಾಗುವ ಮೋಹ, ಲೈಂಗಿಕ ಆಸೆಗಳನ್ನು ಮೀರಿ ಪ್ರೀತಿ ವಿಶ್ವಾಸಗಳು ಉಳಿಯಬಲ್ಲುವೇ ಎಂಬ ಪ್ರಶ್ನೆಯಲ್ಲಿ ಅದರ ಮಹತ್ವವಿರುತ್ತದೆ.

ರಂಗಭೂಮಿಗಾಗಿ ನೊಬೆಲ್ ಪ್ರಶಸ್ತಿ ಪುರಸ್ಕೃತ ಇಟಲಿಯ ದಾರಿಯೋ ಫೋ ಒಬ್ಬ ನಟ, ನಾಟಕಕಾರ, ನಿರ್ದೇಶಕ. ಈತನ 'ವರ್ಚುವಸ್ ಬರ್ಗ್‌ಲರ್' ನಾಟಕ ಪರಸ್ತ್ರೀ ಮೋಹದ ಸುತ್ತಲೇ ಹೆಣೆದಿದ್ದು, ಕೆ. ವಿ. ಅಕ್ಷರ ರೂಪಾಂತರಿಸಿ, ನಿರ್ದೇಶಿಸಿದ ನಾಟಕ ಪ್ರದರ್ಶನದಲ್ಲಿ ಟಿ. ಪ್ರಸನ್ನನ ಗೃಹಸ್ಥಾಶ್ರಮದಂತೆ ಈ ನಾಟಕವೂ ಕೂಡಾ ಪರಸ್ತ್ರೀ ಮೋಹವೆಂಬ ವಿಷಯಕ್ಕಿಂತ ಮೀರಿ ನಿಲ್ಲುವುದಿಲ್ಲ. ಆದರೆ ಸಮಾಜದಲ್ಲಿ ಕಳ್ಳನೆಂದು ಗುರುತಿಸಲ್ಪಟ್ಟವನು ನಿಜದಲ್ಲಿ ಹೆಂಗಸರ ವಿಷಯದಲ್ಲಿ ಪ್ರಾಮಾಣಿಕ. ಮತ್ತೊಬ್ಬ ಹೆಂಗಸಿನೊಂದಿಗೆ ಕದ್ದು ಸುಖಿಸುವವನಲ್ಲ, ಹೆಂಡತಿಯೊಂದಿಗೆ ಪ್ರೀತಿಯಿಂದಿರುವಾತ. ಆದರೆ ಸಮಾಜದಲ್ಲಿ ಗಣ್ಯರೆನಿಸಿಕೊಂಡವರು, ಉನ್ನತ ಹುದ್ದೆಗಳಲ್ಲಿರುವವರು ಹೆಣ್ಣಿನ ವಿಷಯದಲ್ಲಿ ಕದ್ದು ಸುಖಿಸುವವರು. ಇದರಿಂದ ಪ್ರಾಮಾಣಿಕತೆಯನ್ನು ಅಳೆಯಲು ಬರುವುದಿಲ್ಲವಾದರೂ ಈ ರೀತಿಯ ಎಳೆಯೊಂದು ನಾಟಕದಲ್ಲಿದೆ. 'ಒನ್ ವಾಸ್ ನ್ಯೂಡ್, ಒನ್ ಓರ್ ದಿ ಟೇಲ್' ನಾಟಕದಲ್ಲೂ ಗಣ್ಯನೆನಿಸಿಕೊಂಡವನು ದೇಶದ ಅಭಿವೃದ್ಧಿ ಬಗ್ಗೆ ಚಿಂತಿಸುವ ಸಭೆಗೆ ಹೋಗಬೇಕೆಂದು ಹೆಂಡತಿಗೆ ಸುಳ್ಳು ಹೇಳಿ, ಒಬ್ಬಾಕೆಯ ಮನೆಗೆ ಸುಖಿಸಲು ಹೋಗಿರುತ್ತಾನೆ. ಬೀದಿ ಗುಡಿಸುವ 'ಕನಿಷ್ಠ' ಕೆಲಸದಲ್ಲಿರುವಾತ ನಿಜವಾಗಿ ದೇಶಭಕ್ತನಾಗಿರುವ ಪರಿಯನ್ನು ಸಾರುತ್ತದೆ. ದಾರಿಯೋ ಫೋ ತನ್ನ ನಾಟಕಗಳಲ್ಲಿ ಸಮಾಜದ ಜನರ ಮತ್ತೊಂದು ಮಗ್ಗುಲನ್ನು ನಮ್ಮೆದುರು ತೋರಿಸುತ್ತಾನೆ. ಸಾಮಾಜಿಕ ಸ್ಥಾನಮಾನ ಮತ್ತು ವೈಯಕ್ತಿಕತೆ ಎರಡನ್ನೂ ಮೇಳೈಸಿ ಓದುಗ, ಅಥವಾ ನೋಡುಗನನ್ನು ಯೋಚನೆಗೆ ತೊಡಗಿಸುವುದು ಈತನ ವಿಶೇಷತೆ.

ಮತ್ತೊಬ್ಬ ಹೆಂಗಸು ಅಥವಾ ಗಂಡಸಲ್ಲಿ ಉಂಟಾಗುವ ಮೋಹ, ಲೈಂಗಿಕ ಆಸೆಗಳನ್ನು ಮೀರಿ ಪ್ರೀತಿ ವಿಶ್ವಾಸಗಳು ಉಳಿಯಬಲ್ಲುವೆ ಎಂಬ ಪ್ರಶ್ನೆಯಲ್ಲಿ ಅದರ ಮಹತ್ವವಿರುತ್ತದೆ.

ಹಾಲಿ ಲಂಕೇಶರ ನಾಟಕದಲ್ಲಿ 'ಸಾಧ್ಯವಾದಷ್ಟು ದಿನ ಸುಖ ಸಂಸಾರ ಮಾಡಿ' ಎಂಬುದೇ ನಾಟಕದ ಕೊನೆಯ ಮಾತಾದರೆ....?

ನಾವೆಲ್ಲಾ ಸಾಧ್ಯವಾದಷ್ಟು ದಿನ 'ಸುಖ ಸಂಸಾರ' ಮಾಡುವ ಕನಸು ಹೊತ್ತವರಲ್ಲವೇ?

ಬಂದಗದ್ದೆ ರಾಧಾಕೃಷ್ಣ
ಕೆಳದಿ ಅಂಚೆ, ಶಿವಮೊಗ್ಗ - ೫೭೭ ೪೦೧

# ಅಪ್ಪನಿಗೊಂದು ಅಮೂಲ್ಯ ಉಡುಗೊರೆ

ಬೇದ್ರೆ ಎನ್. ಮಂಜುನಾಥ

**ಹ**ಲೋ ಫ್ರೆಂಡ್ಸ್,

ನಮ್ ಕ್ಲಾಸ್‌ನಲ್ಲಿ ಪ್ರತಿ ಗುರುವಾರ ಸ್ಟೋರಿ ಟೆಲ್ಲಿಂಗ್ ಪೀರಿಯಡ್ ಇರುವ ವಿಷಯ ನಿಮಗೆ ಗೊತ್ತೇ ಇದೆ, ಅಲ್ವಾ ? ಒಬ್ಬೊಬ್ಬರೂ ಒಂದೊಂದು ಕಥೆ ಹೇಳುವ ಸಂದರ್ಭ ಅದು. ಈ ಸರ್ತಿ ನನ್ ಕ್ಲಾಸ್‌ಮೇಟ್ ಗೌತಮ್ ಅಪ್ಪನಿಗೆ ಪುಟಾಣಿ ಮಕ್ಕಳು ಎಂತಹ ಉಡುಗೊರೆ ಕೊಟ್ಟರು ಎನ್ನುವ ಒಂದು ಕಥೆ ಹೇಳಿದ. ಅದನ್ನೇ ನಾನು ನಿಮಗೆ.ಹೇಳ್ತಾ ಇದ್ದೇನೆ. ಕೇಳ್ತೀರಿ ತಾನೇ ?

ನಮ್ಮ ದೇಶದ ಹಳ್ಳಿಗಳಲ್ಲಿ ಜನ ತುಂಬಾ ಕಷ್ಟಪಟ್ಟು ತಮ್ಮ ತಮ್ಮ ಹೊಲಗಳಲ್ಲಿ ಕೆಲಸ ಮಾಡಿ ಜೀವನ ಸಾಗಿಸ್ತಾರೆ ಅನ್ನೋದು ನಿಮಗೆ ಗೊತ್ತಲ್ವಾ ? ಹಾಗೇನೇ ರಷ್ಯಾ ದೇಶದ ಒಂದು ಪುಟ್ಟ ಹಳ್ಳಿಯಲ್ಲಿ ಸ್ಟೀಫನ್ ಎನ್ನುವ ರೈತ ತನ್ನ ಹೆಂಡತಿ ವೆಲೆಂತಿನಾ ಜೊತೆ ಕಷ್ಟಪಟ್ಟು ದುಡಿದು ಪುಟ್ಟ ತರಕಾರಿ ತೋಟವನ್ನು ಮಾಡಿದ್ದ. ತನ್ನ ಮೂವರು ಪುಟಾಣಿ ಮಕ್ಕಳ ಜೊತೆಗೆ ಆನಂದದಿಂದಿದ್ದ.

ಸ್ಟೀಫನ್ ತನ್ನ ತೋಟದ ಒಂದು ಬದಿಯಲ್ಲಿ ಸಾಲಾಗಿ ಸೇಬು ಹಣ್ಣಿನ ಮರಗಳನ್ನು ನೆಟ್ಟಿದ್ದ. ರಷ್ಯಾದಲ್ಲಿ ಸೇಬಿನ ವ್ಯವಸಾಯ ಶ್ರೀಮಂತ ವರ್ಗದವರಿಗೆ ಮಾತ್ರವೇನೋ ಅನ್ನಿಸುವಷ್ಟು ಸೇಬಿನ ಸಸಿಗಳು ದುಬಾರಿಯಾಗಿದ್ದರಿಂದ ಸ್ಟೀಫನ್‌ಗೆ ಕೆಲವು ಮರಗಳನ್ನು ಮಾತ್ರ ಬೆಳೆಸಲು ಸಾಧ್ಯವಾಗಿತ್ತು. ಹೆಚ್ಚಿನ ಸಸಿಗಳನ್ನು ಕೊಳ್ಳಲಿಕ್ಕೆ ಹಣವೂ ಇರಲಿಲ್ಲ. ಇದ್ದಷ್ಟು ಸಸಿಗಳನ್ನೇ ಪ್ರೀತಿಯಿಂದ ಬೆಳೆಸಿದ್ದ. ಈ ಮರಗಳ ಸಾಲಿನ ನಡುವೆ ಒಂದು ಸೇಬಿನ ಸಸಿ ನೆಡುವಷ್ಟು ಜಾಗ ಖಾಲಿ ಇತ್ತು. ಸ್ಟೀಫನ್ ಯಾವಾಗ ಅತ್ತ ಹೋದರೂ, ''ಇನ್ನೊಂದು ಸಸಿ ನೆಡಲಿಕ್ಕೆ ನನ್ನ ಹತ್ತಿರ ಹಣ ಸೇರ್‍ತಾ ಇಲ್ವಲ್ಲಾ,'' ಅಂತ ಕೊರಗುತ್ತಿದ್ದ.

ಮಾಗಿಯ ಕಾಲಕ್ಕೂ ಸ್ವಲ್ಪ ಮುಂಚೆ ಸೇಬಿನ ಮರಗಳಲ್ಲಿ ಹಣ್ಣುಗಳು ಮಾಗುತ್ತವೆ. ತನ್ನ ಸೇಬಿನ ಮರಗಳು ಮೊದಲ ಬಾರಿಗೆ ಹಣ್ಣು ಬಿಟ್ಟಿರುವುದನ್ನು ನೋಡಿ ಸ್ಟೀಫನ್‌ಗೆ ತುಂಬಾ ಸಂತೋಷ. ಅವು ಮಾಗುವುದನ್ನೇ ಕಾಯುತ್ತಿದ್ದ. ಚೆಂದದ ಕೆಂಪು ಹಣ್ಣುಗಳು ಮರದಲ್ಲಿ ಹೇರಳವಾಗಿದ್ದವು. ಅವುಗಳಲ್ಲಿ ಚೆನ್ನಾಗಿ ಮಾಗಿದ ಹಣ್ಣುಗಳನ್ನು ಕೊಯ್ದು ಪೇಟೆಗೆ ಒಯ್ದು ಮಾರಬೇಕು ಅಂತ ಸ್ಟೀಫನ್ ಯೋಚಿಸಿದ. ಯಾವ ಯಾವ ಮರದಿಂದ ಯಾವ ಯಾವ ಹಣ್ಣುಗಳನ್ನು ಕೀಳಬೇಕು ಎಂದು ಅಂದಾಜು ಮಾಡಲು ಒಂದು ಸಂಜೆ ತನ್ನ ಹಿರಿಯ ಮಗ ಪರ್ಚಿಕ್‌ನೊಡನೆ ತೋಟಕ್ಕೆ ಹೋದ. ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದ ಪರ್ಚಿಕ್‌ಗೆ ತನ್ನ ತಂದೆ ಕಷ್ಟಪಟ್ಟು ತಮ್ಮನ್ನು ಸಾಕುವುದು ತಿಳಿದಿತ್ತು. ಚಿಕ್ಕ ವಯಸ್ಸಿನವನಾದರೂ ಬಿಡುವಾದಾಗಲೆಲ್ಲಾ ಅಪ್ಪನಿಗೆ ತೋಟ ಮಾಡುವುದರಲ್ಲಿ ಸಹಾಯ ಮಾಡುತ್ತಿದ್ದ.

ಅಪ್ಪ ಮಗ ಇಬ್ಬರೂ ಸಾಕಷ್ಟು ಮಾಗಿದ ಹಣ್ಣುಗಳನ್ನು ಗುರುತಿಸಿ, ಮರುದಿನ ಬಂದು ಕೊಯ್ಯುವುದು ಎಂದು ನಿರ್ಧರಿಸಿ, ಮನೆಯ ಕಡೆಗೆ ಹೊರಟರು. ಮರಗಳ ಸಾಲಿನ ನಡುವೆ ಇನ್ನೂ ಒಂದು ಸೇಬಿನ ಸಸಿ ನೆಡುವಷ್ಟು ಜಾಗ ಕಣ್ಣಿಗೆ ಬಿದ್ದಾಗ, ''ಅಯ್ಯೋ, ಅಲ್ಲಿಯೂ ಒಂದು ಸಸಿ ಇದ್ದಿದ್ದರೆ ಇಷ್ಟೊತ್ತಿಗೆ ಅದೂ ಮರವಾಗಿ ಬೆಳೆದು ಹಣ್ಣು ಬಿಡ್ತಾ ಇತ್ತು. ಅಲ್ವಾ ? ಕೊನೆಗೂ ನನಗೆ ಅಲ್ಲಿ ಒಂದು ಸಸಿ ನೆಡಲಿಕ್ಕೆ ಆಗ್ಲೇ ಇಲ್ಲ ನೋಡು, ಪರ್ಚಿಕ್'' ಅಂದ ಸ್ಟೀಫನ್.

''ಅಪ್ಪಾ, ಈ ಮಾತನ್ನು ನೀನು ಎಷ್ಟೋ ಬಾರಿ ಹೇಳಿದ್ದೀಯ ಬಿಡು. ಅನುಕೂಲ ಆದಾಗ ಖಂಡಿತಾ ತಗಳ್ಳೋಣಂತೆ. ಇರುವುದರಲ್ಲೇ ತೃಪ್ತಿ ಪಟ್ಕೋಬೇಕು ಅಂತ ನೀನೇ ನನಗೆ ಹೇಳಿದ್ದೆ ಅಲ್ವಾ ? ಮತ್ಯಾಕೆ ಹಾಗೆ ಯೋಚನೆ ಮಾಡ್ತೀಯ,'' ಅಂತ ಸಮಾಧಾನ ಹೇಳಿದ ಪರ್ಚಿಕ್.

ತಮ್ಮ ಕುಟುಂಬದ ಖರ್ಚು ವೆಚ್ಚಗಳನ್ನು ನೋಡಿಕೊಳ್ಳುವುದರಲ್ಲೇ ಅವರ ದುಡಿಮೆಯ ಹಣವೆಲ್ಲಾ ವೆಚ್ಚವಾಗಿ ಹೋಗ್ತಾ ಇತ್ತು. ಮಾಗಿಯ ಚಳಿ ಬಂತು ಅಂದ್ರೆ ಮುಗೀತು.ರಷ್ಯಾದ ಬಹುಭಾಗ ಮಂಜಿನ ಮುಸುಕು ಹೊದ್ದುಬಿಡುತ್ತೆ. ''ಈ ಕೆಟ್ಟ ಚಳಿಯಿಂದ ರಕ್ಷಣೆ ಪಡೆದುಕೊಳ್ಳಲು ಬೆಚ್ಚನೆಯ ಬಟ್ಟೆಗಳು ಬೇಕೇಬೇಕು. ಕ್ರಿಸ್‌ಮಸ್ ಹಬ್ಬಕ್ಕೆ ಹೊಸ ಬಟ್ಟೆ ಬೇಕು. ಅದಕ್ಕೆಲ್ಲಾ ಈಗಲೇ ಹಣ ಹೊಂದಿಸಿಕೊಳ್ಳಬೇಕು,'' ಎನ್ನುವುದು ಯಜಮಾನಿ ವೆಲೆಂತಿನಾಳ ಯೋಚನೆ. ''ಹೇಗೂ ಸೇಬಿನ ಹಣ್ಣುಗಳು ಮಾಗಿವೆಯಲ್ಲಾ, ಅವುಗಳಲ್ಲಿ ಆಯ್ದ ಕೆಲವನ್ನು ಮಾರಿ ಬಂದ ಹಣದಿಂದ ಇವೆಲ್ಲವನ್ನೂ ಕೊಂಡರೆ ಆಯ್ತು'' ಎನ್ನುವುದು ಸ್ಟೀಫನ್‌ನ ಉತ್ತರ.

ಅಪ್ಪ-ಅಮ್ಮ ಊಟದ ನಂತರ ಹೊರಗೆ ಒಂದು ಸುತ್ತು ಸುತ್ತಾಡಿ ಬರುವುದು ವಾಡಿಕೆ. ಹಾಗೆ ಅವರು ಹೊರಹೋದಾಗ ಪುಟಾಣಿಗಳು ತಮ್ಮ ತಮ್ಮಲ್ಲೇ ಮಾತಾಡಿಕೊಳ್ಳುವುದು ರೂಢಿ. ಅವತ್ತು ಅಪ್ಪನ ಜೊತೆಗೆ ತೋಟಕ್ಕೆ ಹೋಗಿದ್ದ ಪರ್ಚಿಕ್‌ಗೆ ಅಪ್ಪ ತಮ್ಮನ್ನು ಖುಷಿಯಾಗಿಡಲು ಪಡುತ್ತಿರುವ ಕಷ್ಟದ ಬಗ್ಗೆ ತನ್ನ ತಮ್ಮಂದಿರಿಗೆ ಹೇಳಬೇಕು ಅನ್ನಿಸಿತು. ತಮ್ಮ ಸೆರ್ಗೇಯಿ ಮತ್ತು ಕಿರಿಯ ಮಿಖಾಯಿಲ್ ಇಬ್ಬರಿಗೂ ಅಪ್ಪ ಅಮ್ಮನ ಬಗ್ಗೆ ಹೇಳಿದ.

ಪುಟ್ಟ ಮಿಖಾಯಿಲ್ ಅದೇ ತಾನೆ ಪ್ರಾಥಮಿಕ ಶಾಲೆಯ ಮೆಟ್ಟಿಲು ಹತ್ತಿದ್ದರೂ ಕಲಿಕೆಯಲ್ಲಿ ತುಂಬಾ ಜಾಣ. ಯಾರಿಗೂ ಗೊತ್ತಾಗದ ಹಾಗೆ ಮನೆಯ ಹಿತ್ತಲಲ್ಲಿ ಒಂದೆಡೆ ಚೆಂದದ ಹೂವುಗಳನ್ನು ಬೆಳೆದಿದ್ದ. ತೋಟಕ್ಕೆ ನೀರು ಬಿಡಲು ಅಪ್ಪನಿಗೆ ಸಾಕಷ್ಟು ಬಾರಿ ಸಹಕರಿಸಿದ್ದ. ಅಮ್ಮನಿಗೆ ಮನೆಗೆಲಸದಲ್ಲಿ ಸಹಾಯ ಮಾಡಿದ್ದ. ಎರಡನೆಯವ ಸೆರ್ಗೇಯಿಯೂ ಅಷ್ಟೆ, ಅಪ್ಪ ಅಮ್ಮನಿಗೆ ಸಹಾಯ ಮಾಡಲು ಯಾವಾಗಲೂ ಸಿದ್ಧ. ಉಳಿತಾಯ ಮಾಡುವುದರಲ್ಲಿ ಎತ್ತಿದ ಕೈ. ಮೂವರೂ ಹೀಗೇ ಮಾತಾಡ್ತಾ ಇದ್ದಾಗ ಅಪ್ಪನ ಹುಟ್ಟಿದ ಹಬ್ಬಕ್ಕೆ ಇನ್ನೆರಡೇ ದಿನಗಳಿವೆ ಅನ್ನುವ ವಿಷಯವನ್ನು ಮಿಖಾಯಿಲ್ ತನ್ನ ಅಣ್ಣಂದಿರಿಗೆ ಹೇಳಿದ.

''ಹೌದಲ್ವಾ, ಹಾಗಾದ್ರೆ ಅಪ್ಪನಿಗೆ ಹುಟ್ಟಿದ ಹಬ್ಬದ ಉಡುಗೊರೆಯಾಗಿ ಏನಾದ್ರೂ ಅಮೂಲ್ಯವಾದದ್ದನ್ನು ಕೊಡಬೇಕು'', ಅಂತ ಮೂವರೂ ಯೋಚಿಸಿದರು. ಏನು ಕೊಡುವುದು ? ಊಹುಂ, ಹೊಳೆಯಲೇ ಇಲ್ಲ. ಅಮ್ಮ ಬರಲಿ, ಅವಳನ್ನೇ ಕೇಳೋಣ ಅಂತ ನಿರ್ಧರಿಸಿದರು.

ಅಪ್ಪನಿಗೆ ಗೊತ್ತಾಗದಂತೆ ಅಮ್ಮನಲ್ಲಿ ವಿಷಯ ಪ್ರಸ್ತಾಪ ಮಾಡಿದ್ರು. ''ಸೇಬಿನ ಮರಗಳ ಸಾಲಿನಲ್ಲಿ ಒಂದು ಸೇಬಿನ ಸಸಿ ಇದ್ರೆ ಎಷ್ಟು ಚೆನ್ನ ಅಂತ ಅಪ್ಪ ಹೇಳ್ತಾ ಇರ್‍ತಾರೆ. ಹಾಗಾಗಿ ಒಂದು ಸೇಬಿನ ಸಸಿ ತಂದು ಅಲ್ಲಿ ನೆಟ್ಟರೆ ಅಪ್ಪನಿಗೆ ಖುಷಿಯಾಗುತ್ತೆ'' ಅಂದ್ಲು ಅಮ್ಮ.

''ಅದು ಸರಿ, ಆದ್ರೆ, ಅದಕ್ಕೆ ತುಂಬಾ ದುಡ್ಡು ಬೇಕು. ಎಲ್ಲಿಂದ ತರೋದು?'' ಮತ್ತೆ ಯೋಚನೆ ಶುರು ಆಯ್ತು.

ಎಲ್ಲಾ ತಾಪತ್ರಯಗಳಿಗೂ ಒಂದಲ್ಲಾ ಒಂದು ಪರಿಹಾರ ಇದ್ದೇ ಇರುತ್ತೆ, ಅಲ್ವಾ ? ಮೂವರೂ ಪುಟಾಣಿಗಳು ತಮ್ಮದೇ ಸ್ವಂತ ದುಡ್ಡಿನಿಂದ ಅಪ್ಪನ ಹುಟ್ಟಿದ ಹಬ್ಬದ ವೇಳೆಗೆ ಉಡುಗೊರೆಯೊಂದನ್ನು ತರಲು ನಿರ್ಧರಿಸಿಯೇಬಿಟ್ಟರು !

ಮರುದಿನ ಮುಂಜಾನೆ ಪರ್ಚಿಕ್ ಆ ಹಳ್ಳಿಯ ಹಿರಿಯ ರೈತನೊಬ್ಬನ ಬಳಿಗೆ ಹೋಗಿ, ''ಯಜಮಾನರೆ, ತಮಗೆ ಕಟ್ಟಿಗೆ ಸೀಳಲು ಆಳು ಬೇಕು ಅಂತ ಪೇಟೆಯಲ್ಲಿ



ಯಾರಿಗೋ ಹೇಳಿದ್ರಂತಲ್ಲಾ, ನಾನು ನಿಮ್ಮ ಕಟ್ಟಿಗೆಯನ್ನು ಸೀಳಿಕೊಡಲೆ ? ನನಗೆ ಸ್ವಲ್ಪ ಹಣದ ಅವಶ್ಯಕತೆ ಇದೆ. ಕೂಲಿ ಕೊಟ್ಟರೆ ಸಾಕು. ನಿಮ್ಮ ಉಪಕಾರವನ್ನು ನಾನು ಮರೆಯುವುದಿಲ್ಲ,'' ಅಂತ ಹೇಳಿದ.

''ಸರಿಯಪ್ಪಾ, ಆದ್ರೆ ಬಹಳ ಹುಷಾರು. ಕೊಡಲಿಯನ್ನು ಕಾಲ ಮೇಲೆ ಹಾಕಿಕೊಂಡೀಯ ಮತ್ತೆ, ಜೋಪಾನ,'' ಅಂತ ಎಚ್ಚರಿಸಿ ತನ್ನ ಹಿತ್ತಲಲ್ಲಿದ್ದ ಕಟ್ಟಿಗೆಯ ರಾಶಿಯ ಬಳಿ ಕರೆದೊಯ್ದ. ಪರ್ಚಿಕ್ ಅವತ್ತು ಇಡೀ ದಿನ ಕಟ್ಟಿಗೆಯನ್ನು ಸಣ್ಣಗೆ ಸೀಳಿ, ಜೋಡಿಸಿಟ್ಟು ಸಂಜೆ ತನ್ನ ಕೂಲಿ ಕೇಳಿದಾಗ ಆ ರೈತ ಹುಡುಗನ ಕಷ್ಟಕ್ಕೆ ಮೆಚ್ಚಿ ಅವನು ಕೇಳಿದ್ದಕ್ಕಿಂತಲೂ ಇಮ್ಮಡಿ ಕೂಲಿ ನೀಡಿ, ಒಳ್ಳೆಯದಾಗಲಿ ಎಂದು ಹರಸಿದ.

ಆ ರಾತ್ರಿ ಊಟದ ನಂತರ ಅಪ್ಪ - ಅಮ್ಮ ಎಂದಿನಂತೆ ಹೊರಗೆ ಸುತ್ತಾಡಲು ಹೋದಾಗ ಪುಟಾಣಿಗಳೆಲ್ಲಾ ಒಟ್ಟಿಗೆ ಸೇರಿ ಹಣ ಸಂಗ್ರಹಣೆ ಮಾಡಲು ತಾವು ಮಾಡಿದ ಸಾಹಸ ಕುರಿತು ಮಾತಾಡಿದರು. ಪರ್ಚಿಕ್‌ನ ಸಂಪಾದನೆ ಈಗ ಎದುರಿಗಿತ್ತು.

''ನನಗೆ ಅಪ್ಪ ಹೊಸ ಬೂಟುಗಳನ್ನು ಕೊಳ್ಳಲು ಸ್ವಲ್ಪ ಹಣ ನೀಡಿದ್ರು. ಅದನ್ನೇ ನಾನು ಕೊಡ್ತೀನಿ,'' ಅಂದ ಸೆರ್ಗೇಯಿ.

ಪುಟ್ಟ ಮಿಖಾಯಿಲ್‌ಗೆ ಅಣ್ಣನ ಬಗ್ಗೆ ಹೆಮ್ಮೆ. ''ಅಣ್ಣಾ, ನಿನ್ನ ಶೂಗಳಲ್ಲಿ ದೊಡ್ಡ ತೂತಾಗಿಬಿಟ್ಟಿದೆ. ಹೊಸ ಶೂಗಳನ್ನು ಕೊಳ್ಳಲೇಬೇಕು ನೀನು. ಹೇಗೆ ಮಾಡ್ತೀ ಈಗ ?'' ಅಂದ.

''ನನ್ನ ಶೂಗಳಿಗಿಂತ ಅಪ್ಪನ ಹುಟ್ಟಿದ ಹಬ್ಬದ ದಿನ ಅಪ್ಪನನ್ನು ಖುಷಿಪಡಿಸಬೇಕು ಅನ್ನೋದು ಮುಖ್ಯ. ಅಲ್ವಾ?'' ಅಂದ ಸೆರ್ಗೇಯಿ.

''ಸರಿ, ಮತ್ತೆ ಮಿಖಾಯಿಲ್, ನಿನ್ನ ಹತ್ರ ಏನಾದ್ರೂ ಹಣ ಇದೆಯಾ?'' ಅಂತ ಪರ್ಚಿಕ್ ಕೇಳಿದ.

''ಸದ್ಯಕ್ಕೆ ಇಲ್ಲ, ನಾಳೆ ಸಂಜೆಯ ಒಳಗೆ ಖಂಡಿತಾ ತರ್ತೀನಿ ಆಯ್ತಾ ? ನಂಗೆ ನಂದೇ ಒಂದು ಪ್ಲಾನಿದೆ,'' ಅಂದ ಮಿಖಾಯಿಲ್.

ಮರುದಿನ ಬೆಳಗ್ಗೆ ತಾನೇ ಬೆಳೆಸಿದ್ದ ಹೂವಿನ ಗಿಡಗಳಲ್ಲಿನ ಅಂದವಾದ ಹೂಗಳನ್ನು ಕೊಯ್ದು ಚೆಂದದ ಪುಟ್ಟ ಪುಟ್ಟ ಹೂಗುಚ್ಛ ತಯಾರಿಸಿದ. ಮಾರುಕಟ್ಟೆಗೆ ಹೋಗಿ, ''ಅಕ್ಕಾ, ನಿಂಗೆ ಈ ಹೂಗಳು ಚೆನ್ನಾಗಿ ಒಪ್ತವೆ, ತಗೋ.'' ''ಅಣ್ಣಾ ನಿನ್ನ ಮಗಳಿಗೆ ಈ ಹೂಗಳು ಇಷ್ಟ ಆಗ್ತವೆ, ದಯವಿಟ್ಟು ಒಂದು ಹೂ ಗುಚ್ಛ ತಗೊಳ್ತಿಯಾ ?'' ಅಂತ ಮೃದುವಾಗಿ ಮಾತಾಡಿ ತನ್ನ ಚೆಂದದ ಹೂಗಳನ್ನು ಮಾರಿ ಹಣ ಸಂಗ್ರಹಿಸಿ ಮನೆಗೆ ಬಂದ. ಸಂಜೆಯ ವೇಳೆಗೆ ಮಕ್ಕಳು ತಮ್ಮ ಬಳಿಯಿದ್ದ ದುಡ್ಡನ್ನೆಲ್ಲಾ ಕೂಡಿಸಿ ಒಂದು ಸೇಬಿನ ಸಸಿಯನ್ನು ತಂದು ಹಿತ್ತಲಲ್ಲಿಟ್ಟರು. ಬೆಳಗ್ಗೆ ಅಪ್ಪ ಏಳುವುದಕ್ಕೂ ಮೊದಲೇ ತೋಟಕ್ಕೆ ಹೋಗಿ, ಸಸಿ ನೆಟ್ಟು, ಅಪ್ಪನಿಗೆ ತೋರಿಸಿ, ಶುಭಾಶಯ ಹೇಳೋಣ ಅಂತ ನಿರ್ಧರಿಸಿದರು.

ಚುಮುಚುಮು ನಸುಕಿನಲಿ ಮೂವರು ಸಹೋದರರು ಮೈತುಂಬಾ ಬೆಚ್ಚನೆಯ ಬಟ್ಟೆ ಧರಿಸಿ, ಕೈಯಲ್ಲಿ ಗುದ್ದಲಿ, ಪಿಕಾಸಿ ಹಿಡಿದು, ಹಿತ್ತಲಲ್ಲಿಟ್ಟಿದ್ದ ಸೇಬಿನ ಸಸಿಯನ್ನು ತೆಗೆದುಕೊಂಡು ತಮ್ಮ ತೋಟದ ಬದಿಯ ಸೇಬಿನ ಮರಗಳ ಸಾಲಿನತ್ತ ನಡೆದರು. ಯಾವ ಖಾಲಿ ಜಾಗ ನೋಡಿ ಅಪ್ಪ ಕೊರಗುತ್ತಾ ಇದ್ದನೋ ಆ ಜಾಗದಲ್ಲಿ ಗುಂಡಿ ಅಗೆಯಲು ಆರಂಭಿಸಿದರು. ಸಸಿ ನೆಡುವಷ್ಟು ದೊಡ್ಡ ಗುಂಡಿ ಅಗೆದಾಯಿತು. ಇನ್ನೂ ಸ್ವಲ್ಪ ಆಳ ಅಗದರೆ ಸಸಿಗೆ ಚೆನ್ನಾಗಿ ಬೇರು ಬಿಡಲು ಸಾಕಷ್ಟು ನೀರು, ಗೊಬ್ಬರ ಸಿಗುತ್ತೆ ಅನ್ನಿಸಿ, ಆಳಕ್ಕೆ ಅಗೆಯಲು ಪಿಕಾಸಿಯನ್ನು ಬಲವಾಗಿ ನೆಲಕ್ಕೆ ಹಾಕಿದ ಪರ್ಚಿಕ್. ''ಠಣ್ !'' ಅಂತ ಸದ್ದು ಏನಿದು ? ಕಬ್ಬಿಣದ ಪೆಟ್ಟಿಗೆಗೆ ಹೊಡೆದಂತಿದೆಯಲ್ಲಾ ! ಮೂವರಿಗೂ ಆಶ್ಚರ್ಯ.

ಬೇಗ ಬೇಗ ಮಣ್ಣು ಅಗೆದು, ಪಿಕಾಸಿಗೆ ತಗುಲಿದ ಆ ಪೆಟ್ಟಿಗೆಯನ್ನು ಎತ್ತಿ ಹೊರಗಿಟ್ಟರು. ಈಗ ಗುಂಡಿ ಹೇಗೂ ಆಳವಾಗಿತ್ತಲ್ಲ. ಅಲ್ಲಿ ಸೇಬಿನ ಸಸಿಯನ್ನು ನೆಟ್ಟು, ಪಾತಿ ಮಾಡಿ, ಸ್ವಲ್ಪ ನೀರು ಹಾಕಿದರು. ಪುಟಾಣಿಗಳ ಶ್ರಮ ಕಂಡು ಬೆಳಗಿನ ಆ ಸಮಯದಲ್ಲಿ ಆ ಗಿಡವೂ ನಕ್ಕಿತು !

ಗಿಡ ನೆಟ್ಟ ನಂತರ, ದೊರೆತ ಆ ಪೆಟ್ಟಿಗೆಯನ್ನು ಎತ್ತಿಕೊಂಡು ಮೂವರೂ ಮನೆ ಕಡೆ ಓಡಿದರು. ಇನ್ನೂ ನಿದ್ದೆಯಲ್ಲಿದ್ದ ಅಪ್ಪ ಅಮ್ಮನನ್ನು ಎಬ್ಬಿಸಿದರು. ತಮಗೆ ದೊರೆತ ಪೆಟ್ಟಿಗೆಯನ್ನು ತೋರಿಸಿದರು. ಅದು ಏನು ? ಅಲ್ಲೇಕೆ ಬಂತು ? ಎಂಬುದನ್ನು ಅರ್ಥ ಮಾಡಿಕೊಳ್ಳುವು ದಕ್ಕೆ ಅವರಿಗೆ ಸ್ವಲ್ಪ ಸಮಯ ಹಿಡಿಯಿತು. ಕೊನೆಗೆ, ಪರ್ಚಿಕ್ ಎಲ್ಲಾ ವಿಷಯ ವಿವರಿಸಿ ಹೇಳಿದ. ಮೂವರೂ ಅಪ್ಪನಿಗೆ ಶುಭಾಶಯ ಹೇಳಿ ಅಪ್ಪನಿಗಾಗಿ ಸೇಬಿನ ಸಸಿ ನೆಟ್ಟ ಕಥೆಯನ್ನು ವಿವರಿಸಿದರು. ಪುಟಾಣಿಗಳ ಈ ಸಾಹಸವನ್ನು ಕೇಳಿ ಅಪ್ಪ-ಅಮ್ಮ ಇಬ್ಬರಿಗೂ ಕಣ್ಣು ತುಂಬಿಬಂದವು !

ಸರಿ, ತಂದ ಪೆಟ್ಟಿಗೆಯ ವಿಷಯ ? ಅದಕ್ಕೆ ಮೆತ್ತಿದ್ದ ಮಣ್ಣನ್ನು ತೆಗೆದು ಮುಚ್ಚಳವನ್ನು ತೆರೆದಾಗ ಎಲ್ಲರಿಗೂ ಅಚ್ಚರಿ ! ಪೆಟ್ಟಿಗೆ ತುಂಬಾ ಬಂಗಾರದ ಮೊಹರುಗಳು ! ನೂರಾರು ! ಎಲ್ಲರಿಗೂ ಖುಷಿಯೋ ಖುಷಿ !

ಅಪ್ಪ - ಅಮ್ಮನನ್ನು ಮಕ್ಕಳು ತೋಟಕ್ಕೆ ಕರೆದೊಯ್ದು ತಾವು ನೆಟ್ಟ ಸೇಬಿನ ಸಸಿಯನ್ನು ತೋರಿಸಿದರು. ಅಪ್ಪನಿಗೆ ಅಷ್ಟೊಂದು ವರ್ಷ ಖಾಲಿ ಇದ್ದ ಜಾಗದಲ್ಲಿ ಈಗ ಸಸಿ ನೋಡಿ ಪುಟಾಣಿಗಳ ಬಗ್ಗೆ ಹೆಮ್ಮೆ ಎನಿಸಿತು. ಅಪ್ಪನಿಗೆ ಅತ್ಯಮೂಲ್ಯವಾದ ಆತ್ಮೀಯ ಉಡುಗೊರೆ ನೀಡಿದ್ದರು ಆ ಚಿಣ್ಣರು !

ತೋಟದಿಂದ ಮನೆಗೆ ಬಂದ ಅಪ್ಪ ಪೆಟ್ಟಿಗೆಯಲ್ಲಿದ್ದ ಬಂಗಾರದ ನಾಣ್ಯಗಳೆಲ್ಲವನ್ನೂ ತೆಗೆದು ಮೂರು ಭಾಗ ಮಾಡಿದ. ಮೂವರು ಮಕ್ಕಳನ್ನು ಕರೆದು, ''ಈ ಮೂರೂ ಭಾಗಗಳು ನಿಮ್ಮವು. ನೀವು ದೊಡ್ಡವರಾದಾಗ ಇವುಗಳನ್ನು ಬಳಸಿಕೊಳ್ಳಬಹುದು. ಅಲ್ಲಿಯವರೆಗೆ ಅವು ಭದ್ರವಾಗಿರಲಿ,'' ಎಂದು ಹೇಳಿದ.

''ಅಪ್ಪ ಎಲ್ಲವನ್ನೂ ನಮಗೆ ಕೊಟ್ಟರೆ ಹೇಗೆ ? ನಿಮಗೆ ಬೇಡವೇ?'' ಅಂತ ಮೂವರೂ ಕೇಳಿದರು.

''ಅದು ನಿಮ್ಮ ಶ್ರಮದ ಫಲ. ನೀವೇ ಅದಕ್ಕೆ ಹಕ್ಕುದಾರರು. ನೀವು ಪ್ರೀತಿಯಿಂದ ಕೊಟ್ಟ ಸೇಬಿನ ಸಸಿ ಇದೆಯಲ್ಲ, ಅದು ಮುಂದೆ ದೊಡ್ಡದಾಗಿ ಹಣ್ಣುಗಳನ್ನು ಕೊಡುತ್ತೆ. ನಿಮ್ಮ ಸಾಹಸವನ್ನು ಅದು ಮತ್ತೆ ಮತ್ತೆ ನೆನಪಿಸುತ್ತೆ. ಸದ್ಯ ನನಗೆ ಆ ಸೇಬಿನ ಸಸಿಯೇ ಸಾಕು. ನಾನು ಬದುಕಿರುವವರೆಗೂ ಇನ್ನೆಂದೂ ಆ ಜಾಗ ಖಾಲಿ ಇದೆ ಎಂದು ಕೊರಗುವುದನ್ನು ತಪ್ಪಿಸಿದ ನಿಮ್ಮ ಪ್ರೀತಿಯ ಉಡುಗೊರೆಯೇ ನನ್ನ ಪಾಲಿಗೆ ಎಲ್ಲವೂ. ನಿಮ್ಮಂತಹ ಮುದ್ದು ಮಕ್ಕಳಿರುವಾಗ ಬೇರೆ ಏನು ತಾನೇ ಬೇಕು?'' ಅಂತ ತುಂಬು ಪ್ರೀತಿಯಿಂದ ಹೇಳಿದ.

ಹೌದಲ್ವಾ ? ಅಪ್ಪನಿಗೆ ಪ್ರೀತಿಗಿಂತ ಮಿಗಿಲಾದ ಉಡುಗೊರೆ ಯಾವುದಿದೆ ? ಅದಕ್ಕಿಂತ ಹೆಚ್ಚಿನದೇನನ್ನು ಅಪ್ಪನಿಗೆ ಕೊಡಲು ಸಾಧ್ಯ ? ನೀವೂ ನಿಮ್ಮ ಅಪ್ಪ ಅಮ್ಮನಿಗೆ ಪ್ರೀತಿಯಿಂದ ನೋಡಿಕೊಳ್ತೀರಿ ತಾನೇ ? ಅಂದಹಾಗೆ ಕಥೆ ಇಷ್ಟ ಆಯ್ತಾ ?

ಬೈ, ಮತ್ತೆ ಹೀಗೇ ಯಾವಾಗಲಾದರೂ ಭೇಟಿಯಾಗ್ತೇನೆ.

ನಿಮ್ಮವ, ಸುಮಂತ.

• ರಷ್ಯಾ ದೇಶದ ಜನಪದ ಕಥೆಯನ್ನು ಕನ್ನಡಕ್ಕೆ ರೂಪಾಂತರಿಸಿದವರು :

ಬೇದ್ರೆ ಎಸ್. ಮಂಜುನಾಥ
ಪ್ರಸಾರ ನಿರ್ವಾಹಕರು, ಆಕಾಶವಾಣಿ ಕೇಂದ್ರ
ಚಿತ್ರದುರ್ಗ - ೫೭೭ ೫೦೧

# ಸಾಮೂಹಿಕ ಗದ್ದಲ ಆರೋಗ್ಯಕ್ಕೆ ಹಾನಿಕರ

ದಿನದ ದುಡಿಮೆಯಿಂದ ಬಳಲಿ, ಮನೆಗೆ ಬಂದು ಹಾಯಾಗಿ ನಿದ್ರಿಸಬೇಕೆಂದು ಯೋಚಿಸುವುದು, ಪ್ರಯಾಣದ ಸಂದರ್ಭದಲ್ಲಿ ನೆಮ್ಮದಿಯಿಂದ ಗುರಿ ತಲಪಬೇಕೆಂದು ಭಾವಿಸುವುದು, ಮದುವೆಯ ಸಂಭ್ರಮದಲ್ಲಿ ಉಲ್ಲಾಸದಿಂದ ಪಾಲ್ಗೊಳ್ಳಬೇಕೆಂದು ತೀರ್ಮಾನಿಸುವುದು ಇತ್ಯಾದಿ ಯೋಚನೆಗಳು ಇಂದು ಸುಗಮವಾಗಿ ನೆರವೇರಿದರೆ ನಾವೇ ಭಾಗ್ಯವಂತರೆಂದು ಭಾವಿಸಬಹುದು. ಆಧುನಿಕ ಜೀವನದಲ್ಲಿ ಸಾಮೂಹಿಕ ಗದ್ದಲಗಳು ಮಿತಿಮೀರಿರುವುದರಿಂದ ನೆಮ್ಮದಿಯ ಜೀವನ ಅಸಾಧ್ಯವೆಂದೆನಿಸಿದೆ.



ಶಬ್ದಮಾಲಿನ್ಯ ಇಂದು ಎಲ್ಲಾ ಕಡೆ ವ್ಯಾಪಿಸಿಕೊಂಡಿದೆ. ಬಸ್ಸು ಚಲಾಯಿಸುವಾಗ ಕರ್ಕಶ ಹಾರ್ನ್ ಬಳಸುವುದು ಒಂದು ಮೋಜೆನಿಸಿದೆ. ಏರು ಸ್ವರದಲ್ಲಿ ಹೊರಬರುವ ಅಸಂಬದ್ಧ ಹಾಡುಗಳಿಗೆ ಪ್ರಯಾಣಿಕರು ಕಡ್ಡಾಯವಾಗಿ ಕಿವಿಗೊಟ್ಟು ಪ್ರಯಾಣಿಸ ಬೇಕಾಗಿದೆ. ಮದುವೆ ಸಮಾರಂಭಗಳಲ್ಲಿ ಕೊಂಬು, ಕಹಳೆ, ವಾದ್ಯ ಉಪಕರಣಗಳನ್ನು ಧ್ವನಿವರ್ಧಕಗಳ ಮೂಲಕ ಬಿತ್ತರಿಸಲಾಗುತ್ತಿದೆ. ಈ ಸದ್ದು ಕಿಕ್ಕಿರಿದು ಜನ ತುಂಬಿರುವ ಸಭಾಭವನಗಳ ಗೋಡೆಗಳಿಗೆ ಅಪ್ಪಳಿಸಿ, ಪ್ರತಿಧ್ವನಿಸಿ ಕಿರಿಕಿರಿಯುಂಟುಮಾಡುತ್ತದೆ. ವಠಾರದಲ್ಲೊಂದು ವಿವಾಹ ಸಮಾರಂಭ ವಿದ್ದರೆ ನೆರೆಕರೆಯವರಿಗೆ ರಾತ್ರಿಯಿಡೀ ನಿದ್ದೆಯಿರುವುದಿಲ್ಲ. ಸಾರ್ವಜನಿಕ ಸಮಾರಂಭ ಗಳಲ್ಲಿ, ಮೆರವಣಿಗೆಗಳಲ್ಲಿ, ಪ್ರಚಾರ ಕಾರ್ಯಗಳಲ್ಲಿ ಧ್ವನಿವರ್ಧಕಗಳದ್ದೇ ಅಬ್ಬರ.

ಅತಿಯಾದ ಸದ್ದುಗದ್ದಲ ಇಂದು ತಾಳ್ಮೆಯ ಮಟ್ಟವನ್ನು ಮೀರಿದೆ. ಶಬ್ದವನ್ನು ಮಿತ, ಅತಿಯೆಂದು ಅಳೆಯುವುದು ಸಾಧ್ಯವೇ? ಶಬ್ದದ ತೀವ್ರತೆಯನ್ನು 'ಡೆಸಿಬೆಲ್' ಎಂಬ ಮಾಪನದಿಂದ ಅಳೆಯಲಾಗುತ್ತದೆ. ಉದಾಹರಣೆಗೆ ಕೆಲವು ಸದ್ದುಗಳ ತೀವ್ರತೆ ಡೆಸಿಬೆಲ್ ಗಳಲ್ಲಿ ಈ ರೀತಿಯಿದೆ. ಕೈಗಡಿಯಾರದ ಚಲನೆ-೨೦; ಸಾಮಾನ್ಯ ಸಂಭಾಷಣೆ-೬೦; ಮೋಟಾರ್ ಸೈಕಲ್ ಎಂಜಿನಿನ ಸದ್ದು-೯೦; ಬಸ್ಸುಗಳಲ್ಲಿ ಕೇಳಿಸುವ ಟೇಪ್ ಸಂಗೀತ-೧೨೫; ಪಟಾಕಿಯ ಸದ್ದು-೧೬೦ ಡೆಸಿಬೆಲ್ ಇತ್ಯಾದಿ. ೫೦ ಡೆಸಿಬೆಲ್‌ನಷ್ಟು ಸದ್ದು ಸಾಮಾನ್ಯ ಮಟ್ಟದ್ದು. ದಿನಂಪ್ರತಿ ೮ ಗಂಟೆಗಳಿಗಿಂತ ಅಧಿಕ ಸಮಯ ೯೦ ಡೆಸಿಬೆಲ್ ಗಳಷ್ಟು ಗದ್ದಲ ಕೇಳಿಸಿಕೊಂಡರೆ ಕಿವಿಗಳಿಗೆ ಹಾನಿಯಾಗುತ್ತದೆ.

**ಪರಿಣಾಮ**

ಅತಿಯಾದ ಸದ್ದಿನಿಂದ ನಮಗೆ ಬಹಳಷ್ಟು ಹಾನಿಯಿದೆ. ಶಬ್ದಮಾಲಿನ್ಯ ಮಾನವನ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ. ಅತಿಯಾದ ಶಬ್ದದಿಂದ ಮನಸ್ಸು ಉದ್ರೇಕಗೊಳ್ಳುತ್ತದೆ. ಹೃದಯದ ಬಡಿತದಲ್ಲಿ ಏರುಪೇರುಂಟಾಗುತ್ತದೆ. ಕಾರ್ಯಕ್ಷಮತೆ ಕುಂಠಿತವಾಗುತ್ತದೆ. ನೆಮ್ಮದಿ ಕೆಡುತ್ತದೆ. ತಲೆನೋವು, ಮಾನಸಿಕ ಅಸಮತೋಲನ ವುಂಟಾಗುತ್ತದೆ. ನಿದ್ರಾಹೀನತೆ ಮತ್ತು ಮಾನಸಿಕ ಒತ್ತಡಗಳಿಗೆ ಕಾರಣವಾಗುತ್ತದೆ. ಅತಿಯಾದ ಸದ್ದು ನರಮಂಡಲದ ಮೇಲೆ ಪರಿಣಾಮ ಬೀರುವುದರಿಂದ ಮೆದುಳಿನ ಚಟುವಟಿಕೆ ಕಡಿಮೆ ಯಾಗುತ್ತದೆ. ದೃಷ್ಟಿದೋಷಗಳು ತಲೆದೋರುತ್ತವೆ. ಕರ್ಕಶ ಸದ್ದನ್ನು ದಿನನಿತ್ಯ ಕೇಳಿಸಿ ಕೊಂಡರೆ ಕಿವುಡುತನ ಉಂಟಾಗಬಹುದು. ಕಿವುಡುತನ ಜೀವನದ ಮಟ್ಟವನ್ನು ಕುಗ್ಗಿಸುತ್ತದೆ.

ಮನುಷ್ಯನ ಭಾವನೆ, ವರ್ತನೆ ಮತ್ತು ಸಂವಹನ ವ್ಯವಸ್ಥೆಯ ಮೇಲೆ ಪ್ರಭಾವ ಬೀರುವ ಶಬ್ದಮಾಲಿನ್ಯವನ್ನು ತಡೆಗಟ್ಟುವುದಾದರೂ ಹೇಗೆ ?

ಶಬ್ದಮಾಲಿನ್ಯವನ್ನು ತಡೆಗಟ್ಟುವ ಒಂದು ಕಾಯಿದೆಯನ್ನು ಕೇಂದ್ರ ಪರಿಸರ ಮತ್ತು ಅರಣ್ಯ ಇಲಾಖೆ ೧೯೮೬ರಲ್ಲೇ ಪ್ರಕಟಿಸಿದೆ. ಈ ಕಾಯಿದೆಯಂತೆ ರಾತ್ರಿ ೧೦ ಗಂಟೆಯಿಂದ ಬೆಳಿಗ್ಗೆ ೬ ಗಂಟೆಯ ತನಕ ಧ್ವನಿವರ್ಧಕಗಳನ್ನು ಉಪಯೋಗಿಸುವಂತಿಲ್ಲ. ಆಸ್ಪತ್ರೆ, ವಿದ್ಯಾ ಸಂಸ್ಥೆ, ಕೋರ್ಟು ಕಛೇರಿಗಳ ೧೦೦ ಮೀಟರ್ ವ್ಯಾಪ್ತಿಯೊಳಗೆ ವಾಹನಗಳ ಹಾರ್ನ್, ಬ್ಯಾಂಡ್ ಬಾರಿಸುವುದು, ಸುಡುಮದ್ದುಗಳನ್ನು ಸುಡುವುದು ಇತ್ಯಾದಿಗಳನ್ನು ನಿಷೇಧಿಸಲಾಗಿದೆ. ಕಾನೂನು ಕಾಯಿದೆಗಳಿಗೆ ನಮ್ಮ ದೇಶದಲ್ಲಿ ಅಭಾವವೇ ಇಲ್ಲ. ಆದರೆ ಅವುಗಳನ್ನು ಪಾಲಿಸುವವರು ಮತ್ತು ಅನುಷ್ಠಾನಕ್ಕೆ ತರುವವರು ಇಲ್ಲದಂತಾಗಿದೆ. ಶಬ್ದಮಾಲಿನ್ಯ ದಿನನಿತ್ಯ ಮುಂದುವರಿಯುತ್ತಿದೆ !

ಶಬ್ದಮಾಲಿನ್ಯವನ್ನು ತಡೆಗಟ್ಟಲು ಸಾರ್ವಜನಿಕರ ಸಹಕಾರ ಅವಶ್ಯಕ. ಮಾಲಿನ್ಯಕ್ಕೆ ಕಾರಣಕರ್ತರಾದವರು ತಮ್ಮನ್ನು ತಿದ್ದಿಕೊಳ್ಳಬೇಕಾಗಿದೆ. ಕಾನೂನು ಪಾಲಕರು ಕಟ್ಟುನಿಟ್ಟಿನ ನಿರ್ಬಂಧಗಳನ್ನು ಹೇರಬೇಕಾಗಿದೆ. ಈ ಎರಡು ಗುಂಪುಗಳೂ ಕಾರ್ಯಪ್ರವೃತ್ತವಾಗಿ ಸಹಕರಿಸದಿದ್ದರೆ ನಾವೇನು ಮಾಡಬಹುದು ? ನಮ್ಮ ಕಿವಿಗಳನ್ನೇ ಮುಚ್ಚಿಕೊಳ್ಳಬೇಕಷ್ಟೆ?


**ಪಿ. ಶಿವರಾಮ ರೈ**

೩೦೩, ಕ್ಯಾಸೆಲ್ ಅಪಾರ್ಟ್‌ಮೆಂಟ್, ಕದ್ರಿ, ಮಂಗಳೂರು - ೫೭೫ ೦೦೨

# ಸಾಹಿತ್ಯ ಮತ್ತು ಸಂಸ್ಕೃತಿ ಒಂದು ವಿವೇಚನೆ

ಪ್ರೊ. ಮು. ಗಂಗಾಧರಯ್ಯ

**ಕಾ**ವ್ಯರಂಗದಲ್ಲಿ ಒಬ್ಬ ಸಾಹಿತಿಗೆ 'ಕವಿ' ಎಂಬ ಸರ್ಟಿಫಿಕೇಟ್ ಯಾರೂ ಕೊಡಬೇಕಾಗಿಲ್ಲ. 'ಕವಿ' ಕಾವ್ಯದ ಮೂಲಪುರುಷ, ಸಹೃದಯನ ಗುರು, ವಿಮರ್ಶಕನ ಶಿಷ್ಯ. ಇದೆಲ್ಲವೂ ಒಪ್ಪಿದಾಗ ಒಬ್ಬ ಸಾಹಿತ್ಯ ಚಿಕಿತ್ಸಕ ಸಾಹಿತ್ಯದೊಡಲನ್ನು ಬಗೆಯುವ ಶ್ರಮಿಕನಾಗಿರುತ್ತಾನೆ. ಆದರೆ ಸಾಹಿತಿ ಒಂದು ಕಾವ್ಯದ ತೇಜಸ್ಸನ್ನು ಕಾಣುವಾಗ 'ಅದರ' ಹಿಂದಿನ ಹಾಗೂ ಮುಂದಿನ ಅಂದರೆ ಸಮಗ್ರ ಸಾಹಿತ್ಯದ ನರನಾಡಿಗಳ ಜೊತೆ ಪ್ರವಾಸಿಗನಾಗಿರುತ್ತಾನೆ. ನಂತರ ತನ್ನ ಗ್ರಹಿಕೆಯ ಅನುಭವಗಳನ್ನು ಕ್ರೋಢೀಕರಿಸಿಕೊಂಡಾಗ ರಚನೆಯ ಹಂತಕ್ಕೆ ತಲುಪುತ್ತಾನೆ. ಹಾಗಾಗಿ ಆತನ ರಚನೆಯ ದಿನಗಳಿಂದ ಬೆಳವಣಿಗೆಯ ಕನಸುಗಳನ್ನು ಕಾಣುವುದು ಅನಿವಾರ್ಯದ ನುಡಿ. ಆದ್ದರಿಂದ ತನ್ನ ಪರಿಸರದ ಆಯಾಮಗಳನ್ನು ಸಾಹಿತ್ಯದೊಳಗೆ ಬೆಳೆಸಲು ತೊಡಗುತ್ತಾನೆ. ಒಬ್ಬ ಸಾಹಿತಿ ತನ್ನ ಕ್ರಿಯಾಭಾವನೆಗಳನ್ನೆಲ್ಲ ಕ್ರೋಢೀಕರಿಸಿ, ಆಂತರಿಕ ಪ್ರಪಂಚದೊಳಹೊಕ್ಕು ಕಾವ್ಯಲೋಕ ಪರಿಸರವನ್ನು ಸ್ಫುರಿಸುತ್ತಾನೆ. ಹೀಗಾಗಿ ಸಮಾಜಶಾಸ್ತ್ರಜ್ಞ – ಹರ್‌ಸ್ಕೋವಿಟ್ಸ್ ಹೇಳಿದ ಹಾಗೆ ''ಪರಿಸರ ಮಾನವ ನಿರ್ಮಿತ ಭಾಗವೇ ಸಂಸ್ಕೃತಿ''. ಇದು ಸೌಂದರ್ಯದ ಕಡೆಗೆ ಹೊರಳುತ್ತದೆ. ಕವನದ ಲಯವೂ, ಶಬ್ದಮಾಧುರ್ಯವೂ ನಮ್ಮ ಕಣ್ಣು ತೆರೆಯುವಂತೆ ಮಾಡುತ್ತವೆ. ಈ ಪರಿಸರ ಪ್ರಜ್ಞೆ ಕವಿಯ ಕಾಣ್ಕೆಯಾಗಿದೆ.

ಸಂಸ್ಕೃತಿಯು ಮಾನವಶಾಸ್ತ್ರಜ್ಞರ ಅಧ್ಯಯನದಲ್ಲಿ ಪ್ರಮುಖ ಪರಿಕಲ್ಪನೆಯಾಗಿದೆ. ಸಾಮಾನ್ಯವಾಗಿ ಸಾಹಿತ್ಯದಲ್ಲಿ ಸಂಸ್ಕೃತಿಯೆಂದರೆ ಸಭ್ಯತೆ, ಸುಶಿಕ್ಷತೆ, ವಿನಯಶೀಲ ನಡೆವಳಿಕೆ, ಎಂದು ಅರ್ಥೈಸುತ್ತೇವೆ. ''ಮಾಧುರ್ಯ ಮತ್ತು ದೀಪ್ತಿ'' – ಇವೇ ಸಂಸ್ಕೃತಿಯ ಸಾರವೆಂದು ಮ್ಯಾಥ್ಯೂ ಅರ್ನಾಲ್ಡ್ ಹೇಳಿದ್ದಾನೆ. ಹೀಗಾಗಿ ಪರಂಪರೆಯೊಳಗೆ ಸಂಸ್ಕೃತಿಯೆಂಬುದು ಕಲಿಕೆಯಿಂದ ಬಂದುದು. ವ್ಯಕ್ತಿಗಳು ತಾವು ಯಾವುದಾದರೂ ನಿರ್ದಿಷ್ಟ ಸಮೂಹಕ್ಕೆ ಸೇರಿದ್ದರ ಫಲವಾಗಿ ಅದನ್ನು ಕಲಿಯುತ್ತಾರೆ. ಅದು ಇತರರೊಡನೆ ಪಾಲ್ಗೊಂಡು ಕಲಿತ ವರ್ತನೆಯ ಭಾಗವಾಗಿರುತ್ತದೆ.

'ಸಂಸ್ಕೃತಿ' ಪರಿವರ್ತನೆಯಾದಂತೆ ಭಾವನಾ ಪ್ರಪಂಚದಲ್ಲಿ ಅನೇಕ ಕಾವ್ಯಗಳು ಮೇಳೈಸುತ್ತವೆ. ಅವೆಲ್ಲವೂ ತಮ್ಮದೆ ಆದ ಸ್ಥಿತಿಗತಿಗಳನ್ನು, ಸಂಸ್ಕೃತಿ ಸಂಕೋಲೆಗಳನ್ನು ಎತ್ತಿಹಿಡಿಯಲು ಹೊರಟಂತಿವೆ. ಉದಾಹರಣೆಗೆ – ದೇವನೂರು ಮಹಾದೇವರ

ಸಂಸ್ಕೃತಿಯು ಮಾನವಶಾಸ್ತ್ರಜ್ಞರ ಅಧ್ಯಯನದಲ್ಲಿ ಪ್ರಮುಖ ಪರಿಕಲ್ಪನೆಯಾಗಿದೆ. ಸಾಮಾನ್ಯವಾಗಿ ಸಾಹಿತ್ಯದಲ್ಲಿ ಸಂಸ್ಕೃತಿಯೆಂದರೆ ಸಭ್ಯತೆ, ಸುಶಿಕ್ಷತೆ, ವಿನಯಶೀಲ ನಡೆವಳಿಕೆ, ಎಂದು ಅರ್ಥೈಸುತ್ತೇವೆ. ''ಮಾಧುರ್ಯ ಮತ್ತು ದೀಪ್ತಿ'' – ಇವೇ ಸಂಸ್ಕೃತಿಯ ಸಾರವೆಂದು ಮ್ಯಾಥ್ಯೂ ಅರ್ನಾಲ್ಡ್ ಹೇಳಿದ್ದಾನೆ. ಹೀಗಾಗಿ ಪರಂಪರೆಯೊಳಗೆ ಸಂಸ್ಕೃತಿಯೆಂಬುದು ಕಲಿಕೆಯಿಂದ ಬಂದುದು. ವ್ಯಕ್ತಿಗಳು ತಾವು ಯಾವುದಾದರೂ ನಿರ್ದಿಷ್ಟ ಸಮೂಹಕ್ಕೆ ಸೇರಿದ್ದರ ಫಲವಾಗಿ ಅದನ್ನು ಕಲಿಯುತ್ತಾರೆ. ಅದು ಇತರರೊಡನೆ ಪಾಲ್ಗೊಂಡು ಕಲಿತ ವರ್ತನೆಯ ಭಾಗವಾಗಿರುತ್ತದೆ.

ಮತ್ತು ಅಂತಹ ಮಾತು ಕವಿಯ ಬಹುಪಾಲು ಕಾವ್ಯದ ಮೂಲಸ್ಥಾನವಾಗಿದೆ. ಕವಿಯಿಲ್ಲದೆ ಕಾವ್ಯವಿಲ್ಲ, ಪರಿಸರವಿಲ್ಲದೆ ಕವಿಯಿಲ್ಲ – ಎಂಬ ಮಾತು ಸಾಹಿತ್ಯದ ಜೀರುಗುಣಿಕೆಯಾಗಿದೆ.

'ಕವಿ ಕಾವ್ಯದ ಪ್ರಜಾಪತಿ.' ಸಮಾಜದ ಬದುಕಿನಲ್ಲಿ ಕಂಡುಂಡ ಅನುಭವ, ದಿನದಿಂದ ದಿನಕ್ಕೆ ಕ್ರಿಯಾಶೀಲವಾಗುತ್ತಾ ಸಾಹಿತ್ಯದಲ್ಲಿ ಅಳವಡಿಸುತ್ತಾನೆ. ಪರಿಸರದಲ್ಲಿ ಕಂಡ ಒಂದೊಂದು ವಸ್ತುವೂ ಕಾವ್ಯದ ರಸಾಭಾವದಲ್ಲಿ ಸಂಮಿಲನಗೊಳ್ಳುತ್ತವೆ. ಅರುಣೋದಯದ ಬೆಳಕಿನಲ್ಲಿ ಗರಿಕೆಯ ಮೇಲೆ ಮುತ್ತಿನಂತೆ ಮಿನುಗುತ್ತಿರುವ ಹಿಮದ ಮಣಿ, ಚಿನ್ನರನ್ನದ ಕಾಂತಿಯಿಂದ ಬೆಳಗುವ ಆಕಾಶ, ಹಿತವಾಗಿ ಬೀಸುವ ತಂಗಾಳಿ – ಕವಿಗೆ ಇದನ್ನೆಲ್ಲಾ ನೋಡುವುದೇ ಒಂದು ಆನಂದ. ಅನುಭವಿಸಬಲ್ಲ ಸಾಹಿತಿಗೆ ಅದರಿಂದ ಮನಃಶಾಂತಿ ದೊರಕುತ್ತದೆ. ಜೀವನದ ಕಷ್ಟನಿಷ್ಠುರಗಳು ಸಹ್ಯವಾಗುತ್ತವೆ.

ದಿನ ಬೆಳಗಾದರೆ ಹಸುರಿನ ಮೇಲೆ
ಮಿಸುನಿಯ ರನ್ನದ ಹಿಮಮಣಿ ಲೀಲೆ
ಕೊಂಬೆಯ ತೂಗುಯ್ಯಾಲೆಯಲಿ ಹಕ್ಕಿ
ಸುರಗಾನದ ಹೊಳೆ ಹರಿಸಿತು 'ಸೊಕ್ಕಿ'
ಮಲಯಾದ್ರಿಯ ಮಂದಾನಿಲ ಬಂದು
ನವೀನ ಆಶಾಪಾಶವ ತಂದು
ಬಿಗಿದನು ತನುಮನಗಳನೆಲ್ಲ!

(ಕುವೆಂಪು ಅವರ 'ಮುಕ್ತಿರಾಹು' ಎಂಬ ಕವನದಿಂದ)

ಈ ಕವನದ ಪುಳಕವನ್ನು ಕೇಳಿದಾಗ ನಮ್ಮ ಪ್ರಜ್ಞೆ ಪ್ರಕೃತಿ 'ಒಡಲಾಳ' ಕೃತಿ ಅನೇಕ ದೀನದಲಿತರ ಕಣ್ಣಪಟ್ಟಿಗೆ ಕಟ್ಟಿದ ಕೃತಿ ಸಂಸ್ಕೃತಿಯಾಗಿದೆ. ಅಲ್ಲಿ ಬದುಕನ್ನು ಕಾಣುವ ಸ್ಥಿತಿ ವಾಸ್ತವ ಬದುಕಿಗೆ ಹತ್ತಿರವಾಗಿದೆ. ಇಲ್ಲಿ ಹೇಳಲು ಬೆನ್ನತ್ತಿರುವ ಮಾತು ಇ. ಬಿ. ಟೈಲರ್ ಹೇಳಿದ ಹಾಗೆ – ''ಸಮಾಜದ ಸದಸ್ಯನಾಗಿ ಮಾನವ ಅರ್ಜಿಸಿಕೊಂಡ ಜ್ಞಾನ, ನಂಬಿಕೆ, ಕಲೆ-ನೀತಿ, ನ್ಯಾಯ, ಸಂಪ್ರದಾಯ, ಮತ್ತಿತರ ಸಾಮರ್ಥ್ಯ ಹಾಗೂ ಅಭ್ಯಾಸಗಳ ಒಟ್ಟು ಮೊತ್ತವೇ ಆಗಿದೆ.'' – ಅಂದಾಗ ವ್ಯಕ್ತಿರೂಪದಲ್ಲಿ ಒಬ್ಬ ಸಾಹಿತ್ಯ ಮನಃಸ್ಥಿತಿಯನ್ನು ರೂಢಿಸಿಕೊಂಡ ಈ ಎಲ್ಲಾ ಆಯಾಮ ಸಾಮಗ್ರಿಗಳು ತನ್ನ ಮೈಹತ್ತಿ ಕಾವ್ಯದಲ್ಲಿ ಜಿನುಗುತ್ತವೆ.

'ಸಂಸ್ಕೃತಿ' ಸಾಹಿತ್ಯದಲ್ಲಿ ಹಲವಾರು ಆಯಾಮಗಳ ರೂಢಿಕೆಗೆ ಹಾಗೂ ಪರಂಪರೆಗೆ ನಾಂದಿಯಾಗುವಂತೆ ಅನುವಾಗಬಹುದು. ಉದಾಹರಣೆಗೆ – ಅನಂತಮೂರ್ತಿಯವರು ವೈದಿಕ ಸಂಸ್ಕೃತಿ ತಡಿಯಲ್ಲಿ ಗುಣಗಾನ ಮಾಡಿದರೆ, ಕುವೆಂಪುರವರು ಪ್ರಕೃತಿಯಾಧಾರಿತ ಗುಣಗಾನವನ್ನು ಸ್ವಭಾವತಃ ಅರಿತವರಾಗಿರುತ್ತಾರೆ. ಹೀಗೆ ಸಾಹಿತ್ಯ ಮಾಧ್ಯಮದಲ್ಲಿ ಸಂಸ್ಕೃತಿಯ ಸೆಲೆಗಳು ಕೃತಿಯೊಳಗೆ ಪ್ರವೇಶಗೊಳಿಸಿ ಬದುಕಿನ ಆಯಾಮವನ್ನು ಸಾಹಿತ್ಯದಲ್ಲಿ ಪುಷ್ಟೀಕರಿಸುತ್ತವೆ.

'ಸಂಸ್ಕೃತಿ' ಒಂದರ್ಥದಲ್ಲಿ ವ್ಯತ್ಯಾತೀತ ಮತ್ತು ಭೌತಾತೀತವಾದರೂ, ಸಾಹಿತ್ಯದೊಳಗೆ – ''ಸಾಹಿತ್ಯ ಮತ್ತು ಸಂಸ್ಕೃತಿಗೆ'' ನಖಮಾಂಸ ಸಂಬಂಧವಿರುತ್ತದೆ. ಬಿ. ಮ್ಯಾಲಿನೊವ್‌ಸ್ಕಿ ಎಂಬ ಪ್ರಖ್ಯಾತ ಮಾನವಶಾಸ್ತ್ರಜ್ಞನ ಅಭಿಪ್ರಾಯದಂತೆ ಸಂಸ್ಕೃತಿ ''ಮಾನವನಿಂದಲೇ ನಿರ್ಮಿತವಾದುದು. ಅವನು ಈ ಸಾಧನೆಯ ಮುಖಾಂತರವೇ ತನ್ನ ಗೊತ್ತುಗುರಿಗಳನ್ನು ಪೂರೈಸಿಕೊಳ್ಳುತ್ತಾನೆ.'' ಹೀಗೆ ಒಬ್ಬ ಸಾಹಿತಿಯ ಜ್ಞಾನದಾಹ ಸಂಸ್ಕೃತಿಯ ಚೌಕಟ್ಟಿನಲ್ಲಿರುತ್ತದೆ. ಅಂದರೆ ಒಬ್ಬ ರಚನೆಕಾರ ಅಥವಾ ಸಾಹಿತಿ ತುರೀಯಾವಸ್ಥೆಗೆ ಸಿದ್ಧಗೊಂಡು, ಕೃತಿ ಸಂಸ್ಕೃತಿಗೆ ಬಾಹ್ಯ ಪರಿಸರದ ಕೆಲವು ಪರಿಕರಗಳನ್ನು ಸೇರಿಸುತ್ತಾ ಹೊಸ ಹೊಸ ಚಿಂತನೆಗೆ ಅನುವು ಮಾಡಿಕೊಡುತ್ತಾನೆ. ಉದಾಹರಣೆಗೆ – ತೇಜಸ್ವಿಯವರ ''ಅಬಚೂರಿನ ಪೋಸ್ಟಾಫೀಸ್'' ಕಥೆಯನ್ನು ಅಧ್ಯಯನಕ್ಕೆ ತೆಗೆದುಕೊಂಡಾಗ, ಒಂದು ಊರಿಗೆ 'ಪೋಸ್ಟಾಫೀಸ್' ಬಂದಾಗ ಆನಂದವಾದರೂ, ಹೆಚ್ಚು ಪಟ್ಟು ನ್ಯೂನತೆಗಳೇ ಇರುತ್ತವೆ. ಹಾಗೆಯೇ ಅಬಚೂರಿಗೆ ಪೋಸ್ಟಾಫೀಸ್ ಬರುವಿಕೆಯಿಂದ ಆದ ಕೆಲವು ಅಲ್ಲೋಲಕಲ್ಲೋಲಗಳಾದರೂ, ಬದಲಾವಣೆಗೆ ಸಾಧ್ಯತೆಯಿದೆ. ಅಂದರೆ ಸಾಹಿತ್ಯದೊಳಗೆ ಮತ್ತೇನೊ ಬದಲಾವಣೆಗೆ ಅವಕಾಶಗಳು ಒದಗಿಬರುತ್ತವೆ. ಹಾಗೆಯೇ ನವೋದಯದಲ್ಲಿ ಕಂಡ ಕನಸುಗಳು ದಲಿತ ಸಾಹಿತ್ಯದಲ್ಲಿ ಮಾಸಲಾಗಬಹುದು, ದಲಿತದಲ್ಲಿ ಕಂಡದ್ದು ಬಂಡಾಯದಲ್ಲಿ ಮತ್ತಷ್ಟು ಹಳಸಲಾಗಬಹುದು. ಅಂದರೆ ಈ ಎಲ್ಲಾ ಸಾಹಿತಿಗಳು ರಚಿಸುವ ಸಾಹಿತ್ಯ ಹಳಸಲು-ಮಾಸಲು ಎಂದು ಹೇಳಲು ಹೊರಟಿಲ್ಲ. ಆಯಾ ಸಂದರ್ಭದ ಪರಿಸರ ಸಂಸ್ಕೃತಿಯಲ್ಲಿ ಬದಲಾವಣೆಯಿದೆ. ಅಂದರೆ ವ್ಯಕ್ತಿ-ವ್ಯಕ್ತಿಯಿಂದ

ಪ್ರಭಾವಿತವಾದ ಸಂಸ್ಕೃತಿಯಲ್ಲೂ ಚಲನೆಯಿರಬಹುದು. ಒಟ್ಟಾರೆ 'ಸಂಸ್ಕೃತಿ' ಸಾಹಿತ್ಯದಲ್ಲಿ ವಿಸ್ತಾರಗೊಂಡು, ಕೃತಿಯಿಂದ ಕೃತಿಗೆ ಕಾಲಘಟ್ಟದಲ್ಲಿ ವಿಶೇಷವಾದ ಹೊಂದಾಣಿಕೆಯಿಂದ ಒಂದೆಯಾಗಿ ಉಳಿದಿದೆ. ಹೀಗೆ ಬಳಸುವ ವಸ್ತುಸ್ಥಿತಿ ಒಂದೇ ಆದರೂ ಹೊಂದಾಣಿಕೆಯಲ್ಲಿ ಕೆಲವು ವ್ಯತ್ಯಾಸಗಳಿರುತ್ತವೆ. ಉದಾಹರಣೆಗೆ – ಲಂಕೇಶರ 'ಸಂಕ್ರಾಂತಿ', ಶಿವಪ್ರಕಾಶರ 'ಮಹಾಚೈತ್ರ', ಕಾರ್ನಾಡರ 'ತಲೆದಂಡ' – ಈ ಮೂರು ನಾಟಕಗಳು ಐತಿಹಾಸಿಕ ನೆಲೆಯಿಂದ ಹೊರಟಿದ್ದು ಕೇಂದ್ರ ವಸ್ತು ಒಂದೇ ಆಗಿದೆ; ಆದರೆ ಅರ್ಥೈಸುವ ವಿಚಾರ ಮಾದರಿ ಬೇರೆಯಾಗಿದೆ. ಹೀಗೆ ಒಬ್ಬೊಬ್ಬರ ದೃಷ್ಟಿಯಲ್ಲಿ ಕಂಡುಂಡ ಅನುಭವಗಳು ಬೇರೆ ಬೇರೆಯಾದರೂ ಬೆಸೆದ ತೌಲನಿಕ ನೋಟ ಒಂದೇ ಆಗಿದೆ. ಅಂದರೆ ಈ ಮೂವರು ನಾಟಕಕಾರರ ಮೂಲ ಸಂಸ್ಕೃತಿ ಒಂದೇ ಆಗಿದ್ದು, ಜೀರ್ಣಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಬದಲಾವಣೆಯಿದೆ.

ಒಬ್ಬ ರಚನೆಕಾರನಿಗೆ ಸಾಂಸ್ಕೃತಿಕ ಅಂಶಗಳು ತನ್ನ ಪರಿಸರದಿಂದ ಲಭಿಸುವಂಥದ್ದು ಅಥವಾ ಕಲಿಕೆಯಿಂದ ಪ್ರವೇಶಿಸಬಹುದು. ದಿನದಲ್ಲಿ ಸಂಸ್ಕೃತಿಯ ಪರಿವರ್ತನೆ ಬಾಹ್ಯದಲ್ಲಾಗಬಹುದು ಅಥವಾ ಆಂತರಿಕವಾಗಿರಬಹುದು. ಕಾವ್ಯ ರಚನೆಗೊಂಡ ಸಂದರ್ಭದಲ್ಲಿ ರಚನಾಕಾರ ತನ್ನ ಮೂಲ ಸಮಾಜದ ಸಂಸ್ಕೃತಿಯನ್ನು ಬಳಸಿಕೊಳ್ಳುತ್ತಾನೆ: ಹಾಗೇಯೆ 'ಸಂಸ್ಕೃತಿ'ಯು ಸಾಹಿತ್ಯದೊಂದಿಗೆ ಸೇರಿ ಹಲವು ರಂಗದಲ್ಲಿ ಸಂಸ್ಕೃತೀಕರಣಗೊಳ್ಳುತ್ತದೆ. ಹಲವರು ಕೆಲವರು ವಿದ್ವಾಂಸರ ಉಪನ್ಯಾಸ ಹಾಗೂ ಭಾಷಣ ನಡೆವಳಿಕೆಯಿಂದ ಪ್ರಭಾವಿತರಾಗಿದ್ದರೆ, ಬರವಣಿಗೆಯಲ್ಲಿ ಕೆ. ಎಸ್. ನರಸಿಂಹಸ್ವಾಮಿ, ಅಲ್ಲದೇ ಬೇಂದ್ರೆಯಂತಹವರ ಪ್ರಣಯಗೀತೆಗಳ ರಚನೆಯ ಸ್ಫೂರ್ತಿಯನ್ನು ಕೆಲವರು ದೊರಕಿಸಿಕೊಳ್ಳಬಹುದು. ಹೀಗಾಗಿ ಪ್ರಾರಂಭದ ಒಬ್ಬ ರಚನೆಕಾರನಲ್ಲಿ ರಚನೆಗೊಂಡ ಸಾಹಿತ್ಯ ಪ್ರೀತಿ-ಪ್ರೇಮದಿಂದ ಸ್ನಾನ ಮಾಡಿ ಹೊರಟಂತಿರುತ್ತದೆಯಾದರೂ, ಮುಂದಿನ ಕೆಲವು ದಶಕಗಳಲ್ಲಿ ಬದಲಾವಣೆ ಮತ್ತು ಅಂದಿನ ಸಾಂಸ್ಕೃತಿಕ ಸ್ಥಿತಿಗತಿಗಳಿಗೆ ಬದ್ಧನಾಗಿರುವುದು ವಾಸ್ತವ ಸತ್ಯವಾಗಿದೆ ಎನ್ನಿಸುತ್ತದೆ.

ವ್ಯಕ್ತಿಗೆ ನಿಜವಾದ 'ಸಂಸ್ಕೃತಿ' ಜೀವನದ ಕಷ್ಟನಿಷ್ಠುರಗಳನ್ನು ಪರಿಪಕ್ವವಾದ ಮನಸ್ಸಿನಿಂದ ಪರಿಶೀಲಿಸಲು ಕಲಿತಾಗ ಮಾತ್ರ ಸಾಧ್ಯವಿರುತ್ತದೆ. ನೋವನ್ನು ನೋಡಲಾರದೆ ಕಣ್ಣುಮುಚ್ಚಿದರೆ ನಮಗೆ ದೊರಕುವುದು ತಾತ್ಕಾಲಿಕವಾದ ಬಿಡುಗಡೆ ಮಾತ್ರ. ಆ ನೋವನ್ನು ಅನುಭವಿಸಿ ಜೀರ್ಣಿಸಿಕೊಂಡು ಅದನ್ನು ನಮ್ಮ ಸಂಸ್ಕೃತಿಯ ಅಂಗವಾಗಿ ಮಾಡಿಕೊಳ್ಳಬೇಕು. ಮನಸ್ಸಿನ ಮತ್ತು ಹೃದಯದ ಪರಿಪಾಕಕ್ಕೆ ಆದರಿಂದಲೂ ಆಸರೆ ಪಡೆಯಬೇಕು. ಏಕೆಂದರೆ ಮಾನವನಾಗಿ ಹುಟ್ಟಿದವನಿಗೆ ನೋವು ತಪ್ಪಿದ್ದಲ್ಲ.

ನಾವು ಸಮಾಜದಲ್ಲಿ ವ್ಯಕ್ತಿಗಳನ್ನು ನೋಡುತ್ತೇವೆ ಮತ್ತು ಅವರೊಡನೆ ಹಲವಾರು ವಿಧಗಳಲ್ಲಿ ವ್ಯವಹರಿಸುತ್ತೇವೆ, ಪ್ರೀತಿಸುತ್ತೇವೆ, ಪ್ರೇಮಿಸುತ್ತೇವೆ. ಆದರೂ ಕೊನೆಗೆ ಅವನೆಂಥ ಅದ್ಭುತವ್ಯಕ್ತಿ ಎನ್ನುವುದು ನಮಗೆ ಅಷ್ಟಾಗಿ ಅರಿವಾಗುವುದಿಲ್ಲ.

ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ, ಒಂದು ಸಂದರ್ಭದಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿ ಎರಡು ಪರಸ್ಪರ ಪೂರಕವಾದವುವೆಂದು ಪ್ರಾಜ್ಞರು ಭಾವಿಸುತ್ತಾರೆ. ಇವು ಬೇರ್ಪಡೆಯಾಗುವ ಸಂದರ್ಭಗಳು ಸಂಭವಿಸಬಹುದು. ಅಂತಹ ಗಳಿಗೆಯಲ್ಲಿ ಕವಿಯ ರಚನೆಗಳು ಪ್ರಬುದ್ಧ ನೆಲೆಗಟ್ಟನ್ನು ತಲುಪಲು ಸಾಧ್ಯವಿಲ್ಲ. ಇಲ್ಲಿ ಒಬ್ಬ ಸಾಮಾಜಿಕ ಅಥವಾ ವ್ಯಕ್ತಿ ಒಂದು ವರ್ಗ ಸಂಸ್ಕೃತಿಯ ಮನೆತನದಲ್ಲಿ ಜನಿಸಿ ಶ್ರೀಮಂತ ಸಾಹಿತ್ಯ ರಚಿಸಬಹುದು. ಅಂದರೆ ಅವನು ವಾಸಿಸುವ ಪರಿಸರ ಕೆಳವರ್ಗವಾದರೂ, ಅವನಿಂದ ರಚನೆಗೊಂಡ ಕೃತಿ ಪರಿಸರ ಶ್ರೀಮಂತವಾದದ್ದು. ಅಲ್ಲಿ ಪರಿವರ್ತನ ಕ್ರಿಯೆ ಜಾಗ್ರತವಾಗುತ್ತ ಕೃತಿಯೊಳಗೆ ಬೇರೊಂದು ಸಂಸ್ಕೃತಿ ಸೇರುತ್ತದೆ. ಆದರೆ ವಾಸ್ತವದಲ್ಲಿ ಇಂತಹ ವಲಸೆ ಸಂಸ್ಕೃತಿಗೆ ಮಾರುಹೋಗುವುದು ತುಂಬಾ ವಿರಳ. ಇಂದು ಸಂಸ್ಕೃತಿಯಿಲ್ಲದ ಸಾಹಿತ್ಯವಿರಬಹುದು, ಆದರೆ 'ಸಂಸ್ಕೃತಿ-ಸಾಹಿತ್ಯಗಳು' ಒಂದೇ ನಿಟ್ಟಿನಿಂದ ಹೊರಟ ಪರಸ್ಪರ ವಿಚಾರಗಳಾಗಿವೆ.

ಪು. ಮು. ಗಂಗಾಧರಯ್ಯ
ಕನ್ನಡ ಉಪನ್ಯಾಸಕರು, ಯು. ಪಿ. ಪ್ರಥಮ ದರ್ಜೆ ಕಾಲೇಜು
ಕ್ಯಾತ್ಸಂದ್ರ, ತುಮಕೂರು - ೫೭೨ ೧೦೪

## ಪ್ರಗತಿಪರ ವಕೀಲ ಸಿ. ಬಿ. ಮೋಟಯ್ಯ



**ಬೆಂ**ಗಳೂರಿನ ಸುಪ್ರಸಿದ್ಧ ವಕೀಲರೂ, ಪ್ರಗತಿಪರ ಚಿಂತಕರೂ, ಮಾರ್ಕ್ಸ್‌ವಾದಿಯೂ ಆಗಿದ್ದ ಶ್ರೀ. ಸಿ. ಬಿ. ಮೋಟಯ್ಯ ಇವರು ತಮ್ಮ ೮೨ನೇ ವಯಸ್ಸಿನಲ್ಲಿ ನವೆಂಬರ್ ೩೦, ೨೦೦೩ ರಂದು ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. 'ಹೊಸತು' ಪ್ರಾರಂಭವಾದಾಗಿನಿಂದಲೂ ಅದರ ಓದುಗರೂ, ಹಿತೈಷಿಯೂ ಆಗಿದ್ದ ಸನ್ಮಿತ್ರರೊಬ್ಬರನ್ನು ನಾವು ಕಳೆದುಕೊಂಡಂತಾಗಿದೆ.

ಕೊಡಗಿನವರಾದ ಸಂಗಾತಿ ಮೋಟಯ್ಯ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಸಕ್ರಿಯ ರಾಜಕೀಯ ಕಾರ್ಯಕರ್ತರಾಗಿದ್ದರು. ೧೯೨೨ರಲ್ಲಿ ಜನಿಸಿದ ಮೋಟಯ್ಯನವರ ವಿದ್ಯಾಭ್ಯಾಸವೆಲ್ಲ ಮೈಸೂರು, ಮದರಾಸುಗಳಲ್ಲಿ. ಅಂದಿನ ಕೊಡಗಿನ ಎಲ್ಲ ವಿದ್ಯಾರ್ಥಿಗಳಂತೆಯೇ ಅವರೂ ಮದರಾಸು ಪ್ರಾಂತ್ಯದ ಮದನಪಲ್ಲಿ, ಮದರಾಸು ನಗರಗಳಲ್ಲಿ ಶಿಕ್ಷಣ ಪಡೆದರು. ಅರ್ಥಶಾಸ್ತ್ರದಲ್ಲಿ ಎಂ. ಎ. ಪದವಿ ಪಡೆದುಕೊಂಡ ಅವರು ನ್ಯಾಯಶಾಸ್ತ್ರದಲ್ಲೂ ಪದವೀಧರರಾದರು.

ಮದರಾಸು ಕ್ರಿಶ್ಚಿಯನ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವಾಗಲೇ ಅವರು ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್ನಿನ ಅಂಗ ಸಂಸ್ಥೆಯಾಗಿದ್ದ ಮದರಾಸು ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿದ್ದು ವಿದ್ಯಾರ್ಥಿ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಮಾರ್ಕ್ಸ್‌ವಾದದಿಂದ ಆಕರ್ಷಿತರಾದ ಮೋಟಯ್ಯ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರಾದರು. ಮದರಾಸಿನಲ್ಲಿ ಕಮ್ಯುನಿಸ್ಟ್ ಪಾರ್ಟಿಯ ಮೇಲೆ ಸರಕಾರ ಗದಾಪ್ರಹಾರ ಮಾಡಿದಾಗ ಮೋಟಯ್ಯನವರ ಮೇಲೂ ಬಂಧನಕ್ಕಾಗಿ ವಾರೆಂಟ್ ಇತ್ತು ೧೯೪೮ರಲ್ಲಿ. ಆ ಸಂದರ್ಭದಲ್ಲಿ ತಲೆಮರೆಯಾಗಿ ಬೆಂಗಳೂರಿಗೆ ಆಗಮಿಸಿದ ಮೋಟಯ್ಯ ಕರ್ನಾಟಕದಲ್ಲಿ ಕಮ್ಯುನಿಸ್ಟ್ ಪಾರ್ಟಿಯ ಕೆಲಸ ಕಾರ್ಯಗಳಲ್ಲಿ ತೊಡಗಿಕೊಂಡರು. ಭೂಗತರಾಗಿದ್ದ ಅವರು ವಿದ್ಯಾರ್ಥಿ ಸಂಘಟನೆಗೆ ಮಾರ್ಗದರ್ಶಕರಾಗಿದ್ದರು. ಮಾರ್ಕ್ಸ್‌ವಾದವನ್ನು ಆಳವಾಗಿ ಅಧ್ಯಯನ ಮಾಡಿದ್ದ ಅವರು ಪಾರ್ಟಿ ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಿ ಕಾರ್ಯಕರ್ತರಿಗಾಗಿ ತರಗತಿಗಳನ್ನು ನಡೆಸುತ್ತಿದ್ದರು. ಭೂಗತರಾಗಿದ್ದಾಗ ಅವರು ಶಿಸ್ತು ಸಂಯಮಗಳಿಗೆ ಬದ್ಧರಾಗಿದ್ದರು.

೧೯೫೦ರ ಸುಮಾರಿನಲ್ಲಿ ವಕೀಲಿ ವೃತ್ತಿಯನ್ನು ಕೈಗೊಂಡ ಮೋಟಯ್ಯನವರು ಅತಿ ಶೀಘ್ರದಲ್ಲಿಯೇ ಉತ್ತಮ ವಕೀಲರಾಗಿ ಹೆಸರು ಗಳಿಸಿದರು. ಬೆಂಗಳೂರಿನ ಬಿ. ಎಂ. ಎಸ್. ಲಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಅವರು ನ್ಯಾಯಶಾಸ್ತ್ರದಲ್ಲಿ ಒಳ್ಳೆಯ ಉಪನ್ಯಾಸಕರೆಂದು ಹೆಸರು ಗಳಿಸಿದ್ದರು.

ಭಾರತ-ಸೋವಿಯತ್ ಸಾಂಸ್ಕೃತಿಕ ಸಂಘದ ಉಪಾಧ್ಯಕ್ಷರಾಗಿ ಸ್ನೇಹವರ್ಧನೆಗೆ ಸಾಕಷ್ಟು ಸಹಾಯಕರಾಗಿದ್ದರು.

ಕರ್ನಾಟಕದ ಹಿರಿಯ ಕಮ್ಯುನಿಸ್ಟ್ ಧುರೀಣ ದಿವಂಗತ ಕಾಮ್ರೇಡ್ ಸಿ. ಬಿ. ಮೊಣ್ಣಯ್ಯನವರ ಸೋದರರಾಗಿದ್ದ ಮೋಟಯ್ಯ ದೀರ್ಘ ಕಾಲದಿಂದ ಅಸ್ವಸ್ಥರಾಗಿದ್ದರು. ಆದರೂ ಅವರು ಪುರೋಗಾಮಿ ಚಟುವಟಿಕೆಗಳಲ್ಲಿ ಆಸಕ್ತಿ ತಳೆದಿದ್ದರು.

'ಹೊಸತು' ಅವರಿಗೆ ತನ್ನ ಶ್ರದ್ಧಾಂಜಲಿ ಅರ್ಪಿಸುತ್ತದೆ. ದಿವಂಗತರ ಕುಟುಂಬಕ್ಕೆ ಸಂತಾಪ ವ್ಯಕ್ತಗೊಳಿಸುತ್ತದೆ. ■

ವಿಜಯಾ ಶ್ರೀಧರ್



# ಅಜ್ಜನಿಗೆ ಗದ್ದೆ ಇತ್ತು

ಊರಿನಿಂದ ಅಣ್ಣನಿಂದ ಫೋನ್ ಬಂದಿತ್ತು. ಮಾಮೂಲಿ ಕ್ಷೇಮ ಸಮಾಚಾರದ ನಂತರ ಅಣ್ಣ ಭಾರವಾದ ಧ್ವನಿಯಲ್ಲಿ ನುಡಿದಿದ್ದ. ''ಅಜ್ಜನ ಗದ್ದೆ ಮಾರಾಟವಾಯ್ತು'' ಅಂತ. ''ಹೋಗಲಿ ಬಿಡು'' ಅಂತ ಸಹಜವಾಗಿ ಹೇಳಿದ್ದೆ. ಆದರೆ ರಾತ್ರಿ ಮಲಗಿದಾಗ ತಟ್ಟನೆ ಅಜ್ಜನ ಮನೆ ಗದ್ದೆ ನೆನಪಾಗಿಬಿಟ್ಟಿತ್ತು. ಅದರ ಜೊತೆಗಿನ ನಮ್ಮ ಸಂಬಂಧವೆಲ್ಲ ಕಣ್ಣ ಮುಂದೆ ಸುಳಿಯುತ್ತಿದ್ದಂತೆ ಅಣ್ಣನ ಭಾರವಾದ ಧ್ವನಿಯ ಹಿಂದಿನ ನೋವು ನನ್ನನ್ನೂ ತಟ್ಟಿತ್ತು.

ನಿಜ! ಆ ಗದ್ದೆ ಮಾರಾಟವಾಗದೇ ಉಳಿದಿದ್ದರೂ ಖಂಡಿತವಾಗಿ ನನಗಂತೂ ಸಿಗುತ್ತಿರಲಿಲ್ಲ. ಹಾಗೆ ನೋಡಿದರೆ ಅಜ್ಜನ ಆಸ್ತಿಯ ಮೇಲೆ ನನಗೆ ಯಾವ ವ್ಯಾಮೋಹವೂ ಇರಲಿಲ್ಲ. ಆದರೆ ತುಂಬ ಹಸಿದಾಗ ಆ ಗದ್ದೆ ನೀಡಿದ ತುತ್ತು ಅನ್ನದ ಋಣ ನಮ್ಮ ಅಮ್ಮನ ಎಲ್ಲ ಮಕ್ಕಳ ಮೇಲೂ ಇತ್ತು. ಆ ಗದ್ದೆ ನನ್ನ ಭಾವಸಾಮ್ರಾಜ್ಯದ ಬಹುಭಾಗವನ್ನು ಆಕ್ರಮಿಸಿತ್ತು. ಅದಕ್ಕಾಗಿಯೇ ಈ ನೋವು, ಈ ವಿಷಾದ!

ಮಲೆನಾಡಿನ ಶಿರ್ಶಿಯ ಹತ್ತಿರದ ಹೂವಳ್ಳಿಯಲ್ಲಿ ವಾಸವಾಗಿದ್ದ ಅಜ್ಜನಿಗೆ ಆತನೇ ಬೆಳೆಸಿದ ೫ ಎಕರೆ ಅಡಿಕೆ, ಬಾಳೆ, ಮೆಣಸು, ಏಲಕ್ಕಿ ತೋಟ, ಗೇರು, ಮಾವು, ಕಾಡುಮರಗಳಿಂದ ತುಂಬಿದ ದೊಡ್ಡ ಸೊಪ್ಪಿನ ಬೆಟ್ಟ ಇತ್ತು. ಮನೆಯ ಹಿಂದುಗಡೆ ಒಂದು ಕಿ.ಮೀ. ದೂರದಲ್ಲಿ ನಾಲ್ಕು ಎಕರೆ ಗದ್ದೆ ಇತ್ತು. ಅದು ಭತ್ತ ಬೆಳೆಯುವ ಗದ್ದೆ. ಅದರ ಪಕ್ಕದಲ್ಲಿಯೇ ಅಜ್ಜನ ದಾಯಾದಿಗಳ ಗದ್ದೆ, ಊರಿನ ಭಟ್ಟರ ಗದ್ದೆ ಹೀಗೆ ಸಾಲು-ಸಾಲು ಗದ್ದೆಗಳು ಇದ್ದವು.

ಅಜ್ಜನ ಅಡಿಕೆ ತೋಟದಲ್ಲಿ, ಗೇರು, ಮಾವು ಬೆಟ್ಟದಲ್ಲಿ ನಾವು ತುಂಬ ಸಮಯ ಕಳೆಯುತ್ತಿದ್ದೆವು. ಆದರೆ ಅಜ್ಜನ ಗದ್ದೆ ಮನೆಯಿಂದ ತುಂಬಾ ದೂರವಿದ್ದುದರಿಂದ ಹದಿನೈದು ದಿನಗಳಿಗೊಮ್ಮೆ ಹೋಗುತ್ತಿದ್ದೆವು. ಗದ್ದೆಗೆ ಹೋಗುವುದೆಂದರೆ ತುಂಬ ಸಂಭ್ರಮದ ವಿಷಯವಾಗಿತ್ತು. ಬೆಟ್ಟದ ಕಾಲುದಾರಿಯನ್ನು ಬಳಸಿ ಹೋದರೆ ಗದ್ದೆಗೆ ತಾಗಿ ದೊಡ್ಡ ಹೊಳೆಯೊಂದು ಹರಿಯುತ್ತಿತ್ತು. ಅಣ್ಣ, ಅಕ್ಕ ಅಥವಾ ಮಾವ ಇಲ್ಲವೇ ಆಳುಗಳು ನನ್ನನ್ನು, ತಮ್ಮನನ್ನು ಹೊಳೆ ದಾಟಿಸುತ್ತಿದ್ದರು. ದೊಡ್ಡವರ ಸೊಂಟದವರೆಗೆ ನೀರು ಬರುವಷ್ಟು ಆಳವಾಗಿತ್ತು ಈ ಹೊಳೆ.

ಮಳೆ ಚೆನ್ನಾಗಿ ಆದಾಗ ಹಚ್ಚ ಹಸಿರಿನಿಂದ ಕಂಗೊಳಿಸಿದರೆ ಮಳೆ ಕಡಿಮೆ ಆದ ಹಾಗೆ ಒಣಗುತ್ತಿತ್ತು. ಗದ್ದೆಯ ಮೇಲುಗಡೆ ಇರುವ ಕಿರುತೊರೆಯಿಂದ ಗದ್ದೆಗಳಿಗೆ ನೀರು ಹರಿಸಬೇಕಾಗಿತ್ತು. ಸದಾ ಈ ನೀರಿಗಾಗಿ ಅಜ್ಜನ ಆಳುಗಳಿಗೂ, ಅಜ್ಜನ ದಾಯಾದಿಗಳಿಗೂ ಜಗಳವಾಗುತ್ತಿತ್ತು. ಅಜ್ಜನ ದಾಯಾದಿಗಳು ಒಡ್ಡು ಹಾಕಿ ಪೂರ್ತಿ ನೀರನ್ನು ತಮ್ಮ ಗದ್ದೆಗೆ ಹಾಯಿಸಿಕೊಳ್ಳುತ್ತಿದ್ದರು. ಒಡ್ಡು ಒಡೆದು, ನೀರನ್ನು ಅಜ್ಜನ ಗದ್ದೆಗೆ ಬಿಡಲು ಕೇಳಿದರು ಜಗಳ ಪ್ರಾರಂಭವಾಗುತ್ತಿತ್ತು. ಕಾವೇರಿ ನೀರಿಗಾಗಿ ಕರ್ನಾಟಕ-ತಮಿಳುನಾಡಿನ ನಡುವೆ ಗಲಾಟೆ ಪ್ರಾರಂಭವಾದಾಗಲೆಲ್ಲಾ ಬಾಲ್ಯದ ಈ ಘಟನೆ ನೆನಪಾಗುತ್ತದೆ. ಜಗಳ ವಿಕೋಪಕ್ಕೆ ಹೋಗಿ ಕೋರ್ಟ್ ಕಟ್ಟೆ ಹತ್ತಿದ್ದು ಇತ್ತು. ಗದ್ದೆ ಯಾರಿಗೆ ಸೇರಿರಲಿ, ಹಳ್ಳ-ಹೊಳೆ ಎಲ್ಲರಿಗೂ ಸೇರಿದ್ದು ಎಂದು ತೀರ್ಪು ಬಂದು ತಾತ್ಕಾಲಿಕವಾಗಿ ಜಗಳ ಶಮನವಾದರೂ, ನೀರಿಗಾಗಿ ಕಿರುಕುಳ ತಪ್ಪಿರಲಿಲ್ಲ.

ಗದ್ದೆಗೆ ನೀರಿನ ತೊಂದರೆ ಜೊತೆಗೆ ಬೀಡಾಡಿ ದನಗಳು, ಕಾಡು ಹಂದಿಗಳ ಕಾಟವೂ ಇತ್ತು. ಹಾಗಾಗಿ ೩-೪ ತಿಂಗಳು ರಾತ್ರಿ ಗದ್ದೆ ಕಾಯಬೇಕಾಗುತ್ತಿತ್ತು. ಮಾಳ ಹಾಕಲಾಗುತ್ತಿತ್ತು. ಅಂದರೆ ಅಡಿಕೆ ದಬ್ಬೆ, ಕಂಬ, ಸೋಗೆಗಳಿಂದ ಕಟ್ಟಿದ ಅಟ್ಟಣಿಗೆ ಅದು. ಕೆಳಗಡೆ ಕಡ್ಡಿ-ಕಸಗಳಿಂದ ಹೊಡಚಲು ಹಾಕಿಕೊಂಡು ಬೆಂಕಿ ಕಾಯಿಸುತ್ತಾ, ಮಧ್ಯರಾತ್ರಿಯ ಮೇಲೆ ಅಟ್ಟಣಿಗೆ ಹತ್ತಿ ಮಲಗಬೇಕಾಗುತ್ತಿತ್ತು. ಹಂದಿ ಬಂದಿದೆ ಅಂತ ಗೊತ್ತಾದರೆ ಖಾಲಿ ತಗಡಿನ ಡಬ್ಬಿ ಬಡಿದರೆ ಹಂದಿ ಓಡಿಹೋಗುತ್ತಿತ್ತು. ಕೆಲಬಾರಿ ಕಾಯುವವರಿಗೆ ನಿದ್ರೆ ಬಂದಾಗ ಹಂದಿ ಗದ್ದೆ ನುಗ್ಗಿ ಬೆಳೆ ಹಾಳು ಮಾಡುತ್ತಿತ್ತು. ಹೆಚ್ಚಾಗಿ ಗದ್ದೆ ಕಾಯಲು, ಸಂಬಂಧದಲ್ಲಿ ನಮಗೆ ಮಾವನಾಗಬೇಕಿದ್ದ ಕೃಷ್ಣ ಮತ್ತು ಮುಕ್ರಿ ಆಳುಗಳಾದ ಬೀರ, ತಿಮ್ಮ, ಗಣಪ ಮುಂತಾದವರಲ್ಲಿ ಒಬ್ಬರು ಹೋಗುತ್ತಿದ್ದರು.

ಕೃಷ್ಣ ಮತ್ತು ಆಳು ರಾತ್ರಿ ಬೇಗ ಊಟ ಮಾಡಿ ಗದ್ದೆ ಕಾಯಲು ಹೋಗುವ ತಯಾರಿ ಮಜವಾಗಿರುತ್ತಿತ್ತು. ಉದ್ದದ ಬ್ಯಾಟರಿ, ತಿನ್ನಲು ಖಾರಾ ಸೇವು, ಮಂಡಕ್ಕಿ, ಸಂದರ್ಭ ಬಂದರೆ ಬೇಕೆಂದು ಸೂಡಿ, ಬೆಂಕಿಪೆಟ್ಟಿಗೆ, ಕತ್ತಿ-ಕಂಬಳಿ – ಹೀಗೆ ಸರ್ವಾಲಂಕಾರಭೂಷಿತರಾಗಿ ಮಾಳದಲ್ಲಿ ಮಲಗಲು ಹೋಗುತ್ತಿದ್ದರು. ''ಮಲಗಲು'' ಎಂದರೆ ಯಾಕೆಂದರೆ, ಗದ್ದೆಯ ರಾತ್ರಿ ಚಳಿಗೆ ಹೊಡಚಲು ಬೆಂಕಿಯ ಕಾವಿನಲ್ಲಿ ಇವರಿಗೆ ಚೆನ್ನಾಗಿ ನಿದ್ರೆ ಬರುತ್ತಿದ್ದರಿಂದ ಗದ್ದೆ ಬೆಳೆ ಹಂದಿಯಿಂದ ಹಾಳಾಗುತ್ತಿದ್ದುದೇ ಹೆಚ್ಚು.

ಮಳೆಗಾಲ ಪ್ರಾರಂಭದಲ್ಲಿ ಬಿತ್ತನೆಯಾದ ಭತ್ತ ದೀಪಾವಳಿ ವೇಳೆಗೆ ತೆನೆ ತುಂಬಿ ನಿಂತಿರುತ್ತಿತ್ತು. ಕೊಯ್ಲು ಮುಗಿದ ಅಜ್ಜನ ಮನೆ ಅಂಗಳದಲ್ಲಿ ಭತ್ತದ ಚೀಲದ ರಾಶಿ ಬೀಳುತ್ತಿತ್ತು. ಹುಲ್ಲನ್ನು ಬೆಟ್ಟದ ಮೇಲಿನ ಒಂದು ಸಮತಟ್ಟಾದ ಜಾಗದಲ್ಲಿ ದೊಡ್ಡದಾಗಿ ರಾಶಿ ಹಾಕುತ್ತಿದ್ದರು. ಈ ಭತ್ತದ ಹುಲ್ಲಿನ ಬಣವೆ ಮಕ್ಕಳಿಗೆ ಆಕರ್ಷಕ ತಾಣವಾಗಿರುತ್ತಿತ್ತು.

ಅಜ್ಜ ಊರಿನಲ್ಲಿ ಇರದ ಸಮಯ ನಾವು ನಾಲ್ಕು ಮೊಮ್ಮಕ್ಕಳು, ಅಜ್ಜನ ತಮ್ಮನ ಮಕ್ಕಳು, ಆಳು ಬೀರನ ಮಗ, ನಾಯಿ ಟೈಗರ್ ಎಲ್ಲಾ ಸೇರಿ ಈ ಎತ್ತರ ಹುಲ್ಲಿನ ಬಣವೆ ಸುತ್ತಲೂ ಮೊದಲು ಆಡುತ್ತಿದ್ದೆವು. ಕಣ್ಣಾ ಮುಚ್ಚಾಲೆ ಆಟದಲ್ಲಿ ಬಣವೆಯ ಸಂದು ನಿಜವಾಗಿ ಒಳ್ಳೇ ಅಡಗುತಾಣವಾಗುತ್ತಿತ್ತು. ನಂತರ ನಿಧಾನವಾಗಿ ಒಬ್ಬೊಬ್ಬರಾಗಿ ಬಣವೆ ಏರುತ್ತಿದ್ದೆವು. ಮೈ ಮರೆತು ಹಾರಿ ಕುಣಿದು ಕುಪ್ಪಳಿಸತೊಡಗಿದರೆ ಸಮಯದ ಪರಿವೆಯೇ ಇರುತ್ತಿರಲಿಲ್ಲ. ಗೋಪುರವಾಗಿದ್ದ ಬಣವೆ ನೆಲಸಮವಾದ ಮೇಲೆ ಮನೆಗೆ ಮರಳುತ್ತಿದ್ದೆವು. ರಾತ್ರಿ ಮನೆಗೆ ಮರಳಿದ ಅಜ್ಜ, ಮುಂಜಾನೆ ಬಣವೆ ಗತಿ ಕಂಡು ''ಯಾರು ಹೀಗೆ ಮಾಡಿದ್ದು?'' ಎಂದು ಗದರಿದರೆ ಯಾರಿಂದಲೂ ಉತ್ತರ ಬರುತ್ತಿರಲಿಲ್ಲ. ಆದರೆ ಮಧ್ಯಾಹ್ನದ ಹೊತ್ತಿಗೆ ಬಿಸಿ ನೀರು ಸ್ನಾನ ಮಾಡುವಾಗ ''ಉರಿ, ಉರಿ'' ಎಂದು ಮಕ್ಕಳು ಕೂಗುವಾಗ ಅಜ್ಜ-ಅಜ್ಜಿಗೆ ಅಪರಾಧಿಗಳು ಸಿಕ್ಕು ಬೀಳುತ್ತಿದ್ದರು. ಹೊಸ ಹುಲ್ಲು ಎಳೆ ಚರ್ಮವನ್ನು ಕೊರೆದದ್ದು ಬಿಸಿನೀರು ಬಿದ್ದಾಗಲೇ ನಮಗೆ ಅರಿವಾಗುತ್ತಿದ್ದುದು.

ದೀಪಾವಳಿ ದಿನ ಗದ್ದೆ ಬಳಿ ಹುಲಿಕಲ್ಲಿಗೆ ಪೂಜೆ ಮಾಡಲು ಕೃಷ್ಣ ಹಣ್ಣು-ಕಾಯಿ ಬುಟ್ಟಿ ಹಿಡಿದು ಹೊರಟರೆ



ಅವನ ಹಿಂದೆ ನಮ್ಮ ಪಟಾಲಂ. ಹುಲಿಕಲ್ಲು ಎಂದರೆ ಏನು? ಅದಕ್ಕೆ ಯಾಕೆ ಪೂಜೆ? ಹೀಗೆ ನೂರೆಂಟು ಪ್ರಶ್ನೆಗಳು. ಹುಲಿದೇವರು ಗದ್ದೆ ಕಾಯುವವನಂತೆ. ಗದ್ದೆಗೆ ಬರದಂತೆ ಹೋರಿ, ದನ, ಹಂದಿ, ನರಿಗಳನ್ನು ತಡೆಯುತ್ತಾನಂತೆ. ಹಾಗಾಗಿ ಅವನನ್ನು ವರ್ಷದಲ್ಲಿ ಒಂದು ಬಾರಿ ಪೂಜಿಸಬೇಕಂತೆ. ನಮ್ಮ ಕುತೂಹಲಕ್ಕೆ ತಣ್ಣೀರು ಎರಚಿದಂತೆ ಆ 'ಹುಲಿದೇವರು' ಬರೀ ಒಂದು ಕರಿ ಕಲ್ಲಾಗಿರುತ್ತಿತ್ತು.

ಕರಿಯಾ-ಬಿಳಿಯಾ ಎಂಬ ಎರಡು ಎತ್ತುಗಳು ಎಳೆಯುವ ಗಾಡಿಯಲ್ಲಿ ಭತ್ತದ ಚೀಲಗಳು ಪೇಟೆಯ ಗಿರಣಿ ಸೇರುತ್ತಿದ್ದವು. ಅಕ್ಕಿ ಚೀಲಗಳಾಗಿ ಹೊರ ಬರುತ್ತಿದ್ದವು. ಅಜ್ಜ ಮನೆಗೆ ಬೇಕಾದ ನಾಲ್ಕಾರು ಚೀಲ ಗಳನ್ನು ಮಾತ್ರ ಇಟ್ಟುಕೊಂಡು ಉಳಿದವನ್ನು ಮಾರಿ ಬಿಡುತ್ತಿದ್ದ. ರಜೆಗಾಗಿ ಮಾತ್ರ ಅಜ್ಜನ ಮನೆಗೆ ಬರುತ್ತಿದ್ದ ನಾವು ಶಿರ್ಶಿಯ ನಮ್ಮ ಮನೆಗೆ ಹೋಗಿರುತ್ತಿದ್ದೆವು. ಸರ್ಕಾರಿ ಸಣ್ಣ ಸಂಬಳದ ನಾಲ್ಕು ಮಕ್ಕಳ ಅಪ್ಪನ ಸಂಸಾರ ಬಡತನ ಬೇಗೆಗೆ ಸಿಲುಕಿ ಹಲವಾರು ಬಾರಿ ಕಷ್ಟ ಪಡುತ್ತಿತ್ತು. ಅಜ್ಜ-ಅಜ್ಜಿಯ ಸಹಾಯ ಹಸ್ತವಿದ್ದರೂ ''ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ'' ಗತಿ ಆಗುತ್ತಿತ್ತು. ಅಜ್ಜನಿಗೂ ಹಳ್ಳಿಯ ಕೃಷಿ ಕುಟುಂಬದ ಖರ್ಚು ಇದ್ದೇ ಇತ್ತು. ಆದರೂ ಅಜ್ಜಿಯ ಒತ್ತಾಯದ ಫಲವಾಗಿ ಗಿರಣಿಯಿಂದ ಅಕ್ಕಿ ಚೀಲಗಳು ಹಳ್ಳಿಗೆ ಹೋಗುವಾಗ ಒಂದು ಚೀಲ ನಮ್ಮ ಮನೆಗೆ ಬರುತ್ತಿತ್ತು. ಅಮ್ಮನಿಗೆ ತವರು ಮನೆಯ ಅಕ್ಕಿ ಚೀಲದಿಂದ ಸಂಕೋಚ, ಜೊತೆಗೆ ಮಕ್ಕಳಿಗೆ ಎರಡು ತಿಂಗಳು ಹೊಟ್ಟೆ ತುಂಬ ಊಟ ಹಾಕಿ, ಚೆನ್ನಾಗಿ ಓದಿಸಬಹುದೆಂಬ ಹಂಬಲ.

ಗದ್ದೆ ಕೊಯ್ಲಾದ ನಂತರ ಮುಕ್ರಿ ಹೆಣ್ಣಾಳಿನ ಸಹಾಯದಿಂದ ಅಜ್ಜಿ ಗದ್ದೆಯಲ್ಲಿ ಮೊಗೆಕಾಯಿ, ಬದನೆ, ಹರಿವೆ, ಗೋಳಿ ಸೊಪ್ಪು ಕೆಲವು ಬಾರಿ ಬೆಳೆಯುತ್ತಿದ್ದುದು ಉಂಟು. ಆದರೆ ಒಂದೆರಡು ಬಾರಿ ಲಾಭಕ್ಕಿಂತ ಖರ್ಚೇ ಅಧಿಕವಾದ ನಂತರ ಈ ಸಾಹಸ ನಿಂತಿತ್ತು.

ಭತ್ತದ ಹುಲ್ಲಿನಿಂದ ಕೊಳವೆ ಮಾಡಿಕೊಂಡು ಸಾಬೂನು ಗುಳ್ಳೆ ಮಾಡಿ ಒಂದು ರಜಾ ದಿನ ಕಳೆದರೆ, ಬಣವೆ ಸಂದಿನಲ್ಲಿ ಮುಕ್ರಿ, ಆಳು ಬೀರ, ಮಾವ ಕೃಷ್ಣ ಕಲಿಸಿದ ಇಸ್ಪೀಟು ಆಟ ಒಂದು ವಾರವಿಡೀ ಗುಂಗು ಹಿಡಿಸಿತ್ತು. ಆದರೆ ಒಮ್ಮೆ ಮನೆಯಲ್ಲೂ ಇಸ್ಪೀಟು ಆಡಿ, ಅಜ್ಜನಿಂದ ಬೈಸಿಕೊಂಡ ಮೇಲೆ ಇಸ್ಪೀಟು ಪ್ಯಾಕು ಮುಕ್ರಿ ಆಳಿನ ಗುಡಿಸಲು ಸೇರಿತ್ತು.

ಕಾಲದ ಮಹಿಮೆ! ಅಜ್ಜನ ಆಸ್ತಿ-ಮನೆ ಪಾಲಾಗಿತ್ತು. ಅಜ್ಜ ಅವನ ಇಬ್ಬರು ತಮ್ಮಂದಿರು ಬೇರೆ ಬೇರೆಯಾಗಿ ದ್ದರು. ತೋಟ ಮೂವರಿಗೂ ಹಂಚಿಹೋಗಿತ್ತು. ಅಜ್ಜನ ಒಬ್ಬ ತಮ್ಮನಿಗೆ ಮಾತ್ರ ಗಂಡು ಮಕ್ಕಳಿದ್ದುದರಿಂದ ಅವರು ಮೂಲ ಮನೆಯ ದೇವರ ಪೂಜೆ ಮಾಡಿ ಕೊಂಡು ಬರಬೇಕು, ಅವರಿಗೆ ಅದಕ್ಕಾಗಿ ಪೂರ್ತಿ ಗದ್ದೆ ಸೇರಬೇಕೆಂದು ಅಜ್ಜ ನಿರ್ಧರಿಸಿದ್ದ. ಅಜ್ಜನ ನಿಧನಾ ನಂತರವೂ ಹಲವು ವರ್ಷಗಳ ಕಾಲ ಈ ಗದ್ದೆ ಅಜ್ಜನ ತಮ್ಮನ ಮಕ್ಕಳು ಸಾಗುವಳಿ ಮಾಡಿದ್ದರು. ನೀರಿನ ಗಲಾಟೆಗಳು, ಆರ್ಥಿಕ ತೊಂದರೆಗಳು ಹಲವಾರು ಕಾರಣಗಳಿಂದ ಗದ್ದೆ ಮಾರಾಟವಾಯ್ತಂತೆ. ಗದ್ದೆ ಇಲ್ಲದಿದ್ದರೂ ದೇವರ ಪೂಜೆ ನಿಲ್ಲಲಾರದು, ಅದು ಬೇರೆ ವಿಷಯ. ಆದರೆ ಈಗ ಅಜ್ಜನ ಮನೆಯಲ್ಲಿ ಗದ್ದೆ ಇಲ್ಲ. ಹತ್ತು ಹಲವು ಜನರಿಗೆ, ನಮಗೂ ಕೆಲ ಕಾಲವಾದರೂ ಒಂದು ತುತ್ತು ಅನ್ನ ನೀಡಿದ್ದ ಅಜ್ಜನ ಗದ್ದೆ ಈಗಿಲ್ಲ, ಅಂದರೆ ಅಜ್ಜನ ಮನೆಯವರದಾಗಿಲ್ಲ. ಹಳ್ಳಿಯಲ್ಲಿ ಹೊಲ, ಮನೆ ಕಳೆದುಕೊಂಡು ಬೇರಿಲ್ಲದ ಮರಗಳಂತೆ ಪೇಟೆ ಸೇರಿದ ಲಕ್ಷಾಂತರ ಜನಗಳಂತೆ ನಾವು! ಗದ್ದೆ ಮಾರಾಟವಾಗದಿದ್ದರೂ ಅದು ಎಂದೂ ನನ್ನದಾಗಿರಲಿಲ್ಲ! ಮತ್ತೆ ಈಗ ಯಾಕೆ ಈ ಅನಾಥಭಾವ! ಎಂದು ಎಷ್ಟೇ ಸಮಾಧಾನ ತಂದುಕೊಂಡರೂ ಮನಸ್ಸು ವಿಹ್ವಲಗೊಂಡಿದೆ.

**ವಿಜಯಾ ಶ್ರೀಧರ್**
ಕೇರಾಫ್ : ಕೆ. ಆರ್. ಶ್ರೀಧರ್
೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೧




ತುಮಕೂರಿನ 'ಪ್ರಜಾಪ್ರಗತಿ' ಪತ್ರಿಕೆಯ ಬಳಗವು ಅಕ್ಟೋಬರ್ ೨೪ರಂದು 'ಜಾಗತೀಕರಣ ಮತ್ತು ಕನ್ನಡ ಪತ್ರಿಕೋದ್ಯಮ' ಕುರಿತು ವಿಚಾರ ಸಂಕಿರಣ ನಡೆಸಿತು. ಉನ್ನತ ಶಿಕ್ಷಣ ಸಚಿವ ಡಾ|| ಜಿ. ಪರಮೇಶ್ವರ ಉದ್ಘಾಟಿಸಿದ ಸಂಕಿರಣದಲ್ಲಿ ಡಾ|| ಜಿ. ರಾಮಕೃಷ್ಣ ಅಧ್ಯಕ್ಷರಾಗಿ ಆಶಯ ಭಾಷಣ ಮಾಡಿದರು. ಪಾಲ್ಗೊಂಡ ಇತರರು, ಸಂಯುಕ್ತ ಕರ್ನಾಟಕದ ಶ್ರೀ. ಎಸ್. ವಿ. ಜಯಶೀಲ ರಾವ್, ಕನ್ನಡ ಪ್ರಭದ ಶ್ರೀ. ವೆಂಕಟನಾರಾಯಣ ಮತ್ತು ಪ್ರಜಾವಾಣಿಯ ಶ್ರೀ. ಶೈಲೇಶಚಂದ್ರ ಗುಪ್ತ, 'ಪ್ರಜಾಪ್ರಗತಿ'ಯ ಶ್ರೀ. ನಾಗಣ್ಣ ಮತ್ತು ಶ್ರೀ. ಕೋಟೆ ನಾಗಭೂಷಣ ಸಹ ಭಾಗವಹಿಸಿದ್ದರು.

# ಶಾಪಗ್ರಸ್ತ 'ಕುಂತಿ'?

ಡಿಸೆಂಬರ್ ಸಂಜೆ ಯಾವುದೇ ದಿನ ಉತ್ತರ ದಿಕ್ಕಿಗೆ ದೃಷ್ಟಿ ಹರಿಸಿದಾಗ ಕಾಣುವುದು ಇಂಗ್ಲಿಷ್ ಅಕ್ಷರ M ಆಕಾರದ ಐದು ನಕ್ಷತ್ರಗಳು. ಇದನ್ನು ಕುಂತಿ ಎಂದು ಹೆಸರಿಸಿದ್ದಾರೆ ನಮ್ಮ ಹಿರಿಯರು. ಸಂಜೆಯಿಂದ ಮಧ್ಯರಾತ್ರಿಯವರೆಗೆ ಇದನ್ನು ಗಮನಿಸುತ್ತಾ ಬಂದಲ್ಲಿ ಕ್ರಮೇಣ ಅದು ವಾಯವ್ಯದಿಕ್ಕಿಗೆ ಸರಿಯುವುದನ್ನು ಕಾಣಬಹುದು. ಇದರಲ್ಲಿ ಆಶ್ಚರ್ಯವೇನಿಲ್ಲ. ಏಕೆಂದರೆ ಪ್ರತಿಯೊಂದು ನಕ್ಷತ್ರವೂ ಹೀಗೆ ಪಶ್ಚಿಮ ಅಥವಾ ವಾಯವ್ಯದ ಕಡೆಗೆ ಸರಿಯುವುದಕ್ಕೆ ಭೂಮಿ ತನ್ನ ಅಕ್ಷದ ಮೇಲೆ ಬುಗುರಿಯಂತೆ ಸುತ್ತುತ್ತಿರುವುದೇ ಕಾರಣ. ಆದರೆ ವಾಯವ್ಯದಲ್ಲಿರುವಾಗ ಈ ಐದು ನಕ್ಷತ್ರಗಳು ನೇರವಾಗಿ ಎತ್ತಿ ನಿಲ್ಲಿಸಿದ M ಅಕ್ಷರದಂತೆ ಅಂದರೆ '**Σ**' ಹೀಗೆ ಕಾಣುತ್ತವೆ. ಎಲ್ಲ ನಕ್ಷತ್ರಗಳೂ ಸೇರಿದ ಖಗೋಳವೇ ತಿರುಗುತ್ತಿದೆ ಎಂಬುದಕ್ಕೆ ಇದಕ್ಕಿಂತ ಉತ್ತಮ ನಿದರ್ಶನ ಬೇಕೇ?

ಈ 'ಕುಂತಿ'ಗೆ ಹೀಗೆ ಸುತ್ತುವ ಶಾಪವೇಕೆ ತಟ್ಟಿತು? ಎಂದು ತಿಳಿಯಲು ನಾವು ಅದರ ಐರೋಪ್ಯ ಹೆಸರನ್ನು, ಅದರ ಹಿನ್ನೆಲೆಯನ್ನೂ ತಿಳಿಯಬೇಕು. ಕ್ಯಾಸಿಯೋಪಿಯಾ ಎಂಬುದು ಈ ನಕ್ಷತ್ರಪುಂಜದ ಹೆಸರು. ಈಕೆ ಒಬ್ಬ ಮಹಾರಾಣಿ. ತಾನು ಸುರಸುಂದರಿಯರಿಗಿಂತ ಸುಂದರಿ ಎಂಬ ಅಹಂ ಅವಳಿಗಿತ್ತು. ರಾಜನ ಹೆಸರು ಸಿಫಿಯಸ್. ರಾಜ ಕುಮಾರಿಯ ಹೆಸರು ಆಂಡ್ರೋಮಿಡಾ. ಮಹಾರಾಣಿ ತನ್ನ ಸೌಂದರ್ಯದ ಬಗ್ಗೆ ಬಡಾಯಿ ಕೊಚ್ಚಿದ್ದನ್ನು ಕೇಳಿದ ಸುರಸುಂದರಿಯರು ಅಪ್ಪನಿಗೆ ದೂರು ಸಲ್ಲಿಸಿದರು. ಸಮುದ್ರ ದೇವತೆಯಾದ ಅಪ್ಪ ಒಂದು ಭಯಂಕರ ಜಲಚರವನ್ನು ಸೃಷ್ಟಿಸಿದ. ಇದರ ಕಾಟದಿಂದ ತತ್ತರಿಸಿದ ಜನ ರಾಜ ಸಿಫಿಯಸ್‌ಗೆ ಮೊರೆ ಇಟ್ಟರು. ರಾಜ ದೇವಗುರುಗಳನ್ನು ವಿಚಾರಿಸಿದಾಗ ಆಘಾತ ಕಾದಿತ್ತು – ಆ ಜಲಚರಕ್ಕೆ ರಾಜಕುಮಾರಿಯನ್ನು ಬಲಿಗೊಟ್ಟರೆ, ಅದು ಉಪಟಳ ನಿಲ್ಲುಸುವುದಂತೆ. ಇದನ್ನು ಕೇಳಿದ ರಾಜ, ರಾಣಿ ದುಃಖಿತರಾದರು. ಆಂಡ್ರೋಮಿಡಾಳನ್ನು ಬಂಡೆಗೆ ಬಿಗಿದರು.

ಈ ಬಗೆಯ ಕತೆಗಳು ಸಾಮಾನ್ಯವಾಗಿ ದುರಂತವಲ್ಲ, ಆದ್ದರಿಂದ ಈಗೊಬ್ಬ ಕಥಾನಾಯಕನ ಪ್ರವೇಶವಾಯಿತು. ಮೆಡುಸಾ ಎಂಬ ಮಾಟಗಾತಿಯನ್ನು ಕೊಂದು ತಲೆಯನ್ನು ಚೀಲದಲ್ಲಿಟ್ಟುಕೊಂಡು ಹಿಂದಿರುಗುತ್ತಿದ್ದ ಪರ್ಸಿಯುಸ್‌ಗೆ ಆಂಡ್ರೋಮಿಡಾ ಕಂಡಳು. ಮೆಡುಸಾ ಎಂಬುವಳು ಅಂತಿಂಥ ಮಾಟಗಾತಿಯಲ್ಲ. ಅವಳ ಮುಖವನ್ನು ನೋಡಿದ ವ್ಯಕ್ತಿ ಕಲ್ಲಾಗಿಬಿಡುತ್ತಿದ್ದ. ಅಂಥವಳನ್ನು ಉಪಾಯವಾಗಿ ಕೊಂದ ಜಾಣ ಪರ್ಸಿಯುಸ್. ಈಗ ಅವನು ಆಂಡ್ರೋಮಿಡಾಗೆ ಕಣ್ಣು ಮುಚ್ಚಿಕೊಳ್ಳಲು ಹೇಳಿದ. ಜಲಚರ ಬಂದೊಡನೆ ಅದರ ಮುಖಕ್ಕೆ ಮೆಡುಸಾಳ ತಲೆಯನ್ನು ಅಡ್ಡ ಹಿಡಿದ. ಅಲ್ಲಿಯೇ ಜಲಚರ ಕಲ್ಲಾಗಿ ಉರುಳಿತು. ಮುಂದಿನ ಕತೆ ಗೊತ್ತೇ ಇದೆ. ಆತ ಆಂಡ್ರೋಮಿಡಾಳನ್ನು ಮದುವೆಯಾದ, ಎಲ್ಲರೂ ಸುಖವಾಗಿದ್ದರು. ಕಾಸಿಯೋಪಿಯಾಳ ಅಹಂಕಾರದ ಕಾರಣ ಈ ಎಲ್ಲ ಉಪದ್ರವ ಉಂಟಾದದ್ದರಿಂದ ಅವಳಿಗೆ ಶಾಪ ತಟ್ಟಿತು – ಯಾವಾಗಲೂ ಆಕಾಶದಲ್ಲಿ "ತಿರುಗುತ್ತಾ ಇರು" ಎಂದು. (ಉಳಿದ ಪುಂಜಗಳೂ ಹೀಗೆಯೇ ತಿರುಗುತ್ತವೆ; ಆದರೆ ಆಕಾರದ ಬದಲಾವಣೆಯಿಂದಲೇ ತಿರುಗುವಿಕೆ ಸ್ಪಷ್ಟವಾಗಿ ತಿಳಿಯುವುದು ಕ್ಯಾಸಿಯೋಪಿಯಾಗೆ ಮಾತ್ರ. ಈ ನಾಟಕದ ಎಲ್ಲ ಪಾತ್ರಧಾರಿಗಳ ಹೆಸರುಗಳೂ ನಕ್ಷತ್ರಪುಂಜಗಳಿಗೆ ಇಡಲಾಗಿದೆ. ಜಲಚರದ ಹೆಸರು ಸೆಟಸ್ ಎಂದು).

ಉತ್ತರದ ಭೂಭಾಗಗಳಿಂದ ನೋಡಿದರೆ, ಕ್ಯಾಸಿಯೋಪಿಯಾ ಪುಂಜ M ಇದ್ದದ್ದು ಮೂರು ಗಂಟೆಗಳ ನಂತರ Σ ಆಗಿ, ಆ ಮುಂದಿನ ಮೂರು ಗಂಟೆಗಳಲ್ಲಿ W ಆಕಾರ ಪಡೆಯುವುದನ್ನು ಸ್ಫುಟವಾಗಿ ಕಾಣಬಹುದು. ದಕ್ಷಿಣ ಭಾರತದಿಂದ ನಮಗೆ ಈ ನೋಟ ಸಿಗುವುದಿಲ್ಲ.

ಈ ಪೌರಾಣಿಕ ಕತೆ ಬಹಳ ಅಂದರೆ ಸುಮಾರು ೩,೦೦೦ ವರ್ಷಗಳಷ್ಟು ಹಿಂದಿನದು. ಸುಮಾರು ೩೬ ಡಿಗ್ರಿಗಳ ಅಕ್ಷಾಂಶದ ಭೂಭಾಗದಲ್ಲಿ ಈ ಕತೆ, ಈ ಹೆಸರುಗಳು ಉಗಮವಾಗಿರಬೇಕೆಂದು ಲೆಕ್ಕ ಹಾಕಿದ್ದಾರೆ. ಯುಫ್ರೇಟಿಸ್ ಮತ್ತು ಟೈಗ್ರಿಸ್ ನದಿಗಳ ನಡುವಿನ ಭೂಭಾಗದಲ್ಲಿ ಈ ಕತೆ ಸೃಷ್ಟಿಸಿದ ಜನ ವಾಸಿಸಿದ್ದಿರಬೇಕೆಂದೂ ಊಹಿಸಿದ್ದಾರೆ.

ಕ್ಯಾಸಿಯೋಪಿಯಾ ಕಾಣುತ್ತಿದ್ದಾಗ ಸಪ್ತರ್ಷಿಮಂಡಲ ಕಾಣುವುದಿಲ್ಲ. ಕ್ಯಾಸಿಯೋಪಿಯಾ ವಾಯವ್ಯದಲ್ಲಿ ಮರೆಯಾದಂತೆ ಸಪ್ತರ್ಷಿಮಂಡಲದ ಮೊದಲೆರಡು ನಕ್ಷತ್ರಗಳು ಈಶಾನ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ಇವೆರಡೂ ಧ್ರುವದ ಎದುರಬದಿರಾಗಿವೆ ಎಂದು ಇದರಿಂದ ಸುಲಭವಾಗಿ ಊಹಿಸಬಹುದು. ಕ್ಯಾಸಿಯೋಪಿಯಾದ ಐದು ನಕ್ಷತ್ರಗಳಲ್ಲಿ ಅತಿ ಪ್ರಕಾಶಮಾನವಾದದ್ದಕ್ಕೆ ($\alpha$) ಆಲ್ಫಾ, ಅದಕ್ಕಿಂತ ಕಡಿಮೆ ಪ್ರಕಾಶದ್ದಕ್ಕೆ ($\beta$) ಬೀಟಾ; ಮುಂದಕ್ಕೆ ಗ್ಯಾಮಾ ($\gamma$), ಡೆಲ್ಟಾ ($\delta$), ಎಪ್ಸಿಲಾನ್ ($\varepsilon$) ಹೀಗೆ ಸೂಚಿಸಲಾಗುತ್ತದೆ.

ಅದರ ಆಕಾರವನ್ನು ಸೂಕ್ಷ್ಮವಾಗಿ ಗಮನಿಸಿದಾಗ M ಆಕಾರದ ಎರಡು ತ್ರಿಭುಜಗಳಲ್ಲಿ ವ್ಯತ್ಯಾಸ ಇರುವುದನ್ನು ಕಾಣಬಹುದು. $\alpha\beta\gamma$ ಎಂಬುದು ಸಮಕೋಣ ತ್ರಿಭುಜದಂತಿದ್ದರೆ, $\gamma\delta\varepsilon$ ಎಂಬುದರಲ್ಲಿ ಯಾವುದೇ ವಿಶೇಷಗುಣ ಕಾಣುವುದಿಲ್ಲ. $\gamma\varepsilon$ ಎಂಬ ಕಾಲ್ಪನಿಕ ರೇಖೆಯ ಮಧ್ಯ ಬಿಂದುವಿಗೆ $\delta$ದಿಂದ ಕಾಲ್ಪನಿಕ ರೇಖೆ ಎಳೆದು ವಿಸ್ತರಿಸಿದರೆ ಅದು ಧ್ರುವ ನಕ್ಷತ್ರವನ್ನು ಮುಟ್ಟುತ್ತದೆ. ಆದ್ದರಿಂದ ಸಪ್ತರ್ಷಿ ಮಂಡಲ ಇಲ್ಲದಾಗಲೂ (ಅಂದರೆ ಕ್ಯಾಸಿಯೋಪಿಯಾ ಕಾಣುತ್ತಿರುವಾಗ) ಧ್ರುವ ನಕ್ಷತ್ರವನ್ನು ಪತ್ತೆ ಮಾಡಬಹುದು.

ಸಂಜೆಯ ಆಕಾಶದಲ್ಲಿ ಕಾಣುವ ಇತರ ಪ್ರಕಾಶಮಾನವಾದ ಪುಂಜಗಳೆಂದರೆ, ಪೂರ್ವದ ಅಂಚಿನಲ್ಲಿ ಓರೈಯನ್, ವೃಷಭ, ನೆತ್ತಿಯ ಮೇಲೆ ಪೆಗಸಸ್ ಚೌಕ, ಪಶ್ಚಿಮದಲ್ಲಿ ಬೇಸಿಗೆ ತ್ರಿಕೋಣವನ್ನು ಸೃಷ್ಟಿಸುವ, ರಾಜಹಂಸ (ಸಿಗ್ನಸ್), ವೀಣಾ (ಲೈರಾ) ಮತ್ತು ಗರುಡ (ಅಕ್ವಿಲಾ).

ಕಳೆದ ತಿಂಗಳುಗಳಲ್ಲಿ ಕ್ಷೀಣವಾಗುತ್ತಾ ಬಂದ ಮಂಗಳ ಈಗ ಪೆಗಸಸ್ ಚೌಕದ ಪಕ್ಕ ಮೀನರಾಶಿಗೆ ಬಂದಿದೆ. ತಿಂಗಳ ಆರಂಭದಲ್ಲಿ ಸೂರ್ಯಾಸ್ತವಾದ ಒಂದು ಗಂಟೆಯ ನಂತರ ಉದಯಿಸುವ ಶನಿಗ್ರಹ ತಿಂಗಳ ಕೊನೆಯ ದಿನ ಸೂರ್ಯಸ್ತವಾದೊಡನೆಯೇ ಉದಯಿಸುತ್ತದೆ. ಹೀಗೆ ಸೂರ್ಯ ಮತ್ತು ಗ್ರಹ (ಅಥವಾ ಯಾವುದೇ ಆಕಾಶಕಾಯ) ಸೂರ್ಯಾಸ್ತವಾಗುವ ಕ್ಷಣದಲ್ಲೇ ಉದಯಿಸಿದರೆ, ಈ ಘಟನೆಗೆ ವಿಯುತಿ ಎಂಬ ಹೆಸರಿದೆ (ಚಂದ್ರ ಹೀಗೆ 'ವಿಯುತಿ'ಯಲ್ಲಿದ್ದಾಗ ಹುಣ್ಣಿಮೆಯಾಗುತ್ತದೆ). ಆದ್ದರಿಂದ ಆಕಾಶಕಾಯ ವಿಯುತಿಯಲ್ಲಿದ್ದರೆ ಭೂಮಿ ಮತ್ತು ಅದರ ನಡುವಿನ ದೂರ ಕನಿಷ್ಠ ಎನ್ನಬಹುದು. ಕಳೆದ ಆಗಸ್ಟ್‌ನಲ್ಲಿ ಮಂಗಳ ಹೀಗೆ ವಿಯುತಿಯಲ್ಲಿದ್ದಾಗ ಸುದ್ದಿ ಮಾಡಿತ್ತಲ್ಲವೇ? ಆಗ ಅದು ಪ್ರಕಾಶದಲ್ಲಿ ಗರಿಷ್ಠ ಮುಟ್ಟಿತು. ಜೊತೆಗೆ ಅದು ದೂರದರ್ಶಕಗಳಲ್ಲಿ ದೊಡ್ಡದಾಗಿಯೂ ಕಂಡಿತು. ಈಗ ಶನಿ ಗ್ರಹ ಅದೇ ಅವಕಾಶ ಒದಗಿಸುತ್ತಿದೆ.

ಬುಧಗ್ರಹ ತಿಂಗಳ ಮೊದಲವಾರದಲ್ಲಿ ಸಂಜೆಯ ಆಕಾಶದಲ್ಲಿ ಕಾಣುವುದು. ಶುಕ್ರ ಮತ್ತು ಬುಧ ಎರಡನ್ನೂ ಪಶ್ಚಿಮ ಆಕಾಶದಲ್ಲಿ ಕಾಣಬಹುದು. ದಿನೇ ದಿನೇ ಇವುಗಳ ಸ್ಥಾನ ವ್ಯತ್ಯಾಸವಾಗುವುದನ್ನೂ ಕಾಣಬಹುದು. ಒಂಭತ್ತರಂದು ಬುಧಗ್ರಹದ ಎತ್ತರ ಗರಿಷ್ಠ (ಸುಮಾರು ೨೦ ಡಿಗ್ರಿಗಳಷ್ಟು) ಅಂದರೆ ಸೂರ್ಯಾಸ್ತವಾದ ಮೇಲೆ ಸುಮಾರು ಒಂದು ಗಂಟೆಯ

ಡಾ|| ಬಿ.ಎಸ್. ಶೈಲಜಾ




**ಕ್ಯಾಸಿಯೋಪಿಯಾ (ಕುಂತಿ)ದ ಕಲ್ಪನೆ. ಅತಿ ಪ್ರಕಾಶಮಾನವಾದ ನಕ್ಷತ್ರ ಆಲ್ಫಾ(α), ಮುಂದಿನದು ಬೀಟಾ (β), ಗಾಮಾ (γ), ಡೆಲ್ಟಾ (δ), ಎಪ್ಸಿಲಾನ್ (ε) ಹೀಗೆ.**

ನಂತರ ಅದು ಕಂತುವುದು. ಹೀಗೆ ಬುಧ ಗ್ರಹವನ್ನು ಗುರುತಿಸಲು ಒಳ್ಳೆಯ ಅವಕಾಶ ಸಿಗಲಿದೆ.

ಇನ್ನೊಂದು ಗ್ರಹ ಗುರು ಮಧ್ಯರಾತ್ರಿಗೆ ಸ್ವಲ್ಪ ಮುಂಚೆ ಉದಯಿಸುವುದು. ಬೆಳಗಿನ ಜಾವ ಎದ್ದು ನೋಡಿದಾಗ ನೆತ್ತಿಯ ಮೇಲೆ ಸಿಂಹರಾಶಿಯಲ್ಲಿ ಕಾಣುವುದು. ಸಿಂಹರಾಶಿಗಿಂತ ಪಶ್ಚಿಮದಲ್ಲಿ ಕಾಣುವುದು ಮಿಥುನ. ಜೆಮಿನಿಡ್ಸ್ ಎಂಬ ಉಲ್ಕಾವೃಷ್ಟಿಯ ಉಲ್ಕೆಗಳು ಮಿಥುನರಾಶಿಯಿಂದ ಹೊರಟಂತೆ ಕಾಣುತ್ತವೆ. ೧೩-೧೪ನೇ ತಾರೀಖುಗಳಂದು ಬೆಳಗಿನ ಜಾವ ಗಮನಿಸಿದಿರಾದರೆ ಈ ವೃಷ್ಟಿಯ ಉಲ್ಕೆಗಳನ್ನು (ಗಂಟೆಗೆ ಸುಮಾರು ೨೦) ಕಾಣಬಹುದು.

ತನ್ನ ಕಕ್ಷೆಯಲ್ಲಿ ಸೂರ್ಯನನ್ನು ಸುತ್ತುವ ಭೂಮಿ ಡಿಸೆಂಬರ್ ೨೨ರಂದು ೧೨ ಗಂಟೆ ೩೪ ನಿಮಿಷಕ್ಕೆ ಒಂದು ಮುಖ್ಯ ಬಿಂದುವನ್ನು ದಾಟಲಿದೆ. ಆದ್ದರಿಂದ ಭೂಮಿಯ ಮೇಲೆ ನಿಂತ ನಮಗೆ ಸೂರ್ಯ ದಕ್ಷಿಣದ ಗರಿಷ್ಠವನ್ನು ಮುಟ್ಟಿ ಹಿಂದಕ್ಕೆ ಹೊರಳುವಂತೆ ಭಾಸವಾಗುತ್ತದೆ. ಈ ಘಟನೆಯೇ ಉತ್ತರಾಯಣ. ಅತಿ ದೀರ್ಘ ಅವಧಿಯ ರಾತ್ರಿಯದೇ ಅಂದಿನ ವಿಶೇಷ. ಆ ಮುಂದೆ ಕ್ರಮೇಣ ಹಗಲಿನ ಅವಧಿ ಪುನಃ ಹೆಚ್ಚುತ್ತಾ ಬರುತ್ತದೆ.

**ಖಗೋಳ ದಿನಚರಿ**

| | |
|---|---|
| ೧ | ಚಂದ್ರನ ಪಕ್ಕದಲ್ಲಿ ಕಾಣುವ ಗ್ರಹವೇ ಮಂಗಳ |
| ೭ | ಚಂದ್ರ ಭೂಮಿಯ ದೂರ ಗರಿಷ್ಠ |
| ೮ | ಬುಧಗ್ರಹವನ್ನು ಗರಿಷ್ಠ ಎತ್ತರದಲ್ಲಿ ಕಾಣುವ ಅವಕಾಶ |
| ೯ | ಹುಣ್ಣಿಮೆ ೦೧:೦೭ ಕ್ಕೆ |
| ೧೦ | ಚಂದ್ರನ ಪಕ್ಕದಲ್ಲಿ ಕಾಣುವ ಚುಕ್ಕೆಯೇ ಶನಿ ಗ್ರಹ |
| ೧೪ | ಜೆಮಿನಿಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ |
| ೧೫ | ಚಂದ್ರನ ಪಕ್ಕ ಕಾಣುವ ಗ್ರಹವೇ ಗುರು |
| ೧೬ | ಚಾಂದ್ರಮಾಸದ ಕೊನೆಯ ಪಾದ - ಚಂದ್ರೋದಯ ನಡುರಾತ್ರಿಗೆ |
| ೨೨ | ಉತ್ತರಾಯಣ ೧೨:೩೪ಕ್ಕೆ ; ಚಂದ್ರ-ಭೂಮಿ ದೂರ ಕನಿಷ್ಠ |
| ೨೩ | ಅಮಾವಾಸ್ಯೆ ೧೫ : ೧೩ ಕ್ಕೆ |
| ೨೫ | ಚಂದ್ರನ ಪಕ್ಕ ಕಾಣುವ ಗ್ರಹವೇ ಶುಕ್ರ |
| ೨೯ | ಚಂದ್ರನ ಪಕ್ಕ ಕಾಣುವ ಗ್ರಹವೇ ಮಂಗಳ |
| ೩೦ | ಚಾಂದ್ರಮಾಸದ ಪ್ರಥಮ ಪಾದ - ಚಂದ್ರಾಸ್ತ ನಡುರಾತ್ರಿಗೆ |
| ೩೧ | ಶನಿಗ್ರಹದ ವಿಯುತಿ – ಸೂರ್ಯಾಸ್ತವಾಗುವಾಗ ಶನಿಗ್ರಹದ ಉದಯ |

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

## ಸಾದರ ಸ್ವೀಕಾರ

**ಶ್ರೀಸಾಮಾನ್ಯ ಮತ್ತು ಭಗವದ್ಗೀತೆ** (ಲೇಖನಗಳು)
*ಸಿಪಿಕೆ*
**ಪುಟ : ೬೮** **ಬೆಲೆ ರೂ : ೬೦**

**ವ್ಯಾಸ ಭಾಗ್ಯ** (ಖಂಡ ಕಾವ್ಯಗಳು) *ಸಿಪಿಕೆ*
**ಪುಟ : ೪೪** **ಬೆಲೆ ರೂ. ೪೦**

**ಮುಕ್ತಾಹಾರ** (ಮುಕ್ತಕಗಳು) *ಸಿಪಿಕೆ*
**ಪುಟ : ೭೬** **ಬೆಲೆ ರೂ. ೫೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಚಿತ್ರಭಾನು ಪ್ರಕಾಶನ**, ೨೨೬೫/೧೯, 'ಭಾರತಿ'
೬ನೇ ಅಡ್ಡರಸ್ತೆ, ವಿನಾಯಕನಗರ
ಮೈಸೂರು - ೫೭೦ ೦೧೨

**ಜಾದೂ ಕುಂಚ** (ಮಕ್ಕಳ ಕಥೆಗಳು)
*ಮುನಿಯಾಲ್ ಗಣೇಶ ಶೆಣೈ*
**ಪುಟ : ೫೨** **ಬೆಲೆ ರೂ. ೧೦**

**ಸುಖವೆಂಬ ಪಕ್ಷಿ** (ಮಕ್ಕಳ ಕಥೆಗಳು)
*ಮುನಿಯಾಲ್ ಗಣೇಶ ಶೆಣೈ*
**ಪುಟ : ೫೨** **ಬೆಲೆ ರೂ. ೧೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಪದ್ಮಶ್ರೀ ಪ್ರಕಾಶನ, ಸಂ. ೭೭, ೬ನೇ ಮುಖ್ಯರಸ್ತೆ
ಎಚ್.ಪಿ.ಆರ್. ಲೇಔಟ್, ಬೆಂಗಳೂರು-೭೯

**ಋಷ್ಯಶೃಂಗ** (ಪೌರಾಣಿಕ ನಾಟಕ)
*ಸುರೇಂದ್ರ ಶೆಟ್ಟಿ, ತೆಕ್ಕಟ್ಟೆ*
**ಪುಟ : ೫೨** **ಬೆಲೆ ರೂ. ೩೦**
**ಸುಮಂತ ಪ್ರಕಾಶನ**, ಉಪ್ಪಿನಕೋಟೆ, ಬ್ರಹ್ಮಾವರ

**ತಮಸೋಮ ಜ್ಯೋತಿರ್ಗಮಯ** (ಕಾದಂಬರಿ)
*ಗೀತಾ ಬಿ. ಯು.*
**ಪುಟ : ೧೪೦** **ಬೆಲೆ ರೂ. ೮೦**

**ಕೈ ಹಿಡಿದು ನಡೆಸೆನ್ನನು** (ಕಥಾ ಸಂಕಲನ)
*ಗೀತಾ ಬಿ. ಯು.*
**ಪುಟ : ೧೬೮** **ಬೆಲೆ ರೂ. ೮೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಗೀತಾ ಬಿ. ಯು., ೪೮೫, ೪೭ನೇ ಕ್ರಾಸ್, ೫ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

**ಕನ್ನಡ ತಿರುಪ್ಪಾವೈ**
*ಅನುವಾದ : ನಾ. ಗೀತಾಚಾರ್ಯ*
**ಪುಟ : ೮೪** **ಬೆಲೆ ರೂ. ೪೦**
**ನಾರಾಯಣಶರ್ಮ ಸಂಸ್ಕೃತಿ ಕೇಂದ್ರ**
ದೊಡ್ಡಹೆಜ್ಜಾಜಿ, ಬೆಂಗಳೂರು.

**ನಮ್ಮ ರಾಷ್ಟ್ರೀಯ ಚಿಹ್ನೆಗಳು** (ಮಕ್ಕಳಿಗಾಗಿ)
*ಚಂದ್ರಶೇಖರ ಶಿ. ಹಿರೇಮಠ*
**ಪುಟ : ೬೮** **ಬೆಲೆ ರೂ. ೬೦**
ವಿಜಯ ಪ್ರಕಾಶನ, ನಾಲತವಾಡ - ೫೮೬ ೧೨೪

**ಕಲ್ಯಾಣ ಕಲಾಶ್ರೀ** (ಶ್ರೀ ಶೇಷಪ್ಪ ಗಬ್ಬೂರರ ಅಭಿನಂದನ ಗ್ರಂಥ) *ಸಂ : ಎಚ್. ಕಾಶೀನಾಥರೆಡ್ಡಿ*
**ಪುಟ : ೧೩೮** **ಬೆಲೆ ರೂ. ೯೦**
**ಕಲಾನಿಕೇತನ ಪ್ರಕಾಶನ**
ಶ್ರೀ ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ
ಬಸವಕಲ್ಯಾಣ - ೫೮೫ ೩೨೭, ಬೀದರ್ ಜಿಲ್ಲೆ

**ದೇವಪುರದ ಮಹಾಕವಿ ಲಕ್ಷ್ಮೀಶ** (ಲೇಖನಗಳು)
*ಸಂ : ವೀರಭದ್ರ ಸಿಂಪಿ, ನೆಲೋಗಿ*
**ಪುಟ : ೧೧೨** **ಬೆಲೆ ರೂ. ೫೦**
**ಉದಯೋನ್ಮುಖ ಯುವ ಬರಹಗಾರರ ಬಳಗ**
ಕೇಂದ್ರ ಸಮಿತಿ, ಕಲಬುರ್ಗಿ - ೫೮೫ ೧೦೩

**ಸಿಪಿಕೆ : ಒಂದು ಕಾವ್ಯಾಭ್ಯಾಸ** (ಲೇಖನಗಳು)
*ಡಾ|| ಎಸ್. ಪಿ. ಪದ್ಮಪ್ರಸಾದ್*
**ಪುಟ : ೧೪೪** **ಬೆಲೆ ರೂ. ೮೦**
**'ಸಂವಹನ'** ೧೨/೧ಎ
ಈವ್ನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ
ಮೈಸೂರು - ೫೭೦ ೦೦೧

**ಕಾಳಿದಾಸ ಸುಭಾಷಿತ** (ಲೇಖನಗಳು)
*ಪ್ರೊ|| ವಿಷ್ಣು ಜೋಶಿ*
**ಪುಟ : ೧೬೬** **ಬೆಲೆ ರೂ. ೮೦**
**ಸುಮಂತ ಪ್ರಕಾಶನ**, ಉಪ್ಪಿನಕೋಟೆ
ಬ್ರಹ್ಮಾವರ, ಉಡುಪಿ.

# ಶ್ರೀಲಂಕಾ : ಪ್ರತ್ಯೇಕವಾದಿಗಳ ಪಟ್ಟು ಸೃಷ್ಟಿಸಿರುವ ಬಿಕ್ಕಟ್ಟು

ಶ್ರೀಲಂಕಾದ ಅಧ್ಯಕ್ಷೆ ಚಂದ್ರಿಕಾ ಕುಮಾರತುಂಗ ಮತ್ತು ಪ್ರಧಾನಮಂತ್ರಿ ರಾನಿಲ್ ವಿಕ್ರಮ ಸಿಂಘೆ ಇವರ ನಡುವಣ ಭಿನ್ನಾಭಿಪ್ರಾಯಗಳಿಂದಾಗಿ ದೇಶದಲ್ಲಿ ರಾಜಕೀಯ ಬಿಕ್ಕಟ್ಟು ಉಲ್ಬಣಿಸಿದೆ. ಈ ಬಿಕ್ಕಟ್ಟು ಬಗೆಹರಿಸಲು ಎಲ್ಲ ರಾಜಕೀಯ ಪಕ್ಷಗಳನ್ನೊಳಗೊಂಡ ರಾಷ್ಟ್ರೀಯ ಸರಕಾರದ ಸ್ಥಾಪನೆ ಮಾರ್ಗವೇ, ಇಲ್ಲವೆ ಪಾರ್ಲಿಮೆಂಟ್ ವಿಸರ್ಜಿಸಿ ಮತ್ತೊಮ್ಮೆ ಚುನಾವಣೆ ನಡೆಸುವುದೇ? ಇದು ಬೇರೆಯೇ ವಿಷಯ. ಈ ಬಿಕ್ಕಟ್ಟಿನ ಮೂಲವೇ ಬೇರೆ. ಅದು ಬಗೆಹರಿಯುವವರೆಗೆ ಶ್ರೀಲಂಕಾದಲ್ಲಿ ಯಾರೇ ಅಧಿಕಾರಕ್ಕೆ ಬಂದರೂ ತಲೆನೋವು ತಪ್ಪಿದ್ದಲ್ಲ. ಈಗ ಉದ್ಭವಿಸಿರುವ ಬಿಕ್ಕಟ್ಟಿಗೆ ಕಾರಣ ಸ್ವತಂತ್ರ ತಮಿಳು ರಾಜ್ಯ ಸ್ಥಾಪನೆಗಾಗಿ ಹೋರಾಟ ನಡೆಸುತ್ತ ಬಂದಿರುವ ಎಲ್‌ಟಿಟಿಇಯೊಂದಿಗೆ ನಡೆಯುತ್ತಿರುವ ಸಂಧಾನಗಳಲ್ಲಿ ಮುಂದುವರಿಯುವುದು ಹೇಗೆ, ಗರಿಷ್ಠ ಎಷ್ಟು ರಿಯಾಯಿತಿಗಳನ್ನು ಸರಕಾರ ತೋರಬಹುದು ಎಂಬುದಾಗಿದೆ. ಕಳೆದ ಎರಡು- ಮೂರು ದಶಕಗಳಿಂದ ಶ್ರೀಲಂಕಾದ ಎಲ್ಲ ರಾಜಕೀಯ ಬೆಳವಣಿಗೆಗಳೂ ತಮಿಳು ಪ್ರತ್ಯೇಕ ವಾದಿಗಳ ಸುತ್ತ ಹೆಣೆದುಕೊಂಡಿವೆ. ಪ್ರತ್ಯೇಕ ತಮಿಳು ರಾಜ್ಯದ ಸ್ಥಾಪನೆಗಾಗಿ ವೇಲುಪಿಳ್ಳೆ ಪ್ರಭಾಕರನ್ ನೇತೃತ್ವದಲ್ಲಿ ಎಲ್‌ಟಿಟಿಇ ಸಶಸ್ತ್ರ ಹೋರಾಟ ಪ್ರಾರಂಭಿಸಿ ಮೂರು ದಶಕಗಳ ಮೇಲಾಯಿತು. ಈ ದ್ವೀಪ ರಾಷ್ಟ್ರದಲ್ಲಿ ತಮಿಳರು ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿರುವ ಉತ್ತರ ಮತ್ತು ಈಶಾನ್ಯ ಭಾಗಗಳು ಸುಮಾರು ಎರಡು ದಶಕದಿಂದ ಬಹುತೇಕ ಎಲ್‌ಟಿಟಿಇ ವಶದಲ್ಲಿಯೇ ಇವೆ. ಕಳೆದ ವರ್ಷದ ಆರಂಭದಲ್ಲಿ ನಾರ್ವೇ ರಾಷ್ಟ್ರದ ಮಧ್ಯಸ್ಥಿಕೆಯಲ್ಲಿ ನಡೆದ ದೀರ್ಘ ಕಾಲದ ಸಂಧಾನಗಳ ಫಲವಾಗಿ ಶ್ರೀಲಂಕಾ ಸರಕಾರ ಮತ್ತು ಎಲ್‌ಟಿಟಿಇ ನಡುವೆ ಯುದ್ಧ ಸ್ತಂಭನ ಒಪ್ಪಂದವಾಗಿ ಗುಂಡಿನ ಕಾಳಗವೇನೋ ನಿಂತಿತು. ಮುಂದುವರಿದ ಸಂಧಾನಗಳಲ್ಲಿ ಗಣನೀಯ ಪ್ರಗತಿ ಏನಾಗಿಲ್ಲ ಎಂದೇ ಹೇಳಬೇಕು. ಸಂಧಾನ ಪ್ರಾರಂಭವಾದಾಗಿನಿಂದ ಶ್ರೀಲಂಕಾದ ಅಧ್ಯಕ್ಷೆ ಮತ್ತು ಪ್ರಧಾನಿಯ ನಡುವೆ ಭಿನ್ನಾಭಿಪ್ರಾಯಗಳು ಬೆಳೆಯುತ್ತಲೇ ಇತ್ತು. ಮುಂದಿನ ಹಂತದ ಸಂಧಾನಕ್ಕಾಗಿ ಎಲ್‌ಟಿಟಿಇ ನವೆಂಬರ್ ತಿಂಗಳ ಆದಿಯಲ್ಲಿ ಮಂಡಿಸಿದ ಪ್ರಸ್ತಾವಗಳೇ ಶ್ರೀಲಂಕಾದ ರಾಜಕೀಯ ಬೆಳವಣಿಗೆಗಳಿಗೆ ಮೂಲ ಕಾರಣ.




ಎಲ್‌ಟಿಟಿಇ ಮಂಡಿಸಿರುವ ಪ್ರಸ್ತಾಪಗಳು ಮುಂದಿನ ಐದು ವರ್ಷಗಳಲ್ಲಿ ಪ್ರತ್ಯೇಕ ಸ್ವತಂತ್ರ ತಮಿಳು ರಾಜ್ಯದ ಸ್ಥಾಪನೆಗೆ ವೇದಿಕೆ ನಿರ್ಮಿಸುವುದಾಗಿದೆ. ಅಲ್ಲಿಯವರೆಗೆ, ಅಂದರೆ ಈ ಐದು ವರ್ಷಗಳ ಅವಧಿಯಲ್ಲಿ ಎಲ್‌ಟಿಟಿಇ ವಶದಲ್ಲಿರುವ ಪ್ರಾಂತಗಳಲ್ಲಿ ಹಂಗಾಮಿ ಸ್ವಯಂ ಆಡಳಿತವಿರುತ್ತದೆ. ಅರ್ಥಾತ್ ಈ ಪ್ರದೇಶಗಳಲ್ಲಿ ಪೂರ್ಣವಾಗಿ ಎಲ್‌ಟಿಟಿಇ ಅಧಿಕಾರ ಚಲಾಯಿಸುತ್ತದೆ. ಈ ಪ್ರಸ್ತಾವ ಅಂಗೀಕಾರವಾದರೆ ಶ್ರೀಲಂಕಾ ತುಂಡರಿಸಿದಂತೆಯೇ. ಶ್ರೀಲಂಕಾ ಸರಕಾರ ಸಂಧಾನಗಳಲ್ಲಿ ಎಲ್‌ಟಿಟಿಇಗೆ ಅನಗತ್ಯವಾಗಿ ರಿಯಾಯಿತಿಗಳನ್ನೂ ತೋರಿದೆ. ಅದು ದೇಶದ ಐಕ್ಯತೆಗೆ ಭಂಗ ತರುವುದಾಗಿದೆ ಎನ್ನುವುದು ಅಧ್ಯಕ್ಷೆ ಚಂದ್ರಿಕಾ ಕುಮಾರತುಂಗಾ ಅಪಾದನೆ. ದೇಶದಲ್ಲಿ ಶಾಂತಿ ಸ್ಥಾಪನೆಯ ದೃಷ್ಟಿಯಿಂದ ಒಂದು ಬಗೆಯ ವಿಶಾಲವಾದ ಫೆಡರಲ್ ವ್ಯವಸ್ಥೆಗೆ ಶ್ರಮಿಸುವುದು ಪ್ರಧಾನಿ ರಾನಿಲ್ ವಿಕ್ರಮಸಿಂಘೆ ಇಂಗಿತ. ಅವರ ಈ ನಿಲುವಿಗೆ ಅಮೇರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಬೆಂಬಲವೂ ಇದೆ. ವಿವಾದದ ಕಗ್ಗಂಟು ಇರುವುದು ಇಲ್ಲಿಯೇ. ಎಲ್‌ಟಿಟಿಇ ಪ್ರಸ್ತಾಪಗಳನ್ನು ನೋಡಿದರೆ ಅದು ತನ್ನ ಸುಪರ್ದಿನಲ್ಲಿರುವ ಪ್ರದೇಶಗಳಿಗೆ ಅಧಿಕೃತ ಮನ್ನಣೆ ದೊರಕಿಸಿಕೊಂಡು ಪ್ರತ್ಯೇಕ ರಾಜ್ಯ ಸ್ಥಾಪಿಸಿಕೊಳ್ಳುವುದಾಗಿದೆ. ಹಾಗಾಗಿ ಸಂಧಾನಗಳ ಈ ಘಟ್ಟದಲ್ಲಿ ಶ್ರೀಲಂಕಾ ಸರಕಾರಕ್ಕೆ ಉದ್ಭವಿಸಿರುವ ಕ್ಲಿಷ್ಟವಾದ ಪ್ರಶ್ನೆ ದೇಶದ ಸಮಗ್ರತೆಯ ಅಳಿವು ಉಳಿವಿನದ್ದಾಗಿದೆ.

ಶ್ರೀಲಂಕಾದ ತಮಿಳರ ಸಮಸ್ಯೆ ಇಂದು ನಿನ್ನೆಯದಲ್ಲ. ಬಹಳ ಹಿಂದಿನಿಂದಲೂ ಇದ್ದದ್ದು. ಬ್ರಿಟಿಷ್ ಆಡಳಿತದ ಕಾಲದಲ್ಲೂ ಇದ್ದಿತಾದರೂ ವಸಾಹತುಶಾಹಿ ದಬ್ಬಾಳಿಕೆಯಿಂದಾಗಿ ಪ್ರಾಮುಖ್ಯತೆಗೆ ಬಂದಿರಲಿಲ್ಲ. ಬ್ರಿಟಿಷ್ ಆಡಳಿತದ ಪೂರ್ವದಲ್ಲೂ ನೂರಾರು ವರ್ಷಗಳಿಂದ ಶ್ರೀಲಂಕಾದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ತಮಿಳು ಭಾಷಿಕ ಜನ ನೆಲೆಗೊಂಡಿದ್ದರು. ಒಂದು ಕಾಲದಲ್ಲಿ ಶ್ರೀಲಂಕಾದಲ್ಲಿ ತಮಿಳು ಅರಸರು ಆಡಳಿತ ನಡೆಸಿದರೆಂದು ಇತಿಹಾಸದಲ್ಲಿ ದಾಖಲೆ ಇದೆ. ನೂರಾರು ವರ್ಷಗಳಿಂದ ತಮಿಳರು, ಸಿಂಹಳೀಯರು ಸಾಮರಸ್ಯದಿಂದ ಬಾಳ್ವೆ ನಡೆಸುತ್ತಿದ್ದುದು ಇದರಿಂದ ಸಾಬೀತಾಗುತ್ತದೆ. ಇಂಗ್ಲಿಷರು ಶ್ರೀಲಂಕಾದಲ್ಲಿ ನೆಲೆಗೊಂಡ ಮೇಲೆ ಸ್ಥಾಪಿಸಿದ ಪ್ಲಾಂಟೇಷನ್ನುಗಳಲ್ಲಿ ದುಡಿಯಲು ತಮಿಳುನಾಡಿನಿಂದ ಲಕ್ಷಾಂತರ ಜನ ಕೆಲಸಗಾರರನ್ನು ಕರೆತಂದರು. ಅದರೊಂದಿಗೆ ಭಾರತದಿಂದ ವ್ಯಾಪಾರಸ್ಥರು ಹಾಗೂ ಇತರರು ಶ್ರೀಲಂಕಾದಲ್ಲಿ ಬಂದು ನೆಲೆಸಿದರು. ಬ್ರಿಟಿಷ್ ಆಡಳಿತಗಾರರು ತಮಿಳು ವಲಸೆಗಾರರ ಪೌರತ್ವದ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಏಕೆಂದರೆ ಅದು ಬಹು ಕ್ಲಿಷ್ಟವಾದ ಪ್ರಶ್ನೆಯಾಗಿತ್ತು. ಭಾರತ ಉಪಖಂಡದಿಂದ ಬ್ರಿಟಿಷರು ಕಾಲ್ತೆಗೆದ ಮೇಲೆ ಈ ಸಮಸ್ಯೆ ಭಾರತ, ಶ್ರೀಲಂಕಾ ಸರಕಾರಗಳ ತಲೆಗೆ ಕಟ್ಟಿದ ಪ್ರಶ್ನೆಯಾಯಿತು. ಈ ಸಮಸ್ಯೆ ಕುರಿತು ಭಾರತ ಮತ್ತು ಶ್ರೀಲಂಕಾ ಸರಕಾರಗಳು ದೀರ್ಘಕಾಲ ಸಂಧಾನ ನಡೆಸಿದ ನಂತರ ಒಂದು ಒಪ್ಪಂದಕ್ಕೆ ಬಂದುವು. ಅದರಂತೆ ಭಾರತ ಸರಕಾರ ಸಾಕಷ್ಟು ಸಂಖ್ಯೆಯಲ್ಲಿ ತಮಿಳು ವಲಸೆಗಾರರನ್ನು ಹಿಂದಕ್ಕೆ ಕರೆಸಿಕೊಂಡು ನೆಲೆಗೊಳಿಸಿತು. ನಿಗದಿತ ಸಂಖ್ಯೆಯ ತಮಿಳರಿಗೆ ಶ್ರೀಲಂಕಾ ಸರಕಾರ ಪೌರತ್ವ ನೀಡಿತು. ಬ್ರಿಟಿಷ್ ಪೌರತ್ವ ಹೊಂದಿದ್ದ ತಮಿಳರು ಯೂರೋಪಿನ ಬೇರೆ ಬೇರೆ ದೇಶಗಳಿಗೆ ಹೋಗಿ ನೆಲೆಸಿದರು.

ಶ್ರೀಲಂಕಾದಲ್ಲಿ ತಮಿಳರ ಸಮಸ್ಯೆ ತೀವ್ರ ರೂಪದಲ್ಲಿ ಉದ್ಭವಿಸಿದ್ದು ಕಳೆದ ಶತಮಾನದ ಅರವತ್ತರ ದಶಕದಲ್ಲಿ. ಶ್ರೀಲಂಕಾ ಸರಕಾರ ತಮಿಳರ ವಿಚಾರದಲ್ಲಿ ಅನುಸರಿಸಿದ ತಾರತಮ್ಯ ಧೋರಣೆಯೇ ಅದಕ್ಕೆ ಕಾರಣ. ಉದಾಹರಣೆಗೆ ಸಿಂಹಳೀಯರ ಒತ್ತಡಗಳಿಗೆ ಮಣಿದ ಸರಕಾರ ಆಡಳಿತದಲ್ಲಿ ತಮಿಳರಿಗೆ ಪ್ರಾತಿನಿಧ್ಯ ಕಡಿಮೆ ಮಾಡಿತು. ಸರಕಾರಿ ನೌಕರಿಯಲ್ಲಿ ಅವಕಾಶ ಮೊಟಕು ಮಾಡಿತು. ಸಿಂಹಳ ಬಾಷೆಯನ್ನು ಕಡ್ಡಾಯವಾಗಿ ಹೊರಿಸಿತು. ಶ್ರೀಲಂಕಾದಲ್ಲಿ ಸಿಂಹಳ ಮತ್ತು ತಮಿಳು ಭಾಷೆಗೆ ಸಮಾನ ಸ್ಥಾನ ನೀಡಿದ್ದರೂ ಆಡಳಿತದಲ್ಲಿ ಸಿಂಹಳ ಭಾಷೆಗೇ ಪ್ರಾಧಾನ್ಯ ನೀಡಿ, ತಮಿಳರು ತಮಿಳು ಭಾಷೆ ಜೊತೆಗೆ ಸಿಂಹಳ ಕಲಿಯುವುದನ್ನು ಕಡ್ಡಾಯವಾಗಿಸಿದ್ದು ಪ್ರತಿಭಟನಾ ಹೋರಾಟಕ್ಕೆ ನಾಂದಿಯಾಯಿತು. ವಿವಿಧ ತಮಿಳು ಸಂಘಟನೆಗಳು ತಮ್ಮ ಬೇಡಿಕೆಗಳಿಗಾಗಿ ಹೋರಾಟದಲ್ಲಿ ತೊಡಗಿದುವು. ೧೯೭೦ರ ಸುಮಾರಿನಲ್ಲಿ ವೇಲುಪಿಳ್ಳೆ ಪ್ರಭಾಕರನ್ ನೇತೃತ್ವದಲ್ಲಿ ಸ್ಥಾಪನೆಗೊಂಡ ಎಲ್‌ಟಿಟಿಇ ತಮಿಳು ಉಗ್ರಗಾಮಿಗಳನ್ನು ಸಂಘಟಿಸಿ ಸ್ವತಂತ್ರ ತಮಿಳು ರಾಜ್ಯದ ಸ್ಥಾಪನೆಗಾಗಿ ಸಶಸ್ತ್ರ ವಿಮೋಚನಾ ಸಮರವನ್ನು ಪ್ರಾರಂಭಿಸಿತು. ಸರಕಾರೀ ಪಡೆಗಳು ಮತ್ತು ಎಲ್‌ಟಿಟಿಇ ಯೋಧರ ನಡುವಣ ಸುದೀರ್ಘ ಸಂಘರ್ಷದಲ್ಲಿ ಅರ್ಧ ಲಕ್ಷಕ್ಕೂ ಹೆಚ್ಚು ಮಂದಿ ಅಸು ನೀಗಿದ್ದಾರೆ. ಎಲ್‌ಟಿಟಿಇಯ 'ತಮಿಳು ಹುಲಿಗಳು' ಎಂದು ಹೆಸರುಗಳಿಸಿರುವ ಯೋಧರು ತಮಿಳರೇ ಅಧಿಕ ಸಂಖ್ಯೆಯಲ್ಲಿರುವ ಈಶಾನ್ಯ ಪ್ರಾಂತಗಳಲ್ಲಿ ಅಂದರೆ ಜಾಫ್ನಾ, ಕಿಲ್ಲಿನೋಚಿ, ಮುಂತಾದುವನ್ನು ತಮ್ಮ ವಶದಲ್ಲಿರಿಸಿಕೊಂಡಿದ್ದಾರೆ. ಶ್ರೀಲಂಕಾ ಸರಕಾರ ಸಂಧಾನಕ್ಕೆ ನಡೆಸಿದ ಪ್ರಯತ್ನಗಳೆಲ್ಲ ವಿಫಲಗೊಂಡುವು. ಪ್ರತ್ಯೇಕ ತಮಿಳು ರಾಜ್ಯದ ಸ್ಥಾಪನೆಗೆ ಪಟ್ಟು ಹಿಡಿದಿರುವ ಎಲ್‌ಟಿಟಿಇ ಇದುವರೆಗೆ ತನ್ನ ಬಿಗಿ ನಿಲುವನ್ನು ಸಡಿಲಗೊಳಿಸಿಲ್ಲ. ನಿಜವಾದ ಸಂಧಾನಗಳು ಪ್ರಾರಂಭವಾದ್ದು ಈಚೆಗಷ್ಟೆ. ನಾರ್ವೆ ರಾಷ್ಟ್ರದ ಮಧ್ಯಸ್ಥಿಕೆಯಿಂದಾಗಿ ಎರಡು ವರ್ಷದಿಂದ ಕಾಳಗ ನಿಂತು ಎರಡೂ ಕಡೆಗೆ ಅವಶ್ಯವಾಗಿದ್ದ ಯುದ್ಧ ವಿರಾಮ ದೊರೆತಿದೆ. ಮುಂದೆ ಇರುವುದು ಎರಡೇ ಆಯ್ಕೆ: ಒಂದು, ಶ್ರೀಲಂಕಾ ಸರಕಾರ ತನ್ನ ಪ್ರಾದೇಶಿಕ ಸಮಗ್ರತೆ ಬಲಿಕೊಟ್ಟು ಪ್ರತ್ಯೇಕ ತಮಿಳು ರಾಜ್ಯ ಸ್ಥಾಪನೆಗೆ ಒಪ್ಪುವುದು; ಇಲ್ಲವೇ ಎಲ್‌ಟಿಟಿಇಯೊಂದಿಗೆ ಯುದ್ಧ ಮುಂದುವರಿಸುವುದು. ಎರಡೂ ಆಪತ್ಕಾರಿಯೆ.

ಭಾರತ ಸರಕಾರ ಶ್ರೀಲಂಕಾದ ಬೆಳವಣಿಗೆಗಳ ಬಗ್ಗೆ ಮೊದಲಿನಿಂದಲೂ ಒಂದು ಬಗೆಯ ತಾಟಸ್ಥ್ಯ ಧೋರಣೆ ತಳೆದಿದೆ. ತಮಿಳರ ಪ್ರಶ್ನೆಯನ್ನು ಶ್ರೀಲಂಕಾದ ಆಂತರಿಕ ಪ್ರಶ್ನೆಯಾಗಿ ಪರಿಗಣಿಸಿದೆ. ರಾಜೀವ ಗಾಂಧಿ ಪ್ರಧಾನಿಯಾಗಿದ್ದಾಗ ಶ್ರೀಲಂಕಾದ ಸರಕಾರದ ಕೋರಿಕೆ ಮನ್ನಿಸಿ ಶಾಂತಿಸ್ಥಾಪನೆಗಾಗಿ ಭಾರತದ ಸೇನೆ ರವಾನಿಸಿದ್ದು ಬಿಟ್ಟರೆ ಬೇರಾವ ರೀತಿಯಲ್ಲೂ ಮಧ್ಯೆ ಪ್ರವೇಶಿಸಿರಲಿಲ್ಲ. ಭಾರತದ ಮಟ್ಟಿಗೆ ಈ ಕ್ರಮ ಒಂದು ದುಸ್ಸಾಹಸವೇ ಆಗಿ ಪರಿಣಮಿಸಿತು; ಸಾಕಷ್ಟು ಬೆಲೆ ತೆತ್ತದ್ದೂ ಆಯಿತು. ಇದರಿಂದ ಭಾರತಕ್ಕಾಗಲಿ, ಶ್ರೀಲಂಕಾಕ್ಕಾಗಲಿ ಪ್ರಯೋಜನವೇನಾಗಲಿಲ್ಲ. ಪ್ರಧಾನಿ ರಾಜೀವ ಗಾಂಧಿ ಹಾಗೂ ಇತರ ಹಲವರು ಎಲ್‌ಟಿಟಿಇ ಆತ್ಮಾಹುತಿ ತಂಡದ ದಾಳಿಗಳಿಗೆ ಬಲಿಯಾಗಿರುವುದು ಮರೆಯುವ ಸಂಗತಿ ಏನಲ್ಲ. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ಎಲ್‌ಟಿಟಿಇ ನಿಷೇಧಿತವಾಗಿರುವ ಭಯೋತ್ಪಾದಕ ಸಂಘಟನೆ. ಅದರ ನಾಯಕ ಪ್ರಭಾಕರನ್ ಕೊಲೆ, ಭಯೋತ್ಪಾದನೆ ಆಪಾದನೆ ಮೇಲೆ ಭಾರತದಲ್ಲಿ ವಿಚಾರಣೆಗೆ ಒಳಗಾಗಬೇಕಾಗಿರುವ ವ್ಯಕ್ತಿ. ಇವೆಲ್ಲವನ್ನೂ ಗಮನದಲ್ಲಿರಿಸಿಕೊಂಡು ಭಾರತ ಸರಕಾರ ತನ್ನ ನಿಲುವನ್ನು ರೂಪಿಸಬೇಕಾಗಿದೆ. ಮೇಲ್ನೋಟಕ್ಕೆ ಶ್ರೀಲಂಕಾದ ಬೆಳವಣಿಗೆಗಳ ಬಗ್ಗೆ ತಾಟಸ್ಥ್ಯ ಧೋರಣೆ ಸರಿ ಎನಿಸಿದರೂ, ಅದರ ಬಿಸಿ ಭಾರತಕ್ಕೆ ತಟ್ಟದಿರದು. ಪಕ್ಷೆ ಯಾವ ತಿರುವು ತೆಗೆದುಕೊಂಡರೂ ಭಾರತಕ್ಕೆ ಕಳವಳಕಾರಿಯೇ.

— ಟೀಯಾರ್ಕೆ

# ಜೀವಿ ಕಂಡ ಅಮೇರಿಕಾ




ಇತ್ತೀಚೆಗೆ 'ಜೀವಿ ಕಂಡ ಅಮೇರಿಕಾ' ಹೊರಬಂದಿದೆ. ಅಮೇರಿಕಾದ ಟೆಕ್ಸಾಸ್ ರಾಜ್ಯದ ಹ್ಯೂಸ್ಟನ್ ನಗರದಲ್ಲಿ ಸಪ್ಟೆಂಬರ್ ೧, ೨, ೩ (೨೦೦೨)ರಂದು ಜರುಗಿದ ಸಹಸ್ರಮಾನ ವಿಶ್ವ ಕನ್ನಡ ಸಮ್ಮೇಳನದಲ್ಲಿ ಭಾಗವಹಿಸುವ ಸುಯೋಗ ದೊರೆತಾಗ, ಡಾ॥ ಗೋಕಾಕರಂತೆ ತಾವೂ ಒಂದು ಪುಸ್ತಕ ಬರೆಯಲೇಬೇಕೆಂಬ ಯೋಜನೆ ಹಾಕಿಕೊಂಡು ಅಮೇರಿಕಾಗೆ ತೆರಳುತ್ತಾರೆ. ಅವರ ಯೋಜನೆಯಂತೆ ಮುಂಬಯಿಯ 'ಕನ್ನಡ ಮಲ್ಲ' ಪತ್ರಿಕೆಯ ಅಂಕಣ (ಜೀವನ ಮತ್ತು ಸಾಹಿತ್ಯ)ದಲ್ಲಿ ಮೂಡಿಬಂದ ೪೮ ಪ್ರವಾಸ ಲೇಖನಗಳು ಇದೀಗ ಸಂಗ್ರಹಗೊಂಡು ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ.

ವರಕವಿ ಬೇಂದ್ರೆ ಮತ್ತು ಡಾ॥ ವಿ. ಕೃ. ಗೋಕಾಕರ ಪ್ರಿಯ ಶಿಷ್ಯರೆನಿಸಿದ ಡಾ॥ ಜೀವಿ ಕುಲಕರ್ಣಿಯವರು ಈಗಾಗಲೇ ಈ ಮಹಾನ್ ಕವಿಗಳ ಜೀವನ ಹಾಗೂ ಕಾವ್ಯ ಕುರಿತು ರಸಮಯವಾದ ಗ್ರಂಥಗಳನ್ನು ರಚಿಸಿ ಕನ್ನಡಿಗರ ಪ್ರೀತಿ-ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ಇಂಗ್ಲಿಷ್, ಕನ್ನಡ, ಸಂಸ್ಕೃತ ಭಾಷೆ ಗಳಲ್ಲಿ ಪರಿಣತಿ ಹೊಂದಿರುವ ಡಾ॥ ಜೀವಿ ಯವರು ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದ ಮೇಲೆ ತಮ್ಮನ್ನು ಸಾಹಿತ್ಯ ಸಾಧನೆಯಲ್ಲಿ ಅನನ್ಯವಾಗಿ ತೊಡಗಿಸಿ ಕೊಂಡವರು. ಜೀವಿ ನಾಟಕಗಳನ್ನು ಬರೆದಿದ್ದಾರೆ. ಸಮ ಕಾಲೀನ ಬದುಕಿಗೆ ಸ್ಪಂದಿಸುವ ಹಿತವಚನಗಳನ್ನು ರಚಿಸಿದ್ದಾರೆ.

ಇತ್ತೀಚಿಗೆ 'ಜೀವಿ ಕಂಡ ಅಮೇರಿಕಾ' ಹೊರ ಬಂದಿದೆ. ಅಮೇರಿಕಾದ ಟೆಕ್ಸಾಸ್ ರಾಜ್ಯದ ಹ್ಯೂಸ್ಟನ್ ನಗರದಲ್ಲಿ ಸಪ್ಟೆಂಬರ್ ೧, ೨, ೩ (೨೦೦೨)ರಂದು ಜರುಗಿದ ಸಹಸ್ರಮಾನ ವಿಶ್ವ ಕನ್ನಡ ಸಮ್ಮೇಳನದಲ್ಲಿ ಭಾಗವಹಿಸುವ ಸುಯೋಗ ದೊರೆತಾಗ, ಡಾ॥ ಗೋಕಾಕರಂತೆ ತಾವೂ ಒಂದು ಪುಸ್ತಕ ಬರೆಯಲೇಬೇಕೆಂಬ ಯೋಜನೆ ಹಾಕಿಕೊಂಡು ಅಮೇರಿಕಾಗೆ ತೆರಳುತ್ತಾರೆ. ಅವರ ಯೋಜನೆಯಂತೆ ಮುಂಬಯಿಯ 'ಕನ್ನಡ ಮಲ್ಲ' ಪತ್ರಿಕೆಯ ಅಂಕಣ (ಜೀವನ ಮತ್ತು ಸಾಹಿತ್ಯ)ದಲ್ಲಿ ಮೂಡಿಬಂದ ೪೮ ಪ್ರವಾಸ ಲೇಖನಗಳು ಇದೀಗ ಸಂಗ್ರಹಗೊಂಡು ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ.

ಪ್ರವಾಸ ಸಾಹಿತ್ಯ ಕನ್ನಡದಲ್ಲಿ ಸಮೃದ್ಧವಾಗಿ ಬೆಳೆಯುತ್ತಲಿದೆ. ವಿದೇಶ ಪ್ರವಾಸ ಕಥನಗಳಲ್ಲಿ ಅಮೇರಿಕಾ ಪ್ರವಾಸ ಕಥನಗಳ ಸಂಖ್ಯೆಯೇ ಹೆಚ್ಚು. 'ಜೀವಿ ಕಂಡ ಅಮೇರಿಕಾ'ಕ್ಕೆ ಮುನ್ನುಡಿ ಬರೆದಿರುವ ಎಸ್. ಕೆ. ಹರಿಹರೇಶ್ವರರು ಅಮೇರಿಕಾ ಪ್ರವಾಸ ಕಥನಗಳ ಮಾಹಿತಿಯನ್ನು ಕೊಟ್ಟಿದ್ದಾರೆ. ಈ ಪ್ರವಾಸ ಕಥನಗಳು ಲೇಖಕರ ಉದ್ದೇಶ, ಅವರಿಗೆ ದೊರೆತ ಪ್ರೇರಣೆ, ಅವಕಾಶ ಕಾಲಾವಧಿ ಮತ್ತು ಮುಖ್ಯವಾಗಿ ಅವರ ಜೀವನ ದೃಷ್ಟಿಯನ್ನು ಓದುಗರ ಅನುಭವಕ್ಕೆ ತಂದುಕೊಡುತ್ತದೆ.

ಎರಡು ಸಲ ವಿದೇಶ ಪ್ರವಾಸ ಯೋಗವನ್ನು ತಪ್ಪಿಸಿ ಕೊಂಡ ಜೀವಿ ಅಮೇರಿಕಾಗೆ ಹೋಗಲು ಹಾತೊರೆಯುತ್ತಿದ್ದರು. ಅವರ ಹಿರಿಯ ಮಗ-ಸೊಸೆ ಅಮೇರಿಕೆಯಲ್ಲಿಯೇ ನೆಲೆಸಿದ್ದಾರೆ. ಐದು ವರ್ಷಗಳ ಹಿಂದೆಯೇ ಪಾಸ್ ಪೋರ್ಟ್ ಲಭ್ಯವಿದ್ದರೂ ಪ್ರವಾಸ ಯೋಗ ಅವರಿಗೆ ಲಭಿಸಲಿಲ್ಲ. ಸ್ನೇಹಿತರು ಭೆಟ್ಟಿಯಾದಾಗ 'ಅಮೇರಿಕಾದಿಂದ ಯಾವಾಗ ಬಂದಿರಿ ?' ಎಂದು ಕೇಳಿದಾಗ ಮುಜುಗರ ಪಟ್ಟಿದ್ದರು ಜೀವಿ. ವಸ್ತುಸ್ಥಿತಿ ಹೀಗಿದ್ದಾಗ ಅಮೇರಿಕಾದಲ್ಲಿದ್ದ ಬಂಧುಗಳಿಂದ "ಹ್ಯೂಸ್ಟನ್‌ನಲ್ಲಿ ಸೆಪ್ಟೆಂಬರ್ ೨೦೦೨ರಲ್ಲಿ ನಡೆಯುವ ವಿಶ್ವಕನ್ನಡ ಸಮ್ಮೇಳನದಲ್ಲಿ ಭಾಗವಹಿಸಲು ಆಮಂತ್ರಣ ನಿಮಗೆ ಬರುವುದಿದೆ" ಎಂಬ ಸೂಚನೆ ಸಿಕ್ಕಾಗ ಜೀವಿ ಅವರಿಗೆ ಹಿಗ್ಗು. 'ಇಂಟರ್‌ನೆಟ್ ವೆಬ್ ಪೇಜ್'ನಲ್ಲಿ ವಿಶ್ವ ಕನ್ನಡ ಸಮ್ಮೇಳನದ ವಿವರಗಳಲ್ಲಿ ತಮ್ಮ ಹೆಸರನ್ನು ಕಂಡಾಗ ಖುಷಿಯೋ ಖುಷಿ. ಜೀವಿಯವರಿಗೆ ಬಾಲ್ಯ ಮಿತ್ರ ಪಂ॥ ಮಾಧವ ಗುಡಿಯವರೂ ಆ ಸಮ್ಮೇಳನದಲ್ಲಿ ಭಾಗಿಯಾಗುತ್ತಿರುವುದು ಹೆಚ್ಚಿನ ಸಂತೋಷವನ್ನುಂಟುಮಾಡಿತು.

ಶ್ರಾವಣ ಶುಕ್ರವಾರ ದ್ವಾದಶಿ. ಮನೆಯಲ್ಲಿ ಪೂಜೆ ಮುಗಿಸಿ ವೀಸಾ ಪಡೆಯಲು ಹೋಗುವ ಗಡಿಬಿಡಿ. ತಮ್ಮ 'ಮ್ಯೂಸಿಂಗ್ಸ್' ಕವನ ಸಂಕಲನವನ್ನು ಕಾರ್ಯಾಲಯದಲ್ಲಿ ತೋರಿಸಿ ಮೆಚ್ಚಿಸಿ ವೀಸಾ ಪಡೆದ ಸಂಗತಿಯನ್ನು ಲೇಖಕರು ರೋಚಕವಾಗಿ ನಿರೂಪಿಸಿದ್ದಾರೆ.

ಸುರಿವ ಮಳೆ, ಟ್ರಾಫಿಕ್ ಜಾಮ್ ಆಗಿ ವಿಮಾನ ನಿಲ್ದಾಣ ತಲುಪಿ 'ಚೆಕ್-ಇನ್', 'ಕಸ್ಟಂ-ಕ್ಲಿಯರೆನ್ಸ್' ಆದ ಮೇಲೆ ಉಚ್ಚ ಶಿಕ್ಷಣ ಪಡೆಯಲು ಹೊರಟ ತರುಣನ ಪರಿಚಯವಾಗಿ 'ಜೀವಿ' ಅಮೇರಿಕೆಗೆ ಕಾಲಿಡುತ್ತಾರೆ. ಇಲ್ಲಿಂದ ಅವರ ಅಮೇರಿಕಾ ಅನುಭವ ಮೊದಲಾಗುತ್ತದೆ.

ಇಟಲಿಯ ವಿಮಾನ ನಿಲ್ದಾಣದಲ್ಲಿಳಿದು ನಾರ್ಥ್ ವೆಸ್ಟ್ ಏರ್‌ಲೈನ್ಸ್ ಹಿಡಿದು ಡೆಟ್ರಾಯಿಟ್ ತಲುಪಿ, ಅಲ್ಲಿಂದ ತಮ್ಮ ಮಗನಿಗೆ ದೂರವಾಣಿಯ ಮೂಲಕ ತಿಳಿಸಿದರು. ಇಮಿ ಗ್ರೇಶನ್ ಕೌಂಟರಿನಲ್ಲಿ ಇವರನ್ನು ನೋಡಿದ ಅಧಿಕಾರಿಗಳು ಸಭ್ಯಗೃಹಸ್ಥ ಎಂದು ಬ್ಯಾಗ್ ಚೆಕ್ ಮಾಡದೇ ತೋರಿಸಿದ ಅತೀವ ಸೌಜನ್ಯವನ್ನು ಜೀವಿ ನೆನೆಯುತ್ತಾರೆ.

ಡಲ್ಲಾಸ್‌ನಲ್ಲಿ ಆಪ್ತ ಬಂಧುಗಳಾದ ಡಾ॥ ಪದ್ಮಾಕರ ಅವರ ಶ್ರೀಮತಿ ಸುಮಾ ಅವರು ಭಾರತೀಯ ಸಂಪ್ರದಾಯದಂತೆ ನಮಸ್ಕರಿಸಿ ಸ್ವಾಗತಿಸಿದಾಗ ಅಮೇರಿಕಾ ದಲ್ಲಿರುವ ಬಂಧು-ಭಗಿನಿಯರ ಬಗೆಗೆ ಓದುಗರ ಮನದಲ್ಲೂ ಆದರದ ಭಾವನೆ ಮೂಡುವುದು. ಅಲ್ಲಿ ನೆಲೆಸಿರುವ ಬಂಧು-ಬಳಗದವರೆಲ್ಲ ಅವರ ಮನೆಗೆ ಬಂದು ಭೇಟಿಯಾದಾಗ ಆಗುವ ಸಂತೋಷ ಅಪೂರ್ವ. ಎಲ್ಲರಿಗೂ ಯೋಗ ಕಲಿಯಲೇಬೇಕೆಂದು ಯೋಗಜೀವಿ 'ಕಂಡೀಶನ್' ಹಾಕುತ್ತಾರೆ.

**ಡಾ॥ ಮಂದಾಕಿನಿ ಪುರೋಹಿತ**

ನಂತರ ಹ್ಯೂಸ್ಟನ್ ಸಮ್ಮೇಳನಕ್ಕೆ ಜೀವಿ ಅವರ ಸಿದ್ಧತೆ. 'ಸಮ್ಮೇಳನದಲ್ಲಿ ಮೊದಲ ದಿನ' ಈ ಲೇಖನದಲ್ಲಿ ಜೀವಿ ಟೆಕ್ಸಾಸಿನ ಹ್ಯೂಸ್ಟನ್, ಸ್ಯಾನ್ ಅಂಟೋನಿಯೋ, ಡಲ್ಲಾಸ್ ಹಾಗೂ ಆಸ್ಟಿನ್ನಿನ ಕನ್ನಡಿಗರು 'ಅಕ್ಕ' ಎಂಬ ಕನ್ನಡ ಒಕ್ಕೂಟದ ಆಶ್ರಯದಲ್ಲಿ ನಡೆಸಿದ ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಜರುಗಿದ ಹಿನ್ನೆಲೆಯನ್ನು ವಿವರಿಸಿದ್ದಾರೆ.

೧೯೮೮ರಲ್ಲಿ ಅರಿಝೋನಾದಲ್ಲಿ ಜರುಗಿದ ಕನ್ನಡ ಸಮ್ಮೇಳನದಲ್ಲಿ ಅಂದು ಅಧ್ಯಕ್ಷತೆ ವಹಿಸಿದ್ದ ಶ್ರೀ ಜಯರಾಮ ನಾಡಿಗರು ವಿಶ್ವ ಕನ್ನಡ ಸಮ್ಮೇಳನ ನಡೆಸಲು ಘೋಷಿಸಿದ್ದು, ಕಾರ್ಯದರ್ಶಿ ಸುಬ್ಬಿ ಸುಬ್ರಮ್ಮಣ್ಯ ಅವರ ಧೈರ್ಯ, ಸಾಹಸದೊಂದಿಗೆ ರೂಪುರೇಷೆ, ಯೋಜನೆಗಳು ಕೈಗೂಡಿ ಅಭೂತಪೂರ್ವವಾಗಿ ಸಮ್ಮೇಳನ ನೆರವೇರಿದ್ದನ್ನು ಜೀವಿ ಅಭಿಮಾನದಿಂದ ವಿವರಿಸಿದ್ದಾರೆ. ಕನ್ನಡಿಗರ ನುಡಿ ಪ್ರೇಮ ಮರೆಯಲಾರದಂತಿದೆ.

ಗಾನ ವಿದುಷಿ ಸಂಗೀತಾ ಕಟ್ಟಿ, ಪಂ॥ ಮಾಧವ ಗುಡಿ ಜೀವಿಯವರೊಂದಿಗೆ ಸಮ್ಮೇಳನದಲ್ಲಿ ಭಾಗ ವಹಿಸಿದ್ದಾರೆ. ಕರ್ನಾಟಕದ ಜಾನಪದ ಕಲಾವಿದರೂ, ಅಮೇರಿಕೆಯ ಕನ್ನಡಿಗರೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಜೀವಿಯವರಿಗೆ ಅಪಾರ ಕನ್ನಡ ಬಂಧುಗಳು ಪರಿಚಿತರಾಗುತ್ತಾರೆ. ಅವರೆಲ್ಲ ಯೋಗ ತರಬೇತಿ ಪಡೆದಿದ್ದಾರೆ. ಈ ವಿಶ್ವ ಸಮ್ಮೇಳನಕ್ಕೆ ಅತಿಥಿ ಯಾಗಿ ಆಗಮಿಸಿದ್ದ ಡಾ॥ ಯು. ಆರ್. ಅನಂತಮೂರ್ತಿ ಮತ್ತು ಗಿರೀಶ್ ಕಾರ್ನಾಡರ ಭಾಷಣಗಳನ್ನು ಲೇಖಕ ಜೀವಿ ಯಥಾವತ್ತಾಗಿ ದಾಖಲಿಸಿದ್ದಾರೆ. ಜೀವಿ ಓದಿದ 'ಪ್ರಣಯ ಕಾಗುಣಿತ' ಚಿತ್ರ ಕವಿತ್ವದಿಂದ, ಚಮತ್ಕಾರ ದಿಂದ ಮನ ಸೆಳೆಯುತ್ತದೆ.

೧೯೫೮ರಲ್ಲಿ ಅಮೇರಿಕಾ ಪ್ರವಾಸ ಕೈಗೊಂಡ

ಡಾ|| ಗೋಕಾಕರು ದಿನಕ್ಕೊಂದು ಕವಿತೆ ಬರೆದಿದ್ದರಂತೆ. ತಾವು ತಿಂಗಳಿಗೊಂದಾದರೂ ಕವಿತೆ ಬರೆಯ ಬೇಕೆಂದು ಜೀವಿ ಹಂಬಲಿಸಿದ್ದಾರೆ. 'ಅಮೇರಿಕನ್ನಡಿಗರ' ಕನ್ನಡ ಪ್ರೇಮ, ಕನ್ನಡ ಪರಂಪರೆಯ ಬಗೆಗೆ ಇರುವ ಅಭಿಮಾನ ದಿಂದ ಸ್ಫೂರ್ತಿ ಬಂದು ಜೀವಿ 'ಅಮೇರಿಕೆಯಲ್ಲಿ ಕನ್ನಡಿಗ' ಎಂಬ ನೀಳ್ಗವನವನ್ನು ರಚಿಸಿದ್ದಾರೆ. ಅವರ ಪದ್ಯಗಳನ್ನು ಮೆಚ್ಚಿಕೊಂಡ ರಸಿಕರಿಂದ, ವಿವಿಧ ಕನ್ನಡ ಸಂಘಗಳಿಂದ ಭಾಷಣಕ್ಕೆ ಆಮಂತ್ರಣ ಪ್ರಾರಂಭವಾಗುತ್ತವೆ. ವಿಶ್ವ ಸಮ್ಮೇಳನದ ಪ್ರತ್ಯಕ್ಷ ವರದಿ ಈ ಪ್ರವಾಸ ಕಥನದ ಮಹತ್ವದ ಭಾಗ. ಸಮ್ಮೇಳನದಲ್ಲಿ ಜೀವಿಯವರಿಗೆ ಬೇಂದ್ರೆ, ಗೋಕಾಕರು ಪ್ರತಿಕ್ಷಣಕ್ಕೂ ನೆನಪಾಗುತ್ತಾರೆ. ಕಾವ್ಯ ಓದುವಾಗ 'ಕವಿ ಸಮ್ಮೇಳನದಲ್ಲಿ ಬರಿ ಹಳೆಯ ಕವಿತೆ ಓದಬೇಡಿರಿ, ಹೊಸ ಕವಿತೆ ವಾಚಿಸಿರಿ' ಎಂದು ಕಾಂತೆ 'ಕಲಾ' ಅವರ 'ಸಮ್ಮತಿ'ಯೂ ಜೀವಿ ಅವರಿಗೆ ನೆನಪಾಗದೇ ಇರದು!

ಈ ಸಮ್ಮೇಳನದ ಸ್ಮರಣ ಸಂಚಿಕೆಯ ಲೇಖನ ಗಳನ್ನು ಜೀವಿಯವರು ಪರಿಚಯಿಸಿದ್ದು ಸ್ತುತ್ಯವಾಗಿದೆ. ಅಮೇರಿಕೆಯ ಕನ್ನಡ ಸಂಘ-ಸಂಸ್ಥೆಗಳ ಪರಿಚಯ ಈ ಲೇಖನಗಳಿಂದಾಗುತ್ತದೆ.

ಡಾ|| ಪದ್ಮಾಕರ ತಮಗೆ ಪಿಟ್ಸ್‌ಬರ್ಗ್ ಮತ್ತು ನಯಾಗರಾ ಜಲಪಾತ ತೋರಿಸಲು ನಿರ್ಧರಿಸಿ, ಸಂಗೀತಾ ಕಟ್ಟಿ, ಗಣೇಶ ದೇಸಾಯಿಯವರನ್ನು ಇವರಿಗೆ ತಿಳಿಯದಂತೆ ಆಮಂತ್ರಿಸಿ ಭೇಟಿ ಮಾಡಿಸಿದಾಗ ಆಶ್ಚರ್ಯ ಪಟ್ಟಿದ್ದಾರೆ. ಶ್ರೀ ಪದ್ಮಾಕರ ಅವರ ಮುಂದಾಲೋಚನೆ, ಕಾರ್ಯ ಯೋಜನೆಗಳನ್ನು ಮೆಚ್ಚಿದ್ದಾರೆ. ಪದ್ಮಾಕರ ಅವರ ಮಗಳು ಬೃಂದಾ ಮತ್ತು ಅಮೇರಿಕಾ ಕನ್ನಡಿಗ ಧಾರವಾಡ ಡಾ|| ಯಶವಂತ ನವಲಗುಂದ ಅವರ ವಿವಾಹ ಯೋಗಾ-ಯೋಗವೆಂಬಂತೆ ನಡೆಯಿತೆಂಬುದನ್ನು ನಿರೂಪಿಸಿದ್ದಾರೆ.

ಡಾ|| ವಸಂತ ಪ್ರಭು ಅವರ ಭೇಟಿ ಜೀವಿಯ ವರಿಗೆ ಹಳೆಯ ನೆನಪುಗಳನ್ನು ತಂದುಕೊಟ್ಟಿದೆ. ವಸಂತ




ಅವರ ದೇಶಾಭಿಮಾನ, ಸರಳ ಸ್ವಭಾವ ಮೆಚ್ಚುಗೆ ಮೂಡಿಸುತ್ತದೆ.

ಡಲ್ಲಾಸ್‌ನಲ್ಲಿರುವ ಬೆಂಗಳೂರಿನ ನೃತ್ಯ ವಿಶಾರದೆ ಡಾ|| ರೇವತಿ ಸತ್ಯಂ ಅವರ ಭೇಟಿ ಜೀವಿಯವರಿಗೆ ಒಂದು ಸುಯೋಗ. ಅವರನ್ನು ಸಂದರ್ಶಿಸಿ, ಚರ್ಚಿಸಿ ಲೇಖನ ಬರೆದಿದ್ದಾರೆ. ಅವರ ಆದರಾತಿಥ್ಯ ಪಡೆದಿದ್ದಾರೆ. 'ಟೆರಿಲ್' ನಲ್ಲಿರುವ ಸುಂದರ ಪ್ರದೇಶವನ್ನು ಭಾವುಕರಾಗಿ ಕಂಡಿದ್ದಾರೆ.

ಡಾ|| ಸತ್ಯಂ ಅವರಿಗೆ, "ನೀವೇಕೆ ಭಾರತಕ್ಕೆ ಮರಳಲಿಲ್ಲ?" ಎಂದಾಗ "ನೀವು ಏನೇ ಅನ್ನಿರಿ. ಮೊದ ಮೊದಲು ಭಾರತಕ್ಕೆ ಮರಳಬೇಕು ಅನ್ನಿಸುತ್ತಿತ್ತು. ಈಗ ಅನ್ನಿಸುತ್ತಿಲ್ಲ. ನಾವಿಲ್ಲಿ ಸುಖಿಯಾಗಿದ್ದೇವೆ. ನಮ್ಮ ಸುತ್ತಲೂ ಭಾರತದ ಸಾಂಸ್ಕೃತಿಕ ವಾತಾವರಣವನ್ನು ಸೃಷ್ಟಿ ಮಾಡಿಕೊಂಡಿದ್ದೇವೆ" ಎಂದಾಗ ಅವರ ಸಾಂಸ್ಕೃತಿಕ ಪ್ರೇಮಕ್ಕೆ ಜೀವಿ ನಿರುತ್ತರರಾಗಿದ್ದಾರೆ!

ಅಮೇರಿಕ ಮಧ್ಯದಲ್ಲಿರುವ ಮಿನಿಯಾಪೊಲಿಸ್‌ನಲ್ಲಿ ಜೀವಿಯವರು ಒಂದು ತಿಂಗಳು ಹದಿನಾಲ್ಕು ದಿನವಿದ್ದು ಡಲಾಸ್, ಹ್ಯೂಸ್ಟನ್, ಪೂರ್ವದ ಶಿಕಾಗೋ ಮತ್ತು ಪಶ್ಚಿಮ ಸಾಗರದ ಅಂಚಿನಲ್ಲಿರುವ ಉತ್ತರ ಕೆನಡಾಗಳಿಗೆ ಭೇಟಿ ಇತ್ತಿದ್ದಾರೆ.

ಮಿನಿಯಾಪೊಲಿಸ್‌ನಲ್ಲಿ ನೆಲೆಸಿರುವ ಮಗ-ಸೊಸೆ ಮೊಮ್ಮಕ್ಕಳೊಂದಿಗೆ ಆನಂದದ ಕ್ಷಣಗಳನ್ನು ಕಳೆದಿದ್ದಾರೆ. 'ಇನ್‌ಫಾರ್ಮೇಶನ್ ಟೆಕ್ನಾಲಜಿ' ಪರಿಣತ ಸೊಸೆ ಅಚ್ಚು ಕಟ್ಟಾಗಿ ಅಡುಗೆ ಮಾಡಿಟ್ಟು ನೌಕರಿಯನ್ನು ಮಾಡಿ "ಭಾರತೀಯ ಗೃಹಿಣಿ"ಯಾಗಿರುವುದನ್ನು ತುಂಬು ಮನ ದಿಂದ ಮೆಚ್ಚಿದ್ದಾರೆ.

ಮನೆಯಲ್ಲಿ ಬಿಡುವಿನ ವೇಳೆಯಲ್ಲಿ ಜೀವಿ ಸುಮ್ಮನೆ ಕೂಡುವವರಲ್ಲ. ತಮ್ಮ ಲೇಖನಗಳನ್ನು ಕಂಪ್ಯೂಟರ್ ನಲ್ಲಿ ಟೈಪ್ ಮಾಡಿ, 'ಕನ್ನಡ ಮಲ್ಲ'ಕ್ಕೆ ಮೇಲ್ ಕಳಿಸಿದ್ದಾರೆ.

ಮಕ್ಕಳೊಂದಿಗೆ 'ಫಾಲ್ ಸೀಝುನ್', ಮತ್ತು 'ಲೇಕ್ ಸುಪೀರಿಯರ್' ನೋಡಿ, ಅಲ್ಲಿಯ ಸೌಂದರ್ಯಕ್ಕೆ ಬೆರಗಾಗಿದ್ದಾರೆ.

ಮಿನಿಯಾಪೊಲಿಸ್‌ನಲ್ಲಿ ಜೀವಿ ಬರೆದ 'ಕ್ಷೇತ್ರ-ಕ್ಷೇತ್ರಜ್ಞ' ಆಧ್ಯಾತ್ಮಿಕ ದರ್ಶನ ಪಡೆದ ಕಾವ್ಯವಾಗಿದೆ. ಕವಿ ಜೀವಿಯವರ ಕಾವ್ಯ ಪ್ರತಿಭೆ ಇಲ್ಲಿ ಹೊಳೆಯುತ್ತದೆ.

ಅಮೇರಿಕಾದ ಕನ್ನಡ ಕೂಟಗಳಲ್ಲಿ ಇವರು ಮಾಡಿದ ಉಪನ್ಯಾಸಗಳ ಮುಖ್ಯ ವಿಷಯ ಬೇಂದ್ರೆ ಕಾವ್ಯ ಮತ್ತು ಯೋಗ ಎಂದು ಬೇರೆ ಹೇಳಬೇಕಾಗಿಲ್ಲ.

ಪೆಬಲ್-ಬೀಚ್, ನಯಾಗರಾ ಜಲಪಾತಗಳ ವರ್ಣನೆ ಮಿಂಚುವ ಸೆರಗಿನಂತೆ ಪ್ರವಾಸ ಕಥನದಲ್ಲಿ ನೇಯಲ್ಪಟ್ಟಿದೆ.

"ಮುಂಬಯಿ ಕನ್ನಡಿಗರ ಕಾರ್ಯಕ್ರಮ ಕಂಡು ಒಳ ನಾಡಿನ ಕನ್ನಡಿಗರು ಆಚ್ಚರಿ ಪಡುವಂತೆ ನಾನೂ ಇಲ್ಲಿಯ ಜನರ ಕನ್ನಡಾಭಿಮಾನ ಕಂಡು ಅಚ್ಚರಿ ಪಟ್ಟಿದ್ದೇನೆ. ನಾವು ನಮ್ಮ ತಾಯ್ನೆಲದಿಂದ ದೂರ ಹೋದಂತೆ ನಮ್ಮ ಪ್ರೀತಿ ಕೂಡ ಹೆಚ್ಚಾಗುತ್ತದೆ" ಎಂದು ಜೀವಿ ಅಮೇರಿಕೆಯಲ್ಲಿ ಇರುವ ಕನ್ನಡಿಗರ ಅಭಿಮಾನವನ್ನು ಹೃದಯತುಂಬಿ ನೆನೆಸಿದ್ದಾರೆ. (ಪುಟ ೧೬೭)

ಅಮೇರಿಕಾದ ಪ್ರವಾಸ ಜೀವಿಯವರಿಗೆ ಆ ದೇಶ ದಲ್ಲಿರುವ ಕನ್ನಡ ಹೃದಯಗಳನ್ನು ಹತ್ತಿರ ತಂದಿದೆ. ಕನ್ನಡ ಮನಸ್ಸುಗಳನ್ನು ಜೀವಿ ಅರ್ಥಮಾಡಿಕೊಂಡಿದ್ದಾರೆ. ಅವರು ಕರೆದಲ್ಲಿ ಹೋಗಿ ಅಂತಃಕರಣದಿಂದ ಭಾಷಣ ಮಾಡಿದ್ದಾರೆ. ಯೋಗ ತರಬೇತಿ ನೀಡಿದ್ದಾರೆ. ಯೋಗಾ ರಾಧಕ, ಕವಿ ಜೀವಿ 'ಅಮೇರಿಕನ್ನಡಿಗರ' ಪ್ರೀತಿ ಪಾತ್ರರಾಗಿ ಮುಂಬಯಿ ಮಾಯಾನಗರಿಗೆ ಹಿಂತಿರುಗಿದ್ದಾರೆ.

ಜೀವಿ ಈ ಪ್ರವಾಸ ಕಥನದುದ್ದಕ್ಕೂ ಓದುಗರನ್ನು 'ಅಮೇರಿಕನ್ನಡ' ಲೋಕದಲ್ಲಿ ತಮ್ಮೊಡನೆ ವಿಹರಿಸುವಂತೆ ಮಾಡಿದ್ದಾರೆ. ಸರಸ ಹೃದಯದ, ಲವಲವಿಕೆಯ ಬರವಣಿಗೆ ಈ ಪ್ರವಾಸ ಕಥನದ ಜೀವಾಳ. ಸಹೃದಯ ಓದುಗರು ಕವಿ ಜೀವಿ ಕಣ್ಣಿನಿಂದಲೇ ಅಮೇರಿಕೆಯ ದರ್ಶನ ಪಡೆಯಲು ಸಾಧ್ಯವಾಗಿದೆ.

**ಡಾ|| ಮಂದಾಕಿನಿ ಪುರೋಹಿತ**
ಹೈವೇ-ಫೋನ್ಸ್ ಪಿ.ಬಿ. ರಸ್ತೆ ಹುಬ್ಬಳ್ಳಿ ಟೋಲ್
ನಾಕಾದ ಹತ್ತಿರ, ಧಾರವಾಡ - ೫೮೦ ೦೦೪




ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನ ಯಶಸ್ವಿಯಾಗಿ ಮುಂದುವರಿಯುತ್ತಿದ್ದು, ತಾ ೩-೧೧-೦೩ರಂದು ಬೆಂಗಳೂರಿನ ಮಿಂಟೋ ಕಣ್ಣಾಸ್ಪತ್ರೆಯ ಹೊರರೋಗಿ ವಿಭಾಗದಲ್ಲಿ ವೈದ್ಯಕೀಯ ಅಧೀಕ್ಷಕರಾದ ಡಾ|| ಎ. ಆರ್. ಅರುಣ ಅವರು ಉದ್ಘಾಟಿಸಿದರು.

ಒಳ್ಳೆಯ ಓದು

## ಅದೃಷ್ಟದ ಹುಡುಗಿ (ಕಥಾ ಸಂಕಲನ)

ಬಾಲಸುಬ್ರಹ್ಮಣ್ಯ ಕಂಜರ್ಪಣೆ

ಪುಟ : ೯೮ ಬೆಲೆ : ರೂ. ೫೦

**ಮಾರ್ಗದರ್ಶಿ ಪ್ರಕಾಶನ**, ನಂ. ೩-೧-೪೦, ಕಮರ್ಷಿಯಲ್ ಕಟ್ಟಡ, ಮೊದಲನೆ ಮಹಡಿ, ಬಿಜೈ, ಮಂಗಳೂರು - ೪

ನಾವು ಬದುಕುತ್ತಿರುವ ಇಂದಿನ ಸನ್ನಿವೇಶ – ಅನಿವಾರ್ಯತೆ ಗನುಗುಣವಾಗಿ ನಮ್ಮದಲ್ಲದ ಬಾಳನ್ನು ನಮಗೆ ತಿಳಿಯದೆಯೇ ಬದುಕುತ್ತಿದ್ದೇವೆ. ಕಥೆಗಳ ಮೂಲಕ ಇಲ್ಲಿ ಅನಾವರಣಗೊಂಡ ನೀರಸ ಬದುಕು ನಮಗೆಲ್ಲ ನೇರವಾಗಿ ಸಂಬಂಧಿಸಿದ್ದುದಾಗಿದೆ. ಪರಿಸ್ಥಿತಿಯ ಕೈಗೊಂಬೆಯಾಗಿ ಮನುಷ್ಯ ವರ್ತಿಸುತ್ತಿರುವ ಮತ್ತು ನಡೆದುಹೋಗುವ ಕೆಲ ಘಟನೆಗಳಿಗೆ ಇಲ್ಲಿನ ಕಥೆಗಳಲ್ಲಿ ಉತ್ತರ ಹುಡುಕುವ ಪ್ರಯತ್ನವಿದೆ. ಮುಖ್ಯವಾಗಿ ಅತಿ ನವ್ಯತೆಯ ಯಾವ ಸೋಗೂ ಇಲ್ಲದ ಸುಮಾರು ಮೂವತ್ತು ವರ್ಷಗಳ ಕಾಲಾವಧಿಯಲ್ಲಿ ಕಥಾ ಪಾತ್ರಗಳು ಮಿಂಚಿವೆ.

## ಹೂ ಮನಸ್ಸಿನ ಕಥೆಗಾರ (ಕಥಾ ಸಂಕಲನ)

ಹಂಝು ಮಲಾರ್

ಪುಟ : ೧೩೫ ಬೆಲೆ : ರೂ. ೧೦೦

**ಜಗತ್ ಗ್ರಂಥಮಾಲೆ**, ೨೭೨, ೫ನೇ ಮುಖ್ಯರಸ್ತೆ, ೧ನೇ ಹಂತ, ಪಶ್ಚಿಮ ಕಾರ್ಡ್ ರಸ್ತೆ, ಮಂಜುನಾಥನಗರ, ಬೆಂ - ೧೦

ಎಳವೆಯಲ್ಲೇ ವಯಸ್ಸಿಗೂ ಮೀರಿದ ಸಾಧನೆಗೈದು "ಮೈಲಾಂಜಿ" ಎಂಬ ಬ್ಯಾರಿ ಭಾಷಾ ಪತ್ರಿಕೆಯನ್ನೂ ನಡೆಸುತ್ತ ಕಥೆಗಳನ್ನೂ ಬರೆಯುತ್ತಿರುವ ಹಂಝು ಮಲಾರ್ ತನ್ನ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಾಗ ಸಂತಸವಾಗುತ್ತದೆ. ೨೪ರ ಹರೆಯದ ಹುಡುಗನನ್ನು ಕತೆಗಾರರನ್ನಾಗಿ ಗುರುತಿಸಲು ನಮಗೂ ಹೆಮ್ಮೆಯೆನಿಸುತ್ತದೆ. ನಿರ್ಗತಿಕರ, ಅಸಹಾಯಕರ ಪರವಾಗಿ ದನಿಯೆತ್ತಿರುವ ಈ ಕಥೆಗಳು ಓದಿ ಮರೆಯುವಂಥವಲ್ಲ. ವಿವಿಧ ಬಗೆಯ ಜನರ ಸಂಪರ್ಕದಿಂದ ಸಂಗ್ರಹಿಸಿದ ಮಾಹಿತಿಯಿಂದ ಕಥೆಗಳು ನೈಜವಾಗಿ ಮೂಡಿಬಂದಿವೆ.

## ಚಿಚಿಬಾಬ ಸಹೋದರರು

ಡಿ. ಪಿ. ಸೆನ್‌ಗುಪ್ತ

ಪುಟ : ೩೨ ಬೆಲೆ : ರೂ. ೪೦

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು -೧

ಇದೊಂದು ಮಕ್ಕಳಿಗಾಗಿ ಬರೆದ ನೀತಿಬೋಧಕವಾದ ಚಿಕ್ಕ ಕಥೆ. ಇಬ್ಬರ ಜಗಳದಿಂದ ಮೂರನೆಯವನ ಲಾಭ ಎಂಬುದನ್ನು ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ. ರಾಷ್ಟ್ರ ಮಟ್ಟದಲ್ಲಿ ಇಂಥ ಜಗಳ-ಕಾದಾಟಗಳು ನಡೆಯುತ್ತಿರುವ ಇಂದಿನ ಸಂದರ್ಭ-ಸನ್ನಿವೇಶವನ್ನು ಲೇಖಕರು ಚೆನ್ನಾಗಿ ಬಳಸಿಕೊಂಡು ಎಳೆಯರಿಗೆ ತಿಳಿವಳಿಕೆ ಮೂಡುವಂತೆ ತಿಳಿಹೇಳಿದ್ದಾರೆ. ಕಥೆಗೆ ಪೂರಕವಾಗಿ ಚಿತ್ರಗಳೂ ಕೂಡ ಮಕ್ಕಳ ಮನಸ್ಸನ್ನು ಮುದಗೊಳಿಸುತ್ತವೆ. ಇಲ್ಲೊಂದು ಮಾತು! ಮಕ್ಕಳೇ, ಈ ಕಥೆ ಓದಿ ಇಲ್ಲಿನ ಇಬ್ಬರು ಕಥಾನಾಯಕರು ಗುರುಕ್ – ತುರುಕ್ ಯಾರೆಂದು ಗುರುತಿಸಿ ಹೇಳಬಲ್ಲಿರಾ?

## ಜಯಪ್ರಕಾಶ್ ನಾರಾಯಣ (ಅಪೂರ್ಣ ಕ್ರಾಂತಿಯ ಕಥೆ)

ಡಿ. ಎಸ್. ನಾಗಭೂಷಣ

ಪುಟ : ೨೦೦ ಬೆಲೆ : ರೂ. ೧೦೦

**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ

ಎಪ್ಪತ್ತರ ದಶಕದಲ್ಲಿ ಸಂಪೂರ್ಣ ಕ್ರಾಂತಿಯ ನಿಲುವಿನೊಂದಿಗೆ ನಡೆದ ರಾಜಕೀಯ ಹೋರಾಟಕ್ಕೆ ಪ್ರಮುಖ ಪ್ರೇರಕಶಕ್ತಿ ಜಯಪ್ರಕಾಶ್ ನಾರಾಯಣ್. ಅನೇಕ ದೌರ್ಬಲ್ಯಗಳು ಇಣುಕಿದ್ದರಿಂದ ಅಪೂರ್ಣವಾಗಿ ಉಳಿದ ಅವರ ಹೋರಾಟದ ಮತ್ತು ಬದುಕಿನ ಚಿತ್ರಣ ಈ ಕೃತಿಯಲ್ಲಿ ಸಿಗುತ್ತದೆ. ಇಂಥ ಹೋರಾಟವನ್ನು ದಮನಿಸಲು ತುರ್ತು ಪರಿಸ್ಥಿತಿಯಂಥ ಕರಾಳ ಅಸ್ತ್ರ ನಿಜವಾಗಿಯೂ ಅಗತ್ಯವಾಗಿತ್ತೆ? "ಪ್ರಿಯ ಇಂದಿರಾಜಿ, ದಯವಿಟ್ಟು ನಿಮ್ಮನ್ನು ದೇಶದೊಂದಿಗೆ ಗುರುತಿಸಿಕೊಳ್ಳಬೇಡಿ. ನೀವು ಅಮರರಲ್ಲ; ಆದರೆ ಭಾರತ ಅಮರ." ಸೆರೆಮನೆಯಿಂದ ಜೆ. ಪಿ. ಇಂದಿರಾ ಗಾಂಧಿಗೆ ಬರೆದ ಪತ್ರದಿಂದ ಇದು ಒಂದು ಸಾಲು ಅಷ್ಟೆ!

## ದೇವಬಾಗ (ಕವನಗಳು)

ಚಂದ್ರಶೇಖರ ಪಾಟೀಲ

ಪುಟ : ೮೪ ಬೆಲೆ : ರೂ. ೪೫

**ತನುಮನು ಪ್ರಕಾಶನ**, ತೃಪ್ತಿ, ೪೨, 'ಜಿ' ಬ್ಲಾಕ್, ಮೂರನೇ ತಿರುವು, ರಾಮಕೃಷ್ಣ ನಗರ, ಮೈಸೂರು - ೨೩

ರಾಶಿ ರಾಶಿ ಪದ ಪುಂಜಗಳ ಹಂಗಿಲ್ಲದೆ ಚಿಕ್ಕದಾದ ಕವಿತೆಯ ಮೂಲಕ ಹಿರಿದರ್ಥವನ್ನು ಗ್ರಹಿಸುವಂತೆ ಬರೆಯುವ ಕವಿ ಚಂದ್ರಶೇಖರ ಪಾಟೀಲರ ಚಿಕ್ಕ ಹೆಸರೂ ಚಂಪಾ ಎಂದೇ ಪ್ರಸಿದ್ಧ. ಇದು ಅವರ ಹತ್ತನೆಯ ಕವನ ಸಂಕಲನವಾಗಿದ್ದು ೬೦ಕ್ಕೂ ಮಿಕ್ಕ ಕವಿತೆಗಳಿವೆ. ಚಂಪಾ ವಸ್ತುವಿಗಾಗಿ ತಡಕಾಡುವವರಲ್ಲ. ತಮ್ಮ ಅನುಭವಗಳನ್ನು ಹೊತ್ತು ತಂದು ಭಾವನೆಗಳ ಗೂಟಕ್ಕೆ ಬಿಗಿಯಾಗಿ ಕಟ್ಟಿಹಾಕಿ ತಮ್ಮ ಪರಿಧಿ ಮೀರದಂತೆ ಜೋಪಾನವಾಗಿ ಇರಿಸಬಲ್ಲವರು.

## ನೀರವ ನಿಮಿಷಗಳು (ಆಯ್ದ ಕವಿತೆಗಳು)

ಗುಲ್ಜಾರ್ ಅನು : ಗುರುಮೂರ್ತಿ ಪೆಂಡಕೂರು

ಪುಟ : ೧೦೬ ಬೆಲೆ : ರೂ. ೪೫

**ಯುವಕರ ಸಂಘ (ರಿ)**, ರಾಮನಗರ, ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

ಹಿಂದಿ ಚಲನಚಿತ್ರ ನಿರ್ಮಾಪಕ - ನಿರ್ದೇಶಕ - ಕವಿ ಎಲ್ಲವೂ ಆಗಿರುವ ಗುಲ್ಜಾರ್ ಅಪರೂಪದ ಕನಸುಗಾರ. ಉತ್ತಮ ಅಭಿರುಚಿಯ ಚಿತ್ರಗಳೊಂದಿಗೆ ಮತ್ತೆ ಮತ್ತೆ ಕೇಳಬೇಕೆನಿಸುವ ಕವನಗಳನ್ನೂ ಅವರು ರಚಿಸಿದ್ದಾರೆ. ಉರ್ದುವಿನಲ್ಲಿ ಅವರು ರಚಿಸಿರುವ ಕವನಗಳು ಇಂಗ್ಲಿಷ್‌ಗೆ ಭಾಷಾಂತರಗೊಂಡು ಇದೀಗ ಕನ್ನಡಕ್ಕೆ ಅನುವಾದಿಸಲ್ಪಟ್ಟಿವೆ. ಪ್ರಾಮಾಣಿಕವಾದ ಸ್ವಂತ ಅನುಭವಗಳನ್ನು ಗುಲ್ಜಾರ್ ಇಲ್ಲಿ ದಾಖಲಿಸಿದ್ದಾರೆ. ಅವರ ಚಿತ್ರಗಳಂತೆಯೇ ಕವನಗಳೂ ಸಹಾ ಸಮಾನಸ್ತರದ ಜನರೊಂದಿಗೆ ಸ್ಪಂದಿಸುವಂತಹವು.

## ಎರಡು ಏಕಾಂಕಗಳು

ಜಿ. ಶ್ರೀನಿವಾಸರಾಜು

ಪುಟ : ೫೯ ಬೆಲೆ : ರೂ. ೨೦

**ಸಂಚಯ ಪ್ರಕಾಶನ**, ನಂ. ೧೦೦, ೨ನೇ ಮೈನ್, ೬ನೇ ಬ್ಲಾಕ್, ೩ನೇ ಸ್ಟೇಜ್, ಬನಶಂಕರಿ, ಬೆಂಗಳೂರು - ೮೫

ನಾವು ಮತ್ತು ಅವರ ಸುತ್ತ ಸಮಾಜದ ದೃಷ್ಟಿಕೋನಗಳು ಎಲ್ಲೆಲ್ಲಿ ಹೇಗಿವೆ? ಮತ್ತು ಹಣದೊಂದಿಗೆ ಹಣದ ಸಂಬಂಧ ಎಷ್ಟು ಗಾಢವಾಗಿರುತ್ತದೆ ಎನ್ನುವುದನ್ನು "ಇದು ಕಾರಣ" ನಾಟಕ ಧ್ವನಿಸುತ್ತದೆ. ಯುದ್ಧಗಳನ್ನು ಒಂದು ಸಮಾರಂಭ ಏರ್ಪಡಿಸುವಂತೆ ನೋಡಿಕೊಳ್ಳುವ ಅಧಿಕಾರಿ ವರ್ಗದ ಸುತ್ತ ಹೆಣೆದ ಇನ್ನೊಂದು ನಾಟಕದಲ್ಲಿ ಮನುಷ್ಯರಿಗಿಂತ ಗಡಿಗಳೇ ಪ್ರಾಮುಖ್ಯವೆನ್ನುವ ಕ್ರೂರ ವ್ಯವಸ್ಥೆಯ ಬಿಂಬ ಕಾಣುತ್ತದೆ. ಒಟ್ಟಿನಲ್ಲಿ ಇಂದಿನ ಸಂದರ್ಭಕ್ಕೆ ಹತ್ತಿರವಾದ ಎರಡು ಅಮೂಲ್ಯ ನಾಟಕಗಳನ್ನು ರಚಿಸಿ ನಮ್ಮೆಲ್ಲರ ಗೌರವಕ್ಕೆ ಜಿ. ಶ್ರೀನಿವಾಸರಾಜು ಪಾತ್ರರಾಗುತ್ತಾರೆ.

## ವಸ್ತು (ನಾ. ಮೊಗಸಾಲೆ ಅವರ ಕಾದಂಬರಿಗಳ ಅಧ್ಯಯನ)

ಅರವಿಂದ ಚೊಕ್ಕಾಡಿ

ಪುಟ : ೧೦೪ ಬೆಲೆ : ರೂ. ೪೮

**ಕರ್ನಾಟಕ ಸಂಘ**, ಪುತ್ತೂರು, ದಕ್ಷಿಣ ಕನ್ನಡ - ೫೭೪ ೨೦೨

ಕಾಂತಾವರದಂಥ ಚಿಕ್ಕ ಊರಿನಲ್ಲಿ ಯಶಸ್ವಿ ವೈದ್ಯರಾಗಿರುವಂತೆ ಡಾ|| ನಾ. ಮೊಗಸಾಲೆ ಪ್ರಗತಿಶೀಲ ಧೋರಣೆಯ ಬರಹಗಾರರೂ ಸಂಘಟಕರೂ ಹೌದು. ಇಲ್ಲಿ ಅವರ ಹದಿನಾಲ್ಕು ಕಾದಂಬರಿಗಳ ಕಥಾವಸ್ತುವನ್ನು ಪ್ರತ್ಯೇಕವಾಗಿ ತಳದವರೆಗೂ ಶೋಧಿಸುತ್ತ ವಿಶ್ಲೇಷಣೆ ಮಾಡಿರುವವರು ಯುವ ಬರಹಗಾರ ಅರವಿಂದ ಚೊಕ್ಕಾಡಿ. ವೈವಿಧ್ಯತೆಯಿರುವ ಸಮಾಜದ ಚಿತ್ರಣ ನೀಡುವಾಗ ಲೇಖಕ ತನ್ನ ಸೈದ್ಧಾಂತಿಕ ಧೋರಣೆಗಳನ್ನು ಕೃತಿಯ ಮೂಲಕ ಎಷ್ಟರಮಟ್ಟಿಗೆ ಪ್ರತಿಫಲಿಸಲು ಶಕ್ತನಾಗುತ್ತಾನೆಂಬುದು ಒಟ್ಟಾರೆ ಈ ಕೃತಿಗಳ ವಿಶ್ಲೇಷಣೆಯ ಹಿಂದಿರುವ ಕುತೂಹಲ ಎನ್ನಬಹುದು.

– ಇಂದಿರಾ ಕುಮಾರಿ

'ಉಡುದಾರ', 'ಶಿವದಾರ' ಶಬ್ದಗಳ ಕೊನೆಯಲ್ಲಿ 'ದಾರ' ಎಂಬುದು ಸೇರಿದೆ. ಇದರ ಅರ್ಥ ಎಲ್ಲರಿಗೂ ತಿಳಿದಿರುವಂಥದು. ಆದರೆ 'ಜನಿವಾರ' ಎಂಬುದರಲ್ಲಿ 'ದಾರ'ವಿಲ್ಲ. ಈ ಬಗ್ಗೆ ಕೆದಕುತ್ತ ಹೋದಂತೆ ಕೆಲ ಕುತೂಹಲಕಾರಿ ಅಂಶಗಳು ಗಮನಕ್ಕೆ ಬರುತ್ತವೆ.

ಯಾವುದೇ ಸಂಪ್ರದಾಯ ಉಪಯುಕ್ತತೆಯನ್ನು ಆಧರಿಸಿ ಪ್ರಾರಂಭವಾಗುತ್ತದೆ. ಅದರ ಉಪಯುಕ್ತತೆ ನಿಂತುಹೋದಾಗಲೂ ಅದರ ಆಚರಣೆ ಮುಂದುವರಿಯಬಹುದು, ಪರಿಷ್ಕರಣೆ ಹೊಂದಬಹುದು, 'ಗೊಡ್ಡು ಸಂಪ್ರದಾಯ' ಅನ್ನಿಸಿಕೊಳ್ಳಬಹುದು, ಕೊನೆಗೊಮ್ಮೆ ಸತ್ತುಹೋಗಬಹುದು.

'ಜನ್ನ' ಎಂಬುದು ಸಂಸ್ಕೃತದ ಯಜ್ಞ ಶಬ್ದದ ತದ್ಭವ. ನಂತರದಲ್ಲಿ ಅದು 'ಜನ್ನಿ', 'ಜನಿ' ಎಂಬ ಪರ್ಯಾಯ ರೂಪಗಳನ್ನು ಹೊಂದಿದೆ.

'ಬಾರ' ಎಂಬುದು ಇಲ್ಲಿ ಕುತೂಹಲ ಕೆರಳಿಸುವಂಥದು. ಮೂಲತಃ ಇದರ ಅರ್ಥ 'ತೊಗಲಿನ ಪಟ್ಟಿ' ಎಂದು. ಉದಾಹರಣೆಗೆ 'ಬಾರಕೋಲು' ಎಂಬ ಶಬ್ದದಲ್ಲಿ ಈಗಲೂ ಅದೇ ಅರ್ಥವಿದೆ.

'ಅಮರಕೋಶ'ವನ್ನು ಮರುಪರಿಶೀಲಿಸಿದ ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು 'ಯಜ್ಞೋಪವೀತ' ಮೂಲತಃ ತೊಗಲಿನ ದಾರವೆ ಆಗಿತ್ತೆಂದು ಅಭಿಪ್ರಾಯಪಡುತ್ತಾರೆ. ಇದರಿಂದ 'ಯಜ್ಞ' ಜನ್ನ ಆಗಿ, ಜನ್ನ+ಬಾರ = ಜನ್ನಿ + ಬಾರ = ಜನಿವಾರ ಆಗಿದ್ದು ಕಂಡು ಬರುತ್ತದೆ. ಒಟ್ಟಿನಲ್ಲಿ 'ಜನಿವಾರ' ಶಬ್ದದಲ್ಲಿ 'ದಾರ' ಸೇರಿಲ್ಲ. ಆದರೆ ಈಗ ಜನಿವಾರಕ್ಕಾಗಿ




ದಾರ ಬಳಸಲಾಗುತ್ತದೆ. ಇದು ಸಂಪ್ರದಾಯದ ಪರಿಷ್ಕರಣ ರೂಪ. ಅಂದರೆ 'ಬಾರ'ದ ಉಪಯುಕ್ತತೆ ನಿಂತುಹೋಗಿ, ಸಂಪ್ರದಾಯ ಮುಂದುವರಿದ ಪರಿಣಾಮವಾಗಿ ಈ ಸ್ಥಿತಿ ಕಂಡುಬರುತ್ತದೆ. ಯಾಕೆಂದರೆ ಈಗ ಪೂರ್ವರೂಪದ 'ಯಜ್ಞ'ವಾಗಲಿ, 'ಬಾರ' ಕಟ್ಟಿಕೊಳ್ಳುವ ಪ್ರಮೇಯವಾಗಲಿ ಉಳಿದಿಲ್ಲ.

ಪ್ರಾಚೀನ ಕಾಲದಲ್ಲಿ, ಮಗು ಪ್ರೌಢಾವಸ್ಥೆಗೆ ಬರುತ್ತಿದ್ದಂತೆ ಅದು ಸ್ವತಂತ್ರವಾಗಿ (ನಿರ್ಭೀತಿಯಿಂದ) ಕಾಡಿನಲ್ಲಿ ಸಂಚರಿಸಿ, ಬೇಟೆಯಾಡಲು ಸಾಧ್ಯವಾಗುವಂತೆ, ಕೆಲ ವಿಧಿಗಳನ್ನು ಆಚರಿಸಿ, ಅದರ ಹೆಗಲಿಗೆ ಚರ್ಮದ ಬಾರ ಕಟ್ಟುತ್ತಿದ್ದರು. ಅದು ದ್ವಿಜರಿಗೆ ಮಾತ್ರವಲ್ಲ, ಅಂದಿನ ಕಾಲದ ಎಲ್ಲ ಜನಾಂಗದ ಜನರಿಗೆ ಅವಶ್ಯಕವಾಗಿತ್ತು, ಉಪಯುಕ್ತವಾಗಿತ್ತು.

ಈ ಹಿನ್ನೆಲೆಯಲ್ಲಿ 'ಅಮರಕೋಶ'ದ ವ್ಯಾಖ್ಯಾನಕಾರ ನಾಚಿರಾಜಿಯ ಅಭಿಪ್ರಾಯವನ್ನು ಗಮನಿಸಬಹುದು. 'ಜನಿವಾರಮನ್ ಎಡನ್ದೊಡಲ್ ಎಡದ ಕೆಯ್ಯ ನೆಗಹಲು ಪಟ್ಟ ಜನ್ನಿವಾರದ ಪ್ರಾಚೀನಾವೀತ ಎನಿಸಿಗುಂ.' ಎಡಗೈ (ಬಿಲ್ಲು ಹಿಡಿದ ಕೈ) ಎತ್ತಲು ಸಾಧ್ಯವಾಗುವಂತೆ ಎಡತೋಳ ಕೆಳಗಿಂದ ಹಾಯ್ದು ಬಲಭುಜದ ಮೇಲೆ ಧರಿಸಿರುವ ಯಾಜ್ಞಿಕ 'ಬಾರ' ಇದು. ಇದಕ್ಕೆ ಲಗತ್ತಾಗಿ ಬಲಭುಜದ ಹಿಂಭಾಗದಲ್ಲಿ ಬಾಣಗಳಿಂದ ಕೂಡಿದ ಬತ್ತಳಿಕೆ ಇರುತ್ತಿತ್ತು. ಅಂದಿನ ಕಾಲದಲ್ಲಿ ಬಿಲ್ಲು ವಿದ್ಯೆಯೇ ಎಲ್ಲರ ಆವಶ್ಯಕ ವಿದ್ಯೆಯಾಗಿತ್ತು. ಭಾರತದಲ್ಲಿ 'ಗಣ' (ಸಮುದಾಯ) ಸಮಾಜವಿತ್ತು (ಗಣದ ಮುಖ್ಯಸ್ಥ 'ಗಣಪತಿ' ಅನ್ನಿಸಿಕೊಳ್ಳುತ್ತಿದ್ದ). ಅವರೆಲ್ಲರೂ ಈ ವಿಧಿಯನ್ನು ಅಂದರೆ, 'ಬಾರ' ಕಟ್ಟಿಕೊಳ್ಳುವುದನ್ನು ಅನುಸರಿಸುತ್ತಿದ್ದಿರಬೇಕು. ಈ ವಿಧಿಯನ್ನು ಭಾರತೀಯೇತರ ಜನಾಂಗ ಅಥವಾ ಭಾರತೀಯ ಪರಿಸರದ ಹೊರಗಿನ ಜನಾಂಗ ಅನುಸರಿಸುತ್ತಿದ್ದ ಬಗ್ಗೆ ಆಧಾರಗಳು ಸಿಗುವುದಿಲ್ಲ. ಇದು ಆರ್ಯಪೂರ್ವ ಜನಾಂಗ ವಲಸೆ ಬಂದ ಆರ್ಯರಿಗೆ ಕೊಟ್ಟ ಬಳುವಳಿಯೆನ್ನಬೇಕು. ಅದರಂತೆ ಆರ್ಯರ ಒಂದು ಸಾಮಾಜಿಕ ಸ್ವರೂಪ ಆರ್ಯಪೂರ್ವ ಜನಾಂಗಕ್ಕೂ ಪಸರಿಸಿತು. ಯುರೋಪ ಮತ್ತು ಆರ್ಯ (ಇಂಡೊ ಯುರೋಪಿಯನ್) ಜನಾಂಗದಲ್ಲಿನ ಪುರೋಹಿತ ವರ್ಗ, ಕ್ಷತ್ರಿಯ ವರ್ಗ,ವೈಶ್ಯ ವರ್ಗ ಪ್ರಭೇದ ಭಾರತದಲ್ಲಿಯೂ ಕಾಣಿಸಿತು. ಇದು ಆರ್ಯರು ಮತ್ತು ಮೂಲ ಭಾರತೀಯರು (ಪರಸ್ಪರ ಸಂಘರ್ಷದ ನಂತರ), ಅನುಸಂಧಾನ ಮಾಡಿಕೊಂಡು ಹಂತಹಂತವಾಗಿ ಸಾಮಾಜಿಕ ಕೂಡಾವಳಿಗೆ ಅವಕಾಶ ಮಾಡಿಕೊಂಡದ್ದನ್ನು ಸಾಬೀತುಪಡಿಸುತ್ತದೆ. ಈ ಹಂತದಲ್ಲಿ ಅನೇಕರು ಅದರಲ್ಲೂ ಮೇಲ್ವರ್ಗದ ಭಾರತೀಯರು ಆರ್ಯೀಕರಣ ಒಪ್ಪಿಕೊಂಡದ್ದಲ್ಲದೆ, ತಾವು ಆರ್ಯರೆನಿಸಿಕೊಳ್ಳುವುದು ಹೆಮ್ಮೆಯ ವಿಷಯವೆಂದು ಭಾವಿಸಿದರು ಮತ್ತು ಆರ್ಯರೊಡನೆ ಸಂಕರಗೊಂಡರು. ಇಂಥ ಸಂಕರಗೊಂಡ ಜನಾಂಗವು ಆರ್ಯರ ವರ್ಗಪರಿಕಲ್ಪನೆಯನ್ನು ಅಪ್ಪಿಕೊಳ್ಳುವುದರ ಜೊತೆಗೆ ಹಲವಾರು ಹಳೆ ಸಂಪ್ರದಾಯಗಳನ್ನೂ ಉಳಿಸಿಕೊಂಡುದು ಕಂಡುಬರುತ್ತದೆ. ಯುರೋಪ ಮೂಲದ ಮೂರು 'ವರ್ಗ'ಗಳು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಎಂದು ಮೂರು 'ವರ್ಣ'ಗಳಾದವು. ಈ ವರ್ಣದವರನ್ನು 'ದ್ವಿಜ'ರು (ಮರುಹುಟ್ಟು ಪಡೆದವರು) ಎಂದು ಗುರುತಿಸಿ ಜನಿವಾರ ಸಂಸ್ಕಾರಕ್ಕೆ ಒಳಪಡಿಸುವುದು ರೂಢಿಯಾಯಿತು. ಮೂರು ವರ್ಣಗಳಿಗೆ ಸೇರದ ಇತರ ಭಾರತೀಯರನ್ನು 'ಶೂದ್ರ'ರೆಂದು ಕರೆಯಲಾಯಿತು ಮತ್ತು ಅವರಿಗೆ ಜನಿವಾರವನ್ನು ನಿರಾಕರಿಸಲಾಯಿತು. ಇವರು ಮರುಹುಟ್ಟು ಪಡೆಯದ ಪ್ರಾಕೃತರು, ಅಸ್ಪೃಶ್ಯರು.

ಈ ಹಂತದಲ್ಲಿ ಸಾಮಾಜಿಕವಾಗಿ ಕಠಿಣ ಕಟ್ಟಳೆಗಳನ್ನು ವಿಧಿಸಲಾಯಿತು. ವಾಸ್ತವವಾಗಿ ಆರ್ಯರಿಗಿಂತ ಆರ್ಯೀಕರಣಗೊಂಡವರು ('ದ್ವಿಜ'ರು), ಹೆಚ್ಚು ಕಠಿಣವಾಗಿ ನಡೆದುಕೊಳ್ಳತೊಡಗಿದರು. 'ಮನುಸ್ಮೃತಿ'ಯಂಥ ಕೃತಿ ಹುಟ್ಟಿಕೊಂಡಿತು. 'ದ್ವಿಜ'ರ ಆಚಾರ ಕಟ್ಟುನಿಟ್ಟಾಯಿತು. ಜನಿವಾರ ಮಹತ್ವದ ಪಾತ್ರ ವಹಿಸಿತು. ಇಂಥ ಜನಿವಾರಕ್ಕೆ ಸಂಬಂಧಿಸಿದ ವಿಧಿವಿಧಾನಗಳನ್ನು ಒಂದಿಷ್ಟು ಪರಿಶೀಲಿಸೋಣ.

ಜನಿವಾರ 'ಯಜ್ಞೋಪವೀತ'ವಾಯಿತು. ಇದನ್ನು ಧರಿಸದೆ ಯಜ್ಞ ಮಾಡುವಂತಿಲ್ಲ. 'ದ್ವಿಜ'ರು ವಿಶೇಷವಾಗಿ ಬ್ರಾಹ್ಮಣರು ಐದು ಬಗೆಯ ಯಜ್ಞಗಳನ್ನು ಪ್ರತಿನಿತ್ಯವೂ ಮಾಡಬೇಕಿತ್ತು. ಅವು ಯಾವುವೆಂದರೆ :

೧. ಬ್ರಹ್ಮ ಯಜ್ಞ : 'ಅಧ್ಯಾಪನಂ ಬ್ರಹ್ಮ ಯಜ್ಞಃ' ಬೋಧನೆ, ವೇದಪಠಣ.
೨. ಪಿತೃ ಯಜ್ಞ : 'ಪಿತೃಯಜ್ಞಸ್ತು ತರ್ಪಣಂ.' ಪೂರ್ವಿಕರಿಗೆ ನೀರು/ಮದ್ಯ ತರ್ಪಣ ಮಾಡುವುದು. (ಪ್ರೇತ ಸಂಸ್ಕಾರ, ಉತ್ತರಕ್ರಿಯೆ ಸಹ ಇದರಲ್ಲಿ ಸೇರುತ್ತವೆ.)
೩. ದೈವ ಯಜ್ಞ : ದೈವದ ಯಜ್ಞಕ್ಕಾಗಿ ಹೋಮ ಮಾಡುವುದು.
೪. ಭೂತ ಯಜ್ಞ : ಭೂತ ಯಜ್ಞಕ್ಕಾಗಿ ಬಲಿ ಕೊಡುವುದು.
೫. ಮನುಷ್ಯ ಯಜ್ಞ: 'ನೃಯಜ್ಞೋಽತಿಥಿಪೂಜನಮ್' ಮನುಷ್ಯ ಯಜ್ಞದಲ್ಲಿ ಅತಿಥಿ ಪೂಜೆ, ಸತ್ಕಾರ.

ಈ ಐದು ಯಜ್ಞಗಳು ಸೇರಿ 'ಮಹಾ ಯಜ್ಞ'ವೆನಿಸುತ್ತದೆ. ಈಗ ಪ್ರತಿನಿತ್ಯವೂ ಇದನ್ನು ಮಾಡಲು ಸಾಧ್ಯವೇ? ಸಾಧುವೆ? ಸಾಧ್ಯವಾದ ಕೆಲವರು ಮಾಡುತ್ತಿರಬಹುದು, ಸಾಧ್ಯವಾಗದವರು ಪರಿಷ್ಕರಿಸಿಕೊಂಡಿರಬಹುದು, ಇಲ್ಲವೆ ಬಿಟ್ಟುಕೊಟ್ಟಿರಬಹುದು. ಕೆಲ ಕ್ರಾಂತಿಕಾರಿಗಳು – ಬಸವಣ್ಣನಂಥವರು – ಯಜ್ಞೋಪವೀತವನ್ನೇ ತಿರಸ್ಕರಿಸಬಹುದು. ಒಟ್ಟಿನಲ್ಲಿ ಈ ಹಂತದಲ್ಲಿ 'ಬಾರ' ದೂರವಾಗಿ ಸಾಂಕೇತಿಕವಾಗಿ ದಾರದ ರೂಪದಲ್ಲಿ ಕಾಣಿಸಿಕೊಂಡಿತು.

ಯಜ್ಞೋಪವೀತದಲ್ಲಿ ನಿವೀತ, ಪ್ರಾಚೀನಾವೀತ, ಉಪವೀತ ಎಂದು ಪ್ರಭೇದ ಕಲ್ಪಿಸಲಾಗಿದೆ. 'ನಿವೀತಂ ಮನುಷ್ಯಾಣಾಂ, ಪ್ರಾಚೀನಾವೀತಂ ಪಿತೃಣಾಮುಪವೀತಂ ದೇವಾನಾಂ.' ಅಂದರೆ ಇವು ಕ್ರಮವಾಗಿ ಮನುಷ್ಯ, ಪಿತೃ, ದೇವತೆಗಳಿಗಾಗಿ ಪ್ರತ್ಯೇಕವಾಗಿರುವಂಥವು.

'ನಿವೀತ' ಕುತ್ತಿಗೆಗೆ ಹಾರದಂತೆ ಹಾಕಿಕೊಳ್ಳುವಂಥದು. 'ಪ್ರಾಚೀನಾವೀತ'ವು ಬಲಗಡೆ ಹೆಗಲಿಗೆ ಎಡಗಡೆ ತೋಳಿನ ಕೆಳಗೆ ಜೋಲುವಂತೆ ಹಾಕುವಂಥದು. 'ಉಪವೀತ' ಎಡಗಡೆ ಹೆಗಲಿಗೆ

ಪ್ರೊ|| ಬಿ. ಬಿ. ಪಾಟೀಲ

ಬಲತೋಳಿನ ಕೆಳಗೆ ಜೋಲುವಂತೆ ಹಾಕುವಂಥದು.

ಯಜ್ಞಾಚರಣೆ ಮಾಡುವ ದ್ವಿಜರು ಮುಖ್ಯವಾಗಿ ಬ್ರಾಹ್ಮಣರು ವೇದಾಧ್ಯಯನ, ಮಂತ್ರಪಠಣ ಮುಂತಾದ ಉದ್ದೇಶಗಳಿಗಾಗಿ ಸೀಮಿತವಾದ ಕಟ್ಟುನಿಟ್ಟಿನ ಭಾಷೆಯೊಂದನ್ನು ಕಟ್ಟಿಕೊಂಡರು, ಅದೇ ಸಂಸ್ಕೃತ.

ಯಜ್ಞೋಪವೀತಧಾರಿಗಳಾದ 'ವಟು'ಗಳು ನೆತ್ತಿಯ ಮೇಲೆ ಜುಟ್ಟು ಬಿಟ್ಟುಕೊಂಡು ಅದಕ್ಕೊಂದು ಗಂಟು ಹಾಕುವ ಸಂಪ್ರದಾಯ ಕೂಡ ಉಪಯುಕ್ತತೆ ದೃಷ್ಟಿಯಿಂದಲೆ ಪ್ರಾರಂಭವಾದುದು. ನಂತರದಲ್ಲಿ ಬೇರೆ ಸಾಂಪ್ರದಾಯಿಕ ವಿಧಿಗಳು, ಅರ್ಥಗಳು ಈ ಸಂಪ್ರದಾಯಕ್ಕೆ ಸೇರಿರಬಹುದಾದರೂ, ಅಧ್ಯಯನ ನಿರತ ವಟುಗಳ ಏಕಾಗ್ರತೆಗಾಗಿ ಮತ್ತು ತೂಕಡಿಸಿ ಅಧ್ಯಯನ ಹಾಳು ಮಾಡಿಕೊಳ್ಳಬಾರದೆಂಬ ಘನವಾದ ಉದ್ದೇಶದಿಂದ ಅವರನ್ನು ಎಚ್ಚರಿಸುವುದಕ್ಕಾಗಿ ಈ ಸಂಪ್ರದಾಯ ಪ್ರಾರಂಭ ಆಗಿದ್ದಂತು ಸತ್ಯ.

೨. ದ್ರಾವಿಡರ ಶೈವ ಧರ್ಮವು, ಹಿಂದು ಧರ್ಮಕ್ಕಿಂತ ಪ್ರಾಚೀನವಾದರೂ ಅದು ಪರಿಷ್ಕರಣಗೊಂಡು ಅಥವಾ ಅದರ ಒಂದು ಶಾಖೆಯಾಗಿ ರೂಪಗೊಂಡುದು ವೀರಶೈವ ಧರ್ಮ. ಇದು ಬಸವಣ್ಣನವರಿಗಿಂತ ಮುಂಚೆ ಸುಪ್ತವಾಗಿ ಇದ್ದಿರಬಹುದಾದರೂ, ಅವರ ಕಾಲದಲ್ಲಿ ಕ್ರಾಂತಿಕಾರಿಯಾಗಿ, ಸಮಾಜಮುಖಿಯಾಗಿ ಹೆಚ್ಚು ಪ್ರಚುರವಾಯಿತು. ಇಲ್ಲಿ ಇಷ್ಟಲಿಂಗ ಪರಿಕಲ್ಪನೆ ಮುಖ್ಯವಾದುದು. ಲಿಂಗವನ್ನು ಕರಸ್ಥಲಕ್ಕೆ ತಂದುಕೊಂಡು ಮಾಡುವ ಪೂಜಾ ವಿಧಾನ ಹೆಚ್ಚು ಪ್ರಚಾರ ಪಡೆಯಿತು. ಇದರಿಂದ ವೈಯಕ್ತಿಕವಾಗಿ ಕಂತೆ ಲಿಂಗವನ್ನು ಆರಾಧಕರು ಸದಾ ತಮ್ಮ ಬಳಿ ಇಟ್ಟುಕೊಳ್ಳಬೇಕಾಯಿತು. ಆರಾಧನೆಯ ನಂತರ ಲಿಂಗವನ್ನು ಮೊದಮೊದಲು ಪಾವೃತ (ಪಾವಡ) ದಲ್ಲಿಟ್ಟು ಸುತ್ತಿ ಕೊರಳಿಗೆ ಕಟ್ಟಿಕೊಳ್ಳುತ್ತಿದ್ದರು. ಬರಬರುತ್ತ ಲಿಂಗ ಇರಿಸಲು ಮರದ ಕರಡಿಗೆಗಳನ್ನು ಮಾಡಿ ಅದಕ್ಕೆ ದಾರ ಕಟ್ಟಿ ಕೊರಳಿಗೆ ಕಟ್ಟಿಕೊಳ್ಳತೊಡಗಿದರು. ಇಂಥ ದಾರ 'ಶಿವದಾರ'ವೆನಿಸಿತು. ಕಾಲಕ್ರಮದಲ್ಲಿ ಈ ಕರಡಿಗೆಗಳು ಅವರವರ ಅಂತಸ್ತಿಗನುಸಾರ ಅಥವಾ ತೋರಿಕೆಯ ಮನಸ್ಸಿಗನುಸಾರ ಬೆಳ್ಳಿ ಇಲ್ಲವೆ ಬಂಗಾರದಿಂದ ತಯಾರಾದವು. ಆಧುನಿಕ ಕಾಲದಲ್ಲಿ ಸ್ಟೇನ್‌ಲೆಸ್ ಸ್ಟೀಲ್ ಕರಡಿಗೆಗಳು ಹೆಚ್ಚು ಬಳಕೆಯಾಗುತ್ತಿವೆ. ಇಷ್ಟಲಿಂಗದ ಪ್ರಚಾರದ ಭರದಲ್ಲಿ ಆಡುವ ಮಕ್ಕಳಿಗೆ ಕೂಡ ಇಂಥ ಕರಡಿಗೆಗಳನ್ನು ಕಟ್ಟಿದ್ದನ್ನು, ಅದರಲ್ಲಿನ ಲಿಂಗವನ್ನು ಆಟದಲ್ಲಿ ಇಲ್ಲವೆ ಆಕಸ್ಮಿಕವಾಗಿ ಕಳೆದುಕೊಂಡು ಅತ್ತಿದ್ದನ್ನು, ಕಳೆದುಕೊಂಡು ಖಾಲಿ ಆದ ಕರಡಿಗೆಯಲ್ಲಿ ದುಡ್ಡು ಹಾಕಿ ಗಿಲಗಿಲ ಮಾಡಿ ದುಡ್ಡಿನ ದೊಡ್ಡಸ್ತಿಕೆ ಮೆರೆದದ್ದನ್ನು ಮತ್ತು ಸ್ನೇಹಿತರೊಂದಿಗೆ ಜಗಳವಾದಾಗ ಕರಡಿಗೆಯಿಂದ ಹೊಡೆದು ಗಾಯಗೊಳಿಸಿದ್ದನ್ನು ಮತ್ತು ರಾತ್ರಿ ಹೊತ್ತು ಅದು ಪಕ್ಕೆಗೆ ಒತ್ತಿದ್ದನ್ನು, ಅದಕ್ಕಾಗಿ ಅತ್ತಿದ್ದನ್ನು ಈ ಲೇಖಕ ಅನುಭವಿಸಿದ್ದಾನೆ. ಒಟ್ಟಿನಲ್ಲಿ ಇಲ್ಲಿ ಲಿಂಗ ಮುಖ್ಯ, ದಾರವಲ್ಲ. ಆದ್ದರಿಂದ ಶಿವದಾರ ಜನಿವಾರದಷ್ಟು ವಿವರಗಳನ್ನು ಬಯಸುವುದಿಲ್ಲ.

೩. 'ಉಡುದಾರ'ದ ಬಗ್ಗೆ ಒಂದೆರಡು ಮಾತು ಇಲ್ಲಿ ಹೇಳಬೇಕಿದೆ. ನಾವು ಚಿಕ್ಕವರಿದ್ದಾಗ ಹಿರಿಯರು ಉಡುದಾರ ಕಟ್ಟಿಕೊಳ್ಳಲು ಒತ್ತಾಯಿಸುತ್ತಿದ್ದರು. ಕಟ್ಟಿಸಿಕೊಳ್ಳದೆ ಹಟ ಮಾಡಿದರೆ 'ಉಡುದಾರ ಇಲ್ಲದಾಗ ನೆತ್ತಿ ಬಡಿದರೆ ಸತ್ತು ಹೋಗುತ್ತಾರೆ' (ಉಡುದಾರ ಇಲ್ಲದೆ ಬಡಿಸಿಕೊಂಡವರು) ಎಂದು ಹೆದರಿಸಿ ಕಟ್ಟುತ್ತಿದ್ದರು. ಹಾಗೆ ಹೆದರಿಸುತ್ತಿದ್ದ ಕಾರಣ ಈಗ ತಿಳಿದಿದೆ. ಲಂಗೋಟಿ ಅರ್ಥಾತ್ ಪುಟಗೋಸಿ ಅರ್ಥಾತ್ ಕೌಪೀನ ಧರಿಸಿ ಮಾನ ಮುಚ್ಚಿಕೊಂಡಿರಲು ಪ್ರಾರಂಭವಾದ ಈ ಉಡುದಾರ ಕಟ್ಟುವ ಸಂಪ್ರದಾಯ ಕೌಪೀನ ಬಳಸುವುದು ನಿಂತ ಮೇಲೆಯೂ ಮುಂದುವರಿದಿದೆ.

ಇಷ್ಟಂತು ನಿಜ, ಯಾವುದೇ ಸಂಪ್ರದಾಯ ಕೂಡಲೆ ಅಳಿಯುವಂಥದಲ್ಲ. ಉಪಯುಕ್ತ ಇಲ್ಲದ್ದು ನಶಿಸುತ್ತ ಹೋಗುತ್ತದೆ. ಉಪಯುಕ್ತವಾದದ್ದು ಬಳಕೆಗೆ ಬರುತ್ತದೆ.

ಸಾಹಿತಿಯೊಬ್ಬರು ವಿದೇಶಕ್ಕೆ ಹೋಗಿ ಸಮುದ್ರ ದಾಟಿ ಬಂದರೆಂಬ ಕಾರಣಕ್ಕೆ ಅವರಿಗೆ ಹತ್ತಿರದಲ್ಲಿ ಯಾರೂ ಹೆಣ್ಣು ಕೊಡಲಿಲ್ಲ– ಒಂದು ಕಾಲದಲ್ಲಿ. ಅವರು ಮಹಾರಾಷ್ಟ್ರಕ್ಕೆ ಹೋಗಿ ಮದುವೆಯಾದರು. ಆದರೆ ಅವರನ್ನು ವಿರೋಧಿಸಿದವರ ಸಂತಾನ ವಿದೇಶದಲ್ಲಿ ಉತ್ತಮ ಉದ್ಯೋಗದಲ್ಲಿ ಇದ್ದಾರೆ ಈಗ. ಅಲ್ಲದೆ ಈಗ ವಿದೇಶಕ್ಕೆ ಹೋಗಿಬಂದವರು ಹೆಚ್ಚು ಘನವಂತರು. ಈ ಸಂಪ್ರದಾಯಪ್ರಿಯರಿಗೆ ಶರಣು ಶರಣಾರ್ಥಿ.


**ಪ್ರೊ॥ ಬಿ. ಬಿ. ಪಾಟೀಲ**

ನಿವೃತ್ತ ಪ್ರಿನ್ಸಿಪಾಲರು, ೧೯೨೬/೧೧, ೧೨ನೇ ಕ್ರಾಸ್

ಎಸ್. ವಿ. ಬಡಾವಣೆ, ದಾವಣಗೆರೆ - ೫೭೭ ೦೦೪


# ಕನಸು ಕೊಲ್ಲುವ ಜನ



೧

ಗಂಟು ಹಾಕಿದ ಹರಿದ ದೋತರದ ಚುಂಗು
ಒಡಕು ಚಾಳೀಸು, ಸದಾ ಮುಗಿಲ ಕಡೆ ಮುಖ
ಈ ನೆಲವ ನಂಬಿದ ಜೀವಕ್ಕೆ
ಬದುಕು ಗೆಲ್ಲುವ ಪಣ.

ಇವನಿಟ್ಟ ಹೆಜ್ಜೆಯಲಿ ಹೆಜ್ಜೆ ಇಟ್ಟಳು ಈಕೆ
ಅತ್ತಾಗ ಅತ್ತು ನಕ್ಕಾಗ ನಕ್ಕು;
ಇದು ಗೂಡು !
ಜಗಲಿ ಕಟ್ಟಿಸಲೂ ಜಾಗವಿಲ್ಲ
ಈ ಮನೆಯಲ್ಲಿ
ಈ ಮಣ್ಣ ಗೋಡೆಗೆ ಎರಡು
ಕುಂಕುಮದ ಬೊಟ್ಟು
ನೀರು ಚಿಮುಕಿಸಿದ ಎದೆಯಲ್ಲಿ
ಧನ್ಯತೆಯ ಮನಸ್ಸು
ಸಗಣಿ ಸಾರಿಸಿದ ದಿನ ಹುಣ್ಣಿಮೆ ಅಮವಾಸ್ಯೆ
ಮಿಣ್ಣಗೆ ಉರಿವ ಒಡಕು ಹಣತೆಯ ದೀಪ
ಬರಿಗೈಲಿ ಮುಗಿದ ಕೈಗೆ
ನಮ್ಮ-ನಿಮ್ಮ ಆ ಶಿವ
ಇವರ ಮನೆಯ ಮಗ



೨

ಆ ಜೀವ ಈ ಜೀವ
ಕೋಟಿ ಜೀವಗಳ ಬದುಕು ಶಿವ
ನಂಬಿಕೆಯ ಉಸಿರು ಶಿವ
ಸದಾ ಮೌನಿ ಶಿವ
ಬೀದಿಗೆ ಬಂದ ಶಿವ
ಈ ಶಿವನ ಕೊಂದರು ಮೊನ್ನೆ-ಮೊನ್ನೆ !

ಕನಸು ಕೊಲ್ಲುವ ಜನ
ಹಂಚಿದರು ಕುಂಕುಮ
ಉರಿವ ಕಣ್ಣಲ್ಲಿ ಇರಿತದ ಹಸಿವು
ಉಸಿರು ಸುಟ್ಟರು
ಅರಿವ ಹತ್ಯೆ ಮಾಡಿದರು
ಒಡಕು ಹಣತೆಯ ದೀಪ ಚೂರು ಚೂರು !
ಕಿತ್ತು ಕೊಟ್ಟರು ತ್ರಿಶೂಲಗಳ
ದುಡಿವ ಕೈಗಳಿಗೆ
ಈ ನೆಲದ ಎದೆಯ ಸೀಳಲು !




ಬಸವರಾಜ ಹೂಗಾರ

ಸಹಾಯಕ ನಿರ್ದೇಶಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಬಿ. ಡಿ. ಪಾಟೀಲ ನಗರ, ಕೊಪ್ಪಳ - ೫೮೩ ೨೩೧

ದುಷ್ಕರ್ಮಗಳ ಕುರಿತು ತನಿಖೆ ನಡೆಯಿಸಿ ಅದರಿಂದ ಸಂಗ್ರಹಿಸಲಾದ ಸಾಕ್ಷಿಗಳಿಂದ ಅವುಗಳು ರುಜುವಾತಾದರೆ ಅಂತಹ ಆಪಾದಿತರನ್ನು ಶಿಕ್ಷಿಸಲು ಕ್ರಿಮಿನಲ್ ಪ್ರೊಸೀಜರ್ ಕೋಡ್ ಮತ್ತು ಇಂಡಿಯನ್ ಪೀನಲ್ ಕೋಡ್ ಎಂಬ ಎರಡು ಸಮೂಲಾಗ್ರವಾದ ಕಾಯಿದೆಗಳಿವೆ. ನಮ್ಮ ರಾಷ್ಟ್ರವನ್ನು ಆಳುತ್ತಿದ್ದ ಬ್ರಿಟಿಷರು ಈ ಕಾಯಿದೆಗಳನ್ನು ರೂಪಿಸಿದ್ದರು. ಎರಡನೆಯ ಮಹಾಯುದ್ಧದ ಕಾಲದಲ್ಲಿ ಭಾರತದಲ್ಲಿ ಸ್ವಾತಂತ್ರ್ಯ ಸಂಗ್ರಾಮವು ಪ್ರಖರತೆಯನ್ನು ಹೊಂದಿದಾಗ ಅದನ್ನು ಸದೆಬಡಿಯಲು ಅಂದಿನ ಬ್ರಿಟಿಷ್ ಸರಕಾರವು ಡಿಫೆನ್ಸ್ ಆಫ್ ಇಂಡಿಯಾ ರೂಲ್ಸ್ ಎಂಬ ಕಾಯಿದೆಯನ್ನು ಜಾರಿಗೊಳಿಸಿ ''ಕ್ವಿಟ್ ಇಂಡಿಯಾ'' ಚಳವಳಿಯಲ್ಲಿ ಭಾಗಿಗಳಾದ, ಆಗಬಹುದಾದ ಲಕ್ಷಾಂತರ ಮಂದಿಯನ್ನು ಸ್ಥಾನಬದ್ಧತೆಯಲ್ಲಿಟ್ಟಿತ್ತು. ಮಹಾತ್ಮಾ ಗಾಂಧಿ, ನೆಹರು, ಪಟೇಲ್, ಬಾಬೂ ರಾಜೇಂದ್ರ ಪ್ರಸಾದ್ ಇವರೇ ಮೊದಲಾದವರು ಈ ಕಠೋರ ಕಾಯಿದೆಗೆ ಒಳಗಾಗಿದ್ದರು. ಜೈಲುವಾಸವೇ ಅವರ ಗತಿಯಾಗಿತ್ತು.

೧೯೪೭ರಲ್ಲಿ ನಮ್ಮ ರಾಷ್ಟ್ರ ಸ್ವಾತಂತ್ರ್ಯ ಪಡೆಯಿತು ನಿಜ. ಆದರೆ ಈ ರಾಷ್ಟ್ರದ ಸರ್ವಸಾಮಾನ್ಯ ಜನರು ತಮ್ಮ ನ್ಯಾಯವಾದ ಆಸೆ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ನಡೆಸುತ್ತಿದ್ದ ಅವರ ಹೋರಾಟಗಳನ್ನು ಬಗ್ಗುಬಡಿಯಲು ಎಸ್ಮಾ, ಮೀಸಾ, ಟಾಡಾ ಎಂಬಿತ್ಯಾದಿ ಕಾಯಿದೆಗಳು ಈ ಕರಾಳ ವರ್ಗಕ್ಕೆ ಸೇರಿದವುಗಳು. ಹಿಂದೆ ಇಂತಹ ಕಾಯಿದೆಗಳನ್ನು ಅಂದಿನ ಸರಕಾರಗಳು ಜಾರಿಗೆ ತರುವ ಸಂದರ್ಭಗಳಲ್ಲಿ ಬಿಜೆಪಿ ನಾಯಕರು ಅವುಗಳನ್ನು ಖಂಡ ತುಂಡವಾಗಿ ವಿರೋಧಿಸುತ್ತಿದ್ದರು. ಅವರದ್ದು ಬರೇ ನಾಟಕವಾಗಿತ್ತು ಎಂಬುದು ಇಂದು ಅವರೇ ಜಾರಿಗೆ ತಂದ ಹಿಂದಿನ ಈ ತರಹದ ಎಲ್ಲಾ ವಿಶೇಷ ಕಾಯಿದೆಗಳಿಗಿಂತಲೂ ಕಠಿಣವಾದ, ಕರಾಳವಾದ ಅವರೇ ಜಾರಿಗೊಳಿಸಿರುವ ''ಪೋಟಾ'' ಕಾಯಿದೆಯೇ ಪರದೆಯನ್ನು ಎತ್ತಿ ತೋರಿಸುತ್ತದೆ. ಇಂದಿನ ಕೇಂದ್ರ ಸರಕಾರವನ್ನು ಸಮ್ಮಿಶ್ರ ಸರಕಾರ ಎಂದು ಹೇಳುವುದರಲ್ಲಿ ಏನೊಂದೂ ಅರ್ಥವಿಲ್ಲ. ಅದು ನಿಜಕ್ಕೂ ಬಿಜೆಪಿ ಪಕ್ಷದ ಸರಕಾರ. ಕೆಲವು ವೇಳೆಯಲ್ಲಿ ತಮ್ಮ ಅನುಯಾಯಿಗಳನ್ನು ಸದ್ಯಕ್ಕೆ ಬಾಯಿ ಮುಚ್ಚಿಸಲು ಈ ''ಸಮ್ಮಿಶ್ರ ಸರಕಾರ'' ಎಂಬ ಈ ಶಬ್ದಗಳು ಅದರ ಮುಖಂಡರಿಗೆ ಸಹಾಯವಾಗುತ್ತವೆ. ಅಷ್ಟಕ್ಕೆ ಮಾತ್ರ ಅದರ ಅಸ್ತಿತ್ವ.

ಭಯೋತ್ಪಾದಕತೆಯನ್ನು ನಿರ್ಮೂಲನಗೊಳಿಸುವುದೇ ಈ ಪೋಟಾ ಕಾಯಿದೆಯ ಉದ್ದೇಶ ಎಂದು ಹೇಳಿದ ಕೇಂದ್ರ ಸರಕಾರವು ಈ ಕಾಯಿದೆಯನ್ನು ರೂಪಿಸಿ ಅದಕ್ಕೆ ಮಂಜೂರಾತಿ ಪಡೆದ ಕ್ರಮವೇ ಒಂದು ಭೀತಿವಾದ ಕ್ರಮ

ಆದುದರಿಂದ ಈ ಕಾಯಿದೆಯನ್ನು ಮಂಜೂರು ಮಾಡಿಸಿಕೊಳ್ಳಲು ಅವರು ಜಂಟಿ ಸಭೆಯನ್ನು ಉಪಯೋಗಿಸಿದ್ದು ನಮ್ಮ ಸಂವಿಧಾನದ ಹಾಗೆಯೇ ಶಾಸನ ಸಭೆಗಳ ಕುರಿತಿರುವ ರೂಲ್ಸುಗಳಿಗೆ ವ್ಯತಿರಿಕ್ತವಾದ ಒಂದು ಅಭಿಯಾನ. ಹೀಗೆ ನ್ಯಾಯ ಸಮ್ಮತವಲ್ಲದ ರೀತಿಯಲ್ಲಿ ಈ ಕಾಯಿದೆಗೆ ಜನ್ಮ ನೀಡಿದ ಸಂಘಪರಿವಾರದ ಈ ಕ್ರಮವು ಅವರ ದುರುದ್ದೇಶವನ್ನು ಪ್ರದರ್ಶಿಸುತ್ತದೆ.

ಈ ಕಾಯಿದೆ ಜಂಟಿ ಸಭೆಯಲ್ಲಿ ಚರ್ಚೆಗೆ ಬಂದಾಗ ಈ ಕಾಯಿದೆಯು ಅದರ ಪೀಠಿಕೆಯಲ್ಲಿ ಹೇಳಿದ ಉದ್ದೇಶವನ್ನು ಸಾಧಿಸಲಾರದು, ಬದಲು ಅದು ತಮ್ಮ ರಾಜಕೀಯ ವಿರೋಧಿಗಳ ವಿರುದ್ಧವಾಗಿ ಉಪಯೋಗಿಸಲ್ಪಡುವುದು ಖಂಡಿತ ಎಂದು ಹೆಚ್ಚಿನ ವಿರೋಧ ಪಕ್ಷಗಳು ಖಚಿತವಾಗಿ ವಾದಿಸಿದ್ದವು. ಈ ಕಾಯಿದೆ ಜಾರಿಗೆ ಬಂದು ಈಗಾಗಲೇ ಎರಡು ವರ್ಷಗಳಾಗಿವೆ.

**ಈ ಕಾಯಿದೆಯ ಸಂಕ್ಷಿಪ್ತ ವಿಶ್ಲೇಷಣೆ**

ಈ ಕಾಯಿದೆಯ ಸೆಕ್ಷನ್ ೩(೧)ರಲ್ಲಿ 'ಭಯೋತ್ಪಾದಕತೆ' (terrorism)ಯ ಕುರಿತು ವ್ಯಾಖ್ಯಾನವನ್ನು ನೀಡಲಾಗಿದೆ.

ದೇಶದ ಐಕ್ಯತೆ, ರಕ್ಷಣೆ, ರಾಷ್ಟ್ರದ ಸಾರ್ವಭೌಮತ್ವವನ್ನು ಛಿದ್ರಗೊಳಿಸುವ, ಜನರಲ್ಲಿ ಭಯಭೀತಿಯನ್ನು ಹುಟ್ಟಿಸುವ ಯಾವುದೇ ಕೃತ್ಯಗಳು ಮತ್ತು ಅವುಗಳ ಸಾಧನೆಗಾಗಿ

# ಪೋಟಾ ಎಂಬ ಹೂಟ

**ಭಯೋತ್ಪಾದಕತೆಯನ್ನು ನಿರ್ಮೂಲನಗೊಳಿಸುವುದೇ ಈ ಪೋಟಾ ಕಾಯಿದೆಯ ಉದ್ದೇಶ ಎಂದು ಹೇಳಿದ ಕೇಂದ್ರ ಸರಕಾರವು ಈ ಕಾಯಿದೆಯನ್ನು ರೂಪಿಸಿ ಅದಕ್ಕೆ ಮಂಜೂರಾತಿ ಪಡೆದ ಕ್ರಮವೇ ಒಂದು ಭೀತಿವಾದ ಕ್ರಮವೆಂದರೆ ಅದು ಅತಿಶಯೋಕ್ತಿಯಾಗಲಾರದು. ರಾಷ್ಟ್ರಪತಿಯ ಭಾಷಣದ ವೇಳೆಯಲ್ಲಿ ಮತ್ತು ಇನ್ನು ಕೆಲವು ತ್ವರಿತದ ಸಂದರ್ಭದಲ್ಲಿ ಮಾತ್ರ ಪಾರ್ಲಿಮೆಂಟಿನ ಎರಡು ಸಭೆಗಳನ್ನು ಜಂಟಿಯಾಗಿ ಕರೆಯಲು ಸಂಬಂಧಪಟ್ಟ ಪಾರ್ಲಿಮೆಂಟಿನ ಕಾಯಿದೆಯಲ್ಲಿ ಅವಕಾಶವಿದೆ. ರಾಜ್ಯಸಭೆಯಲ್ಲಿ ತಮಗೆ ಬಹುಮತವಿಲ್ಲ ಎಂದುಕೊಂಡು, ಈ ಕಾಯಿದೆಯನ್ನು ಜಂಟಿ ಸಭೆಯಲ್ಲಿ ಮಂಜೂರು ಮಾಡಿಸಿದ್ದು ಈ ಸರಕಾರದ ಶುದ್ಧ ಅಕ್ರಮವಾದ ಕ್ರಮವಾಗಿದೆ. ಇಂಥ ಅಕ್ರಮವಾದ ಕಾಯಿದೆಗಳನ್ನು ತಡೆಯುವ ಸಲುವಾಗಿಯೇ ರಾಜ್ಯಸಭೆಯನ್ನು ಸ್ಥಾಪಿಸಲು ಕಾರಣ ಎಂಬುದು ಇಲ್ಲಿ ಉಲ್ಲೇಖಿಸಬೇಕಾದದ್ದು ಅಗತ್ಯ.**

ಇಂತಹ ಕಾಯಿದೆಗಳು ಆಗಿಂದಾಗ್ಗೆ ರೂಪುಗೊಳ್ಳುತ್ತಿದ್ದವು. ಉಳುವವನೇ ಹೊಲದೊಡೆಯನಾಗಬೇಕೆಂಬ ಅಂದಿನ ಮದರಾಸ್ ಪ್ರಾಂತ್ಯದ ರೈತರ ಚಳವಳಿಯನ್ನು ಹತ್ತಿಕ್ಕಲು ಅಂದು ಈ ಪ್ರಾಂತ್ಯದ ಮುಖ್ಯಮಂತ್ರಿ ಪ್ರಕಾಶಂರವರು ಇಂತಹ ಒಂದು ಕಾಯಿದೆಯನ್ನು ಮೊದಲಿಗೆ ರೂಪಿಸಿ ರೈತರ ಮುಖಂಡರನ್ನು ವಿಚಾರಣೆ ಇಲ್ಲದೆ, ಸ್ಥಾನಬದ್ಧತೆಯಲ್ಲಿಟ್ಟಿದ್ದರು. ಆದರೆ ಈ ವಿಶೇಷ ಕಾಯಿದೆಯಿಂದ ಸಮಸ್ಯೆ ಪರಿಹಾರವಾಗಲಿಲ್ಲ. ಭೂ ಸುಧಾರಣೆಯ ಕಾಯಿದೆಯು ಜಾರಿಗೆ ಬಂದಾಗ ಮಾತ್ರ ಈ ಚಳವಳಿ ಕೊನೆಗೊಂಡಿತು. ಇಂತಹ ಕಠಿಣ ಕಾನೂನುಗಳಿಂದ ಸಮಸ್ಯೆಗಳಿಗೆ ಪರಿಹಾರ ದೊರೆಯುವುದಿಲ್ಲ ಎಂಬುದಕ್ಕೆ ಇದೊಂದು ದೃಷ್ಟಾಂತ. ಎಲ್ಲಿ ಭೂ ಸುಧಾರಣಾ ಕಾಯಿದೆಗಳು ಜಾರಿಗೆ ಬಂದಿರುವುದಿಲ್ಲವೊ, ಅಂತಲ್ಲಿ ಇಂದೀಗ ನಕ್ಸಲೀಯರ ಹೋರಾಟಗಳು ತೀವ್ರವಾಗಿವೆ.

ವೆಂದರೆ ಅದು ಅತಿಶಯೋಕ್ತಿಯಾಗಲಾರದು. ರಾಷ್ಟ್ರಪತಿಯ ಭಾಷಣದ ವೇಳೆಯಲ್ಲಿ ಮತ್ತು ಇನ್ನು ಕೆಲವು ತ್ವರಿತದ ಸಂದರ್ಭದಲ್ಲಿ ಮಾತ್ರ ಪಾರ್ಲಿಮೆಂಟಿನ ಎರಡು ಸಭೆಗಳನ್ನು ಜಂಟಿಯಾಗಿ ಕರೆಯಲು ಮಾತ್ರ ಸಂಬಂಧಪಟ್ಟ ಕಾಯಿದೆ, ಪಾರ್ಲಿಮೆಂಟಿನ ರೂಲ್ಸುಗಳಲ್ಲಿ ಅವಕಾಶವಿದೆ. ರಾಜ್ಯಸಭೆಯಲ್ಲಿ ತಮಗೆ ಬಹುಮತವಿಲ್ಲ ಎಂದುಕೊಂಡು, ಈ ಕಾಯಿದೆಯನ್ನು ಜಂಟಿ ಸಭೆಯಲ್ಲಿ ಮಂಜೂರು ಮಾಡಿಸಿದ್ದು ಈ ಸರಕಾರದ ಶುದ್ಧ ಅಕ್ರಮವಾದ ಕ್ರಮವಾಗಿದೆ. ಇಂಥ ಅಕ್ರಮವಾದ ಕಾಯಿದೆಗಳನ್ನು ತಡೆಯುವ ಸಲುವಾಗಿಯೇ ರಾಜ್ಯಸಭೆಯನ್ನು ಸ್ಥಾಪಿಸಲು ಕಾರಣ ಎಂಬುದು ಇಲ್ಲಿ ಉಲ್ಲೇಖಿಸಬೇಕಾದದ್ದು ಅಗತ್ಯ.

**ಪಿ. ಎಂ. ಎಸ್. ಮೂರ್ತಿ**

ಉಪಯೋಗಿಸಬಹುದಾದ ಆಯುಧಗಳು, ಹಾಗೆಯೇ ಇದಕ್ಕೆ ಸಂಬಂಧಪಟ್ಟ ಮಾರಕಾಸ್ತ್ರಗಳನ್ನು ಹೊಂದಿರುವುದು, ಜನರ ಜೀವನಗಳಿಗೆ ಅಪಾಯವನ್ನು ಒಡ್ಡುವುದು, ಅವರ ಆಸ್ತಿಪಾಸ್ತಿಗಳನ್ನು ನಾಶ ಮಾಡುವುದು, ಅತ್ಯಾವಶ್ಯಕ ವಸ್ತುಗಳ ಸಾಗಾಣಿಕೆಗೆ ಅಡ್ಡಿ ಉಂಟುಮಾಡುವುದು, ಸರಕಾರಿ ಉದ್ಯೋಗಸ್ಥರ ಕರ್ತವ್ಯಪಾಲನೆಗೆ ಎದುರಾಗುವುದು, ಹಾಗೆಯೇ ದೇಶದ ಸಂರಕ್ಷಣೆಯಲ್ಲಿ ನಿರತರಾಗಿರುವ ಅಧಿಕಾರಿಗಳು ಹಾಗೂ ಅವರ ಕರ್ತವ್ಯಗಳಿಗೆ ತಡೆಯೊಡ್ಡುವುದು, ಹಾಗೆಯೇ ಪ್ರತಿಬಂಧನಕ್ಕೆ ಒಳಗಾದ ಸಂಘಸಂಸ್ಥೆಗಳ ಸದಸ್ಯನಾಗುವುದು, ಅಂತಹ ಸಂಘ ಸಂಸ್ಥೆಗಳ ಉದ್ದೇಶದ ಸಾಧನೆಗಳಿಗೆ ಸಹಾಯಕನಾಗುವುದು, ಸಾಮಾನ್ಯ ಕಾಯಿದೆಗಳನ್ನು ಉಲ್ಲಂಘಿಸಿ ಅಪಾಯಕಾರಿಯಾದ ಆಯುಧಗಳನ್ನು ಸಂಗ್ರಹಿಸುವುದು, ಅವುಗಳನ್ನು ಈ ಸಂಘ ಸಂಸ್ಥೆಗಳ ಸಾಧನೆಗಾಗಿ ಇತರರಿಗೆ

ನೀಡುವುದು – ಇಂತಹ ಕೃತ್ಯಗಳು "ಟೆರರಿಸಂ" ಎಂಬ ಶಬ್ದದ ವ್ಯಾಖ್ಯಾನಕ್ಕೆ ಅಧೀನವಾಗಿವೆ.

ಈ ಕಾಯಿದೆಯಲ್ಲಿ ಹೇಳಲಾದ ಈ ಕೃತ್ಯಗಳನ್ನು ತಡೆಯಲು ಮತ್ತು ಅವುಗಳು ನಡೆಸಲ್ಪಟ್ಟರೆ ಅವುಗಳ ವಿರುದ್ಧವಾಗಿ ತಪಾಸಣೆ ನಡೆಸಿ, ಅವುಗಳನ್ನು ಗೈದ ವ್ಯಕ್ತಿಗಳನ್ನು ಗುರುತಿಸಿ ಅವರನ್ನು ನ್ಯಾಯಾಲಯದ ವಿಚಾರಣೆಗೆ ಗುರಿಪಡಿಸುವ ಸಲುವಾಗಿ ಪೊಲೀಸು ಅಧಿಕಾರಿಗಳಿಗೆ ಹೆಚ್ಚುವರಿ ಅಧಿಕಾರವನ್ನು ಈ ಕಾಯಿದೆಯಲ್ಲಿ ನೀಡಲಾಗಿದೆ. ಇಂತಹ ಕೃತ್ಯಗಳ ಕುರಿತು ವಿಚಾರಣೆ ನಡೆಸಲು ಪ್ರತ್ಯೇಕವಾದ ನ್ಯಾಯಸ್ಥಾನಗಳನ್ನು ಸ್ಥಾಪಿಸಲು ಸರಕಾರಕ್ಕೆ ಅಧಿಕಾರ ಕೊಡಲಾಗಿದೆ.

ಕ್ರಿಮಿನಲ್ ಪ್ರೊಸೀಜರ್ ಕೋಡಿನ ಸೆಕ್ಷನ್ ೧೬೨ರ ಪ್ರಕಾರ ಬರೆದುಕೊಳ್ಳುವ ಆಪಾದಿತನ ಹೇಳಿಕೆಯನ್ನು ಮಾತ್ರವಲ್ಲ ಸಾಕ್ಷಿದಾರರ ಹೇಳಿಕೆಗಳನ್ನೂ ನ್ಯಾಯಸ್ಥಾನಗಳ ವಿಚಾರಣೆಗಳಲ್ಲಿ ಆರೋಪಿಯ ವಿರೋಧವಾಗಿ ಉಪಯೋಗಿಸಕೂಡದು. ಆಪಾದಿತನು ತನ್ನ ದುಷ್ಕೃತ್ಯಗಳಿಗೆ ಉಪಯೋಗಿಸಿದ ಆಯುಧ ಹಾಗೆಯೇ ಸಾಧನಗಳನ್ನು ಪೊಲೀಸರಿಗೆ ತೋರಿಸಿಕೊಡುವ ಅಂಶಗಳನ್ನು ಮಾತ್ರ ಸಾಕ್ಷಿಯಾಗಿ ಉಪಯೋಗಿಸಬಹುದು. ಇಂತಹ ಒಂದಂಶವನ್ನು ಕ್ರಿಮಿನಲ್ ಕೋಡಿನಲ್ಲಿ ಸೇರಿಸಿದ್ದಕ್ಕೆ ಬಲವಾದ ಕಾರಣಗಳಿವೆ. ನಮ್ಮ ದೇಶದಲ್ಲಿ ಅಪರಾಧಿಗಳನ್ನು ಗೊತ್ತುಹಚ್ಚುವ ಕ್ರಮವೆಂದರೆ ಬಲ ಪ್ರಯೋಗ. ಪೊಲೀಸ್ ಸ್ಟೇಷನ್ನುಗಳಲ್ಲಿ ಈ ಕ್ರಮವು ರೂಢಿಯಾಗಿ ಬಂದಿದೆ. ಈ ಕ್ರಮದಿಂದ ಅನೇಕರ ಪ್ರಾಣಹತ್ಯೆಯನ್ನು ನಡೆಸುವುದು ಒಂದು ಅಪರಾಧದ ಕಾರ್ಯವಲ್ಲ ಎಂಬ ಮಟ್ಟಕ್ಕೆ ಈ ನಮ್ಮ ಸಮಾಜದ ಚಿಂತನೆಯು ತಲುಪಿದೆ. ಉಚ್ಚನ್ಯಾಯಾಲಯಗಳು ಈ ಕುರಿತು ಆಗಾಗ್ಗೆ ಎಚ್ಚರ ನೀಡುತ್ತಿದ್ದರೂ ಇಂತಹ ಬಲ ಪ್ರಯೋಗವು ಪ್ರತಿನಿತ್ಯವೂ ನಡೆಯುತ್ತಲೇ ಇದೆ. ಹೀಗೆ ಬಲ ಪ್ರಯೋಗದಿಂದ ಪಡೆದ ಹೇಳಿಕೆಗಳು ನ್ಯಾಯಸ್ಥಾನದಲ್ಲಿ ಸ್ವೀಕರಿಸಲ್ಪಡಲು ಅರ್ಹವಾಗಬಾರದು ಎಂಬ ನ್ಯಾಯನೀತಿಯ ಉದ್ದೇಶದಿಂದಲೇ ಈ ಸೆಕ್ಷನ್ ೧೬೨ನ್ನು ಕ್ರಿಮಿನಲ್ ಪ್ರೊಸೀಜರ್ ಕೋಡಿನಲ್ಲಿ ಅಳವಡಿಸಲು ಕಾರಣ. ಉಚ್ಚನ್ಯಾಯಾಲಯಗಳ ಹಲವಾರು ತೀರ್ಪುಗಳಲ್ಲಿ ಈ ಕಾರಣಕ್ಕೆ ಇನ್ನಷ್ಟು ಒತ್ತು ಕೊಟ್ಟು ವಿವರಣೆಗಳನ್ನು ನೀಡಲಾಗಿರುತ್ತದೆ. ಇಂಡಿಯನ್ ಎವಿಡೆನ್ಸ್ ಕಾಯಿದೆಯಲ್ಲಿಯೂ ಈ ಕುರಿತು ನಿರ್ಬಂಧವನ್ನು ಹೊಂದಾಣಿಸಲಾಗಿದೆ. ಆದರೆ ಈ ಪೋಟಾ ಕಾಯಿದೆಯ ಪ್ರಕಾರ ಪೊಲೀಸು ಅಧಿಕಾರಿಗಳು ಬರೆದುಕೊಂಡ ಹೇಳಿಕೆಗಳನ್ನು, ವಶಪಡಿಸಿಕೊಂಡವುಗಳು ಎಂದು ಹೇಳಲಾದ ಸಾಧನಗಳನ್ನು ನ್ಯಾಯಸ್ಥಾನವು ಸಿಂಧುವಾದ ಸಾಕ್ಷಿಗಳೆಂದು ಸ್ವೀಕರಿಸಲು ಈ ಕಾಯಿದೆ ಅದಕ್ಕೆ ಅವಕಾಶ ಮಾಡಿಕೊಟ್ಟಿದೆ. ಆಪಾದಿತನಿಂದ ಅಥವಾ ಸಾಕ್ಷಿದಾರರಿಂದ ಇಂತಹ ಹೇಳಿಕೆಗಳನ್ನು ಪಡೆಯುವುದು ಪೊಲೀಸರಿಗೆ ಕಷ್ಟವಾಗುವ ಪ್ರಮೇಯವೇ ಇಲ್ಲ. ಒಂದು ಸಾರಿ ಅವರನ್ನು ಪೊಲೀಸ್ ಸ್ಟೇಷನಿಗೆ ಬರಲು ಹೇಳಿದರೆ ಸಾಕು. ಇದು ಸರ್ವಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವ ಒಂದು ಅಭಿಯಾನ.

ತನಿಖಾಧಿಕಾರಿಯು ಆಪಾದಿತನ ಫೋಟೋ, ಕೂದಲು, ರಕ್ತ, ಜೊಲ್ಲು, ವೀರ್ಯ ಹಾಗೆಯೇ ಧ್ವನಿ ಮುದ್ರಣಗಳನ್ನು ಆತನಿಂದಲೇ ಸಂಗ್ರಹಿಸಿಕೊಳ್ಳಬಹುದು. ಈ ಕುರಿತು ತನಗೆ ಅನುಕೂಲವಾಗುವ ರೀತಿಯಲ್ಲಿ ಅವುಗಳನ್ನು ಪರಿವರ್ತಿಸಲು ಈ ಕಾಯಿದೆಯಲ್ಲಿ ಆತನಿಗೆ ಸಾಕಷ್ಟು ಅವಕಾಶಗಳನ್ನು ಅಪ್ರತ್ಯಕ್ಷವಾಗಿ ನೀಡಲಾಗಿದೆ. ಇಂತಹ ಹೇಳಿಕೆಗಳನ್ನು ನೀಡಲು ಅಥವಾ ಸಾಧನಗಳನ್ನು ಒದಗಿಸಲು ಆರೋಪಿಯು ಹಿಂಜರಿದರೆ ಆತನ ಆ ಹಿಂಜರಿಕೆಯನ್ನು ಆತನ ವಿರುದ್ಧವಾಗಿ ನೀಡುವ ತೀರ್ಪಿಗೆ ಪುಷ್ಟೀಕರಿಸಲು ಉಪಯೋಗಿಸಲು ಈ ಕಾಯಿದೆಯು ಅವಕಾಶ ಮಾಡಿಕೊಟ್ಟಿದೆ.

ಹೀಗೆ ಈ ಪೊಲೀಸು ಅಧಿಕಾರಿಗಳಿಗೆ, ನ್ಯಾಯಾಧೀಶರುಗಳಿಗೆ ನೀಡಿದ ವಿಶೇಷ ಅಧಿಕಾರವು ನಮ್ಮ ಸಂವಿಧಾನ ೨೦(೩)ನೇ ವಿಧಿಗೆ ಸಂಪೂರ್ಣ ವಿರುದ್ಧವಾಗಿದೆ. ಆಪಾದಿತನು ಆತನ ವಿರುದ್ಧವಾಗಿ ನಡೆಸಲ್ಪಡುವ ವಿಚಾರಣೆಯಲ್ಲಿ ತನ್ನ ವಿರೋಧವಾಗಿ ಯಾವ ರೀತಿಯ ಸಾಕ್ಷಿಯನ್ನೂ ಒದಗಿಸುವಂತೆ ಬಲಾತ್ಕಾರ ಮಾಡಕೂಡದು ಎಂದು ಈ ವಿಧಿಯು ಆಜ್ಞಾಪಿಸಿದೆ. ಅಂತಹ ಸಾಕ್ಷ್ಯ ಹೇಳಿಕೆ ಅಥವಾ ಸಾಧನಗಳನ್ನು ನ್ಯಾಯಸ್ಥಾನವು ಸ್ವೀಕರಿಸಲೂ ಬಾರದು ಎಂದು ಇಂಡಿಯನ್ ಎವಿಡೆನ್ಸ್ ಕಾಯಿದೆ ಹೇಳಿದೆ.

ಸಂವಿಧಾನದ ೨೦(೩) ವಿಧಿಯು ಮಾನವನ ಮೂಲಭೂತ ಹಕ್ಕುಗಳ ಪರಿಧಿಯೊಳಗೆ ಸೇರಿದೆ. ಆದುದರಿಂದ ಆಪಾದಿತನು ಆತನ ಕೂದಲು, ಜೊಲ್ಲು ಇತ್ಯಾದಿಗಳನ್ನು ಪೊಲೀಸರಿಗೆ ಒದಗಿಸಿಕೊಡಬೇಕೆಂದು

ಕೇಳುವುದು ಈ ಮೂಲಭೂತ ಹಕ್ಕಿಗೆ ವ್ಯತಿರಿಕ್ತವಾಗಿದೆ ಎಂಬುದನ್ನು ಸುಪ್ರೀಂ ಕೋರ್ಟು 1963 scj page 195, ATR 1961 sc page 1808, 1962(3) C.S.R. page 10 ಹಾಗೆಯೇ ATR 1960 sc page 121 ಎಂಬ ಕಾಯಿದೆ ಪುಸ್ತಕಗಳಲ್ಲಿ ವರದಿ ಮಾಡಲ್ಪಟ್ಟ ತೀರ್ಪುಗಳಲ್ಲಿ ಈ ಕುರಿತು ಇನ್ನೂ ವಿಷದೀಕರಿಸಿ ಅಂತಹ ಕ್ರಮಗಳು ಈ ಮಾನವನ ಮೂಲಭೂತ ಹಕ್ಕುಗಳಿಗೆ ಚ್ಯುತಿ ತರುವ ಕೃತ್ಯಗಳಾಗಿವೆ ಎಂದು ವ್ಯಾಖ್ಯಾನವನ್ನು ನೀಡಿದೆ.

ಹೀಗೆ ಕ್ರಿಮಿನಲ್ ಪ್ರೊಸೀಜರ್ ಕೋಡಿನ ೧೬೨ನೇ ಸೆಕ್ಷನ್‌ಗೆ, ಇಂಡಿಯನ್ ಎವಿಡೆನ್ಸ್ ಕಾಯಿದೆಗಳ ಅಂಶಗಳಿಗೆ ಮಾತ್ರವಲ್ಲ, ಸಂವಿಧಾನದಲ್ಲಿ ನಿರ್ದೇಶಿಸಲಾದ ಮೂಲಭೂತ ಹಕ್ಕುಗಳನ್ನು ಕಿತ್ತುಕೊಳ್ಳುವ ಕಾನೂನು ಈ ಪೋಟಾ ಕಾಯಿದೆ.

ಭಾರತದ ಕ್ರಿಮಿನಲ್ ನ್ಯಾಯಶಾಸ್ತ್ರದ ಪ್ರಕಾರ (criminal jurisprudence) ಆಪಾದಿತನು ತನ್ನ ವಿಚಾರಣೆ ವೇಳೆಯಲ್ಲಿ ಮೌನವಾಗಿರಬಹುದು. ಅವನ ವಿರುದ್ಧವಾಗಿ ಹೊರಿಸಲ್ಪಟ್ಟ ಆಪಾದನೆಗಳನ್ನು ರುಜು ಮಾಡುವ ಜವಾಬ್ದಾರಿ ಸರಕಾರದ್ದು ಅಥವಾ ಯಾರು ದೂರನ್ನು ಸಲ್ಲಿಸಿದ್ದಾನೊ ಆತನದ್ದು. ಆದರೆ ಈ ಕಾಯಿದೆಯ ಸೆಕ್ಷನ್ ೫೩ರ ಪ್ರಕಾರ ಈ ಜವಾಬ್ದಾರಿಯನ್ನು ಆಪಾದಿತನ ಮೇಲೆ ಹೊರಿಸಲಾಗಿದೆ. ತಾನು ತಪ್ಪಿತಸ್ಥನಲ್ಲವೆಂದು ಖಚಿತಗೊಳಿಸುವ ಬಹುತೇಕದ ಭಾರವನ್ನು ಅವನ ತಲೆಯ ಮೇಲೆ ಹೊರಿಸಲಾಗಿದೆ. ಆದುದರಿಂದ ಈ ಕಾಯಿದೆಯಲ್ಲಿರುವ ಈ ಅಂಶವು ಭಾರತದ ಕ್ರಿಮಿನಲ್ ನ್ಯಾಯಶಾಸ್ತ್ರದ ಅಡಿಪಾಯವನ್ನೇ ಕಿತ್ತೆಸೆದ ಒಂದು ಅಧರ್ಮದ ಪ್ರಕ್ರಿಯೆ ಎಂದು ಹೇಳದೆ ನಿವೃತ್ತಿಯಿಲ್ಲ.

**ಈ ಕಾಯಿದೆಯ ದುರುಪಯೋಗ**

ಗೋಧ್ರಾ ಘಟನೆಯು ಅನೀತಿಯುತವಾದದ್ದು. ಆದರೆ ಅದರ ನಂತರ ನಡೆದ ಘಟನೆಗಳು ಅದಕ್ಕಿಂತಲೂ ಹೀನವಾದದ್ದು, ಕರಾಳವಾದದ್ದು ಎಂದು ಪ್ರಧಾನಿ ವಾಜಪೇಯಿಯವರೇ ಹೇಳಿದ್ದಾರೆ. ಇದು ಜನರನ್ನು ವಂಚಿಸುವ ಹೇಳಿಕೆ ಇರಬಹುದು. ಅದು ಬೇರೆ ಸಂಗತಿ. ಗೋಧ್ರಾ ಘಟನೆಯು ಮುಸ್ಲಿಮರಿಂದ ನಡೆಯಿತು ಎಂದು ಕೊಂಡು ಇದಕ್ಕೆ ಸಂಬಂಧವಾಗಿ ೧೨೩ ಮಂದಿ ಮುಸ್ಲಿಮರನ್ನು ಬಂಧಿಸಿ ಅವರನ್ನು ಪೋಟಾ ಕಾನೂನಿನನ್ವಯ ಸ್ಥಾನಬದ್ಧತೆಯಲ್ಲಿಡಲಾಗಿದೆ. ಸರದಾರಪುರದ ಘಟನೆ ನಂತರ ನಡೆದದ್ದು. ಇದರಲ್ಲಿ ಹಿಂದುತ್ವವಾದಿಗಳು ೩೪ ಮಂದಿ ಮುಸ್ಲಿಮರನ್ನು ಕೂಡಿ ಹಾಕಿ ಮನೆಗೆ ಬೆಂಕಿ ಇಟ್ಟು ಅವರನ್ನು ಭಸ್ಮ ಮಾಡಿದರು. ಅವರ ವಿರುದ್ಧ ಪೋಟಾ ಕಾಯಿದೆಯನ್ನು ಅನ್ವಯಿಸಲಿಲ್ಲ. ಅವರೆಲ್ಲರಿಗೂ ಜಾಮೀನು ನೀಡಲಾಗಿದೆ. ಮೋದಿ ಸರಕಾರದ ಈ ತಾರತಮ್ಯದ ಕೃತ್ಯ ಮುಸ್ಲಿಮರ ವಿರುದ್ಧವಾಗಿರುವ ಅವರ ದ್ವೇಷ-ಭಾವನೆಯನ್ನು ಪ್ರಕಟಿಸುತ್ತದೆ. ಅದರೊಂದಿಗೆ ಅವರ ಈ ನೀತಿ ಸಂವಿಧಾನದ ೧೪ನೇ ವಿಧಿಗೆ ವಿರೋಧವಾಗಿದೆ. ಕಾಯಿದೆಗಳು ಎಲ್ಲರನ್ನೂ ಸಮಾನದೃಷ್ಟಿಯಿಂದ ನೋಡತಕ್ಕದ್ದು, ಹಾಗೆಯೇ ಅವರಿಗೆ ಸಮಾನ ರೀತಿಯಲ್ಲಿ ಸಂರಕ್ಷಣೆ ಕೊಡತಕ್ಕದ್ದು ಎಂದು ಈ ವಿಧಿಯಲ್ಲಿ ಹೇಳಿದೆ. ಇದು ಮೂಲಭೂತ ಹಕ್ಕುಗಳಿಗೆ ಸಂಬಂಧಪಟ್ಟ ವಿಧಿ. AIR sc 1980 ಪುಟ ೪ರಲ್ಲಿ ಪ್ರಕಟಿಸಲ್ಪಟ್ಟ ಸುಪ್ರೀಂ ಕೋರ್ಟಿನ ತೀರ್ಪು ಮಾನವ ಹಕ್ಕನ್ನು ಇನ್ನಷ್ಟು ವಿಸ್ತಾರವಾಗಿ ವ್ಯಾಖ್ಯಾನಿಸಿದೆ. ಮುಸ್ಲಿಮರಿಗೆ ಪೋಟಾ, ಹಿಂದುತ್ವವಾದಿಗಳಿಗೆ ಜಾಮೀನು, ಅವರ ಈ ದ್ವಂದ್ವನೀತಿ ಸಂವಿಧಾನದ ಈ ೧೪ನೇ ವಿಧಿಗೆ ವಿರೋಧವಾಗಿದೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ತಮಿಳುನಾಡಿನ ಮುಖ್ಯಮಂತ್ರಿ ಜಯಲಲಿತಾರವರು ಎಂ.ಡಿ.ಎಂ.ಕೆ. ಪಕ್ಷದ ಅಧ್ಯಕ್ಷ ವೈಕೋರವರನ್ನು ಈಗ ೧೫ ತಿಂಗಳುಗಳಿಂದ ಸ್ಥಾನಬದ್ಧತೆಯಲ್ಲಿ ಇಟ್ಟಿದ್ದಾರೆ. ಅವರು ಶ್ರೀಲಂಕಾದ ಎಲ್.ಟಿ.ಟಿ.ಇ. ಪರವಾಗಿ ಭಾಷಣ ಮಾಡಿದ್ದೇ ಇದಕ್ಕೆ ಕಾರಣ. ಮುಖ್ಯಮಂತ್ರಿಯವರ ಈ ಕೃತ್ಯ ಈ ಪೋಟಾ ಕಾಯಿದೆಯ ಸೆಕ್ಷನ್ ೩(b)ಗೇ ವಿರೋಧವಾಗಿದೆ. ಬರೇ ಭಾಷಣ ಮಾಡಿದರೆ ಅದು ಈ ಸೆಕ್ಷನ್ ಪ್ರಕಾರ ಅಪರಾಧವಾಗುವುದಿಲ್ಲ. ಆತನು ಭಾಷಣ ಮಾಡುವ ವೇಳೆಯಲ್ಲಿ ತನ್ನ ಭಾಷಣದ ಉದ್ದೇಶವನ್ನು ಸಾಧಿಸಲು ಆಯುಧ ಹಾಗೆಯೇ ಇತರ ಹಾನಿಕಾರಕ ವಸ್ತುಗಳನ್ನು ಹೊಂದಿದ್ದರೆ ಮಾತ್ರ ಆತ ಈ ಅಪರಾಧಕ್ಕೆ ಈಡಾಗುತ್ತಾನೆ. ವೈಕೋ ಅಥವಾ ಕೇಂದ್ರ ಸರಕಾರದಲ್ಲಿ ಈ ಪಕ್ಷದ ಪರವಾಗಿರುವ ಮಂತ್ರಿ ಕಣ್ಣಪ್ಪನ್ ಆಗಲಿ ಅವರ ಭಾಷಣದ ವೇಳೆಯಲ್ಲಿ ಅವರ ಸ್ವಾಧೀನ ಇಂತಹ ಆಯುಧಗಳಿದ್ದವು ಎಂಬುದಕ್ಕೆ ಪುರಾವೆಗಳಿಲ್ಲ. ಆದುದರಿಂದ ಅವರ ಭಾಷಣಗಳು ಸೆಕ್ಷನ್ ೩(b) ಪ್ರಕಾರ ಅಪರಾಧವಾಗುವುದಿಲ್ಲ. ಆದರೂ ಕಣ್ಣಪ್ಪನವರನ್ನು ಸಹ ಸೆರೆಮನೆಗೆ ಅಟ್ಟಲು ತಮಿಳುನಾಡಿನ ಮುಖ್ಯಮಂತ್ರಿಯವರು ಈಗ ಹೊಂಚುಹಾಕುತ್ತಿದ್ದಾರೆ. ಇದಕ್ಕೆ ರಾಜಕೀಯವಾದ ಪರಸ್ಪರ ವೈರತ್ವವೇ ಮೂಲ ಕಾರಣ. ಉತ್ತರಪ್ರದೇಶದಲ್ಲಿ ಹಿಂದೆ ಮುಖ್ಯಮಂತ್ರಿಯಾಗಿದ್ದ ಮಾಯಾವತಿಯವರು ರಾಜ ಭಯ್ಯಾರನ್ನು ಇದೇ ರೀತಿ ಸೆರೆಮನೆಗೆ ಸೇರಿಸಿದ್ದರು. ಮುಲಾಯಂ ಸಿಂಗ್ ಮುಖ್ಯಮಂತ್ರಿ ಆದೊಡನೆ ಅವರ ಬಿಡುಗಡೆಗೆ ಆಜ್ಞೆ ಮಾಡಿದರು. ಆದರೆ ಮೇಜಿಸ್ಟ್ರೇಟ್ ಅವರ ಆಜ್ಞೆಯನ್ನು ಪಾಲಿಸಲಿಲ್ಲ. ಅವರು ಕಾಯಿದೆಗೆ ಒಳಗಾಗಿ ಸ್ಥಾನಬದ್ಧತೆಗೆ ಒಳಗಾದವರು, ಆದುದರಿಂದ ಅವರ ಸ್ಥಾನಬದ್ಧತೆಯ ರದ್ದತಿಯು ಕೂಡಾ ಕಾಯಿದೆಯ ಪ್ರಕಾರವೇ ಆಗಬೇಕು. ಮುಖ್ಯಮಂತ್ರಿಗಳ ಆಜ್ಞೆಯಿಂದ ಅವರ ಬಿಡುಗಡೆಯನ್ನು ಸಮರ್ಥಿಸಲು ಸಾಧ್ಯವಾಗದು ಎಂಬುದು ನ್ಯಾಯಾಧೀಶರ ನಿಲುವು.

ಜಾರ್‌ಕಂಡ್ ರಾಜ್ಯವು ಬಿಜೆಪಿ ಪಕ್ಷದಿಂದ ಆಳಲ್ಪಡುವ ರಾಜ್ಯ. ಈ ರಾಜ್ಯದಲ್ಲಿ ಈಗಾಗಲೇ ೭೦೦ ಮಂದಿಯನ್ನು ಈ ಕಾಯಿದೆಯ ಪ್ರಕಾರ ಸ್ಥಾನಬದ್ಧತೆಯಲ್ಲಿ ಇಡಲಾಗಿದೆ. ಈಗ್ಗೆ ೭ ತಿಂಗಳುಗಳಿಂದ ಅವರು ಸೆರೆಮನೆಯಲ್ಲಿ ಕೊಳೆಯುತ್ತಿದ್ದಾರೆ. ಅವರೆಲ್ಲರೂ ತೀರಾ ಬಡವರು. ಅವರು ಮಾಡಿದ ತಪ್ಪೇನು ಎಂದು ಈವರೆಗೆ ಅವರಿಗೆ ತಿಳಿಸಲಾಗಿಲ್ಲ. ಇವರಲ್ಲಿ ೧೪ರಿಂದ ೨೦ ವರ್ಷಗಳ ವಯಸ್ಸಿನ ಅನೇಕ ಮಕ್ಕಳೂ ಸೇರಿದ್ದಾರೆ. ಪೂನಂದೇವಿ ಎಂಬ ಹುಡುಗಿಗೆ ೨೦ ವರ್ಷ ಪ್ರಾಯ. ಅವಳ ತಾಯಿ ತಲೆತಪ್ಪಿಸಿಕೊಂಡಿದ್ದಾಳೆ ಎಂದು ಪೊಲೀಸು ವರದಿಯಲ್ಲಿ ಹೇಳಲಾಗಿದೆ. ತಂದೆ ರೋಗಗ್ರಸ್ತ. ಅವಳ ಓರ್ವ ತಂಗಿಗೆ ಈಗ ೧೪ ವರ್ಷ ಪ್ರಾಯ. ಅವರಿಗೆ ಊಟಕ್ಕೆ ಗತಿಯಿಲ್ಲ. ಈ ಬಾಲಕಿ ಭಿಕ್ಷೆ ಬೇಡಿ ತನ್ನ ತಂದೆಯ ಶುಶ್ರೂಷೆಯನ್ನು ನಡೆಸುತ್ತಿದ್ದಾಳೆ ಎಂಬ ವಿಷಯ ಯಾರಿಗೂ ಕನಿಕರ ತಾರದೆ ಇರದು. ಪೂನಂಳನ್ನು ಜಾಮೀನಿನಲ್ಲಿ ಬಿಡುಗಡೆ ಮಾಡಬೇಕೆಂದು ಮಾರ್ಚ್ ೨೭ರಂದು ನ್ಯಾಯಾಧೀಶರು ಹುಕುಂ ಮಾಡಿದ್ದಾರೆ. ಆದರೆ ಈ ಜಾಮೀನು ನೀಡಲು ಆ ೧೪ ವರ್ಷದ ಹುಡುಗಿ ಎಲ್ಲಿಂದ ಜಾಮೀನಿಗೆ ಜನ ತರಲು ಸಾಧ್ಯ ? ಅಂತೆಯೇ ಇನ್ನಿರ್ವ ಹುಡುಗಿಯರಿಗೂ ಜಾಮೀನು ಹುಕುಂ ಆಗಿದೆ. ಆದರೆ ಜಾಮಿನು ನೀಡಲು ಜನರಿಲ್ಲ. ಫಲಿತಾಂಶವಾಗಿ ಅವರು ಜೈಲಿನಲ್ಲಿಯೇ ಕೊಳೆಯಬೇಕಾಗಿದೆ.

ಆದರೆ ಈ ಸಂಘಪರಿವಾರದವರಿಗೆ ಕಣ್ಣಲ್ಲಿ ನೀರಿಲ್ಲ. ಪರಧರ್ಮಿಗಳ ದೃಶ್ಯವೇ ಅವರ ಪೌಷ್ಟಿಕ ಆಹಾರ. ಹಿಂದೂ ರಾಷ್ಟ್ರದ ಸ್ಥಾಪನೆಯೇ ಅವರ ಉದ್ದೇಶ. ಈ ಉದ್ದೇಶವನ್ನು ಸಾಧಿಸಬೇಕಾದರೆ ಅದಕ್ಕೆ ಸರ್ವಾಧಿಕಾರದ ಸರಕಾರದ ಅಗತ್ಯವಿದೆ. ಅದರ ನಿಜವಾದ ತತ್ವ ಫ್ಯಾಸಿಸ್ಟ್ ತತ್ವ. ಈ ತತ್ವದಲ್ಲಿ ಸರ್ವಾಧಿಕಾರದ ಸರಕಾರ ಸ್ಥಾಪನೆಗೆ ನೇರವಾದ ದಾರಿಯನ್ನು ತೋರಿಸಲಾಗಿದೆ. ಇಂದಿನ ಕಾಯಿದೆ ಕಾನೂನು ಸಂವಿಧಾನಗಳನ್ನು ಅವರು ಮನ್ನಿಸುವವರಲ್ಲ. ಮನ್ನಿಸಿದರೆ ತಮ್ಮ ಅಂತಿಮ ಗುರಿಯನ್ನು ತಲುಪಲು ತಡೆಯಾಗುತ್ತದೆ. ತೊಗಾಡಿಯಾರವರು ಈ ದಾರಿಯಲ್ಲಿ ಶೀಘ್ರವಾಗಿ ಹೆಜ್ಜೆ ಇಡುತ್ತಿದ್ದಾರೆ. ಅವರ ಹಿಂಬಾಲಕರಿಗೆ ದಾರಿದೀಪವಾಗಿ ತನ್ನನ್ನು ಪರಿವರ್ತಿಸಿಕೊಂಡಿದ್ದಾರೆ.

ಇದೇ ರೀತಿ ಮುಂದುವರಿದರೆ ಅವರ ಗುರಿಯನ್ನು ತಲಪಲು ಅವರಿಗೆ ಹೆಚ್ಚಿನ ಸಮಯ ಬೇಕಾಗಲಾರದು ಎಂದು ಈಗಾಗಲೇ ಸದ್ಗುಣಗಳಿಂದ ಕೂಡಿದ ಮಹನೀಯರಿಗೆ ವೇದ್ಯವಾಗಿದೆ. ಈ ಅರಿವು ಬಹುತೇಕ ಮಂದಿಯ ಮನಸ್ಸಿಗೆ ನಾಟಿದರೆ ಮಾತ್ರ ನಮ್ಮ ರಾಷ್ಟ್ರ ಪ್ರಜಾಪ್ರಭುತ್ವ ರಾಷ್ಟ್ರವಾಗಿ ಉಳಿದೀತು. ತಪ್ಪಿದರೆ ಸಮಾಧಿಯೊಳಗಿರುವ ಹಿಟ್ಲರ್, ಮುಸಲೋನಿ ಇವರು ಭಾರತದಲ್ಲಿರುವ ತಮ್ಮ ಉತ್ತರಾಧಿಕಾರಿಗಳು ತಾವು ಹಾಕಿಕೊಟ್ಟ ದಾರಿಯಲ್ಲಿ ನಡೆಯುತ್ತಿದ್ದಾರೆ ಎಂಬ ಸಂತೋಷದಿಂದ ಅವರ ಸಮಾಧಿಯಿಂದ ಎದ್ದುಬಂದು ಈ ಸಂಘಪರಿವಾರದ ಮುಖಂಡರುಗಳ ಕೈಕುಲುಕಿ ಅವರಿಗೆ ತಮ್ಮ ಅಭಿನಂದನೆಯನ್ನು ಸಲ್ಲಿಸಿ ಹಾಗೆಯೇ ಅವರನ್ನು ಆಶೀರ್ವದಿಸಿ ಮತ್ತೆ ತಮ್ಮ ಸಮಾಧಿಗಳ ಸ್ಥಳಕ್ಕೆ ಹಿಂತಿರುಗಿ ನಿಶ್ಚಿಂತೆಯಿಂದ ನಿದ್ರಿಸಲು ಅವಕಾಶವಾಗುವ ಪರಿಸ್ಥಿತಿಯ ಬಳಿಗೆ ನಮ್ಮ ರಾಷ್ಟ್ರ ಈಗ ತಲುಪಿದೆ. ಇದರ ಕುರಿತು ಸಂಶಯಪಡುವ ಅಗತ್ಯವಿಲ್ಲ.

ಕ್ರಾಂಗ್ರೆಸ್ಸಿಗರದ್ದು ಕೋಟಾ ರಾಜ್ಯ
ಬಿಜೆಪಿಗಳದ್ದು ಪೋಟಾ ರಾಜ್ಯ
ಈ ಪೋಟಾ ರಾಜ್ಯವೇ ವಾಜಪೇಯಿಯವರ
ರಾಜಧರ್ಮ.

ಈ ಪರಿಸ್ಥಿತಿಯಲ್ಲಿ ನಮ್ಮ ಸಂವಿಧಾನದ ಪೀಠಿಕೆಯಲ್ಲಿ ಉಲ್ಲೇಖಿಸಲಾದ ಜಾತ್ಯತೀತತೆ, ಪ್ರಜಾಪ್ರಭುತ್ವ, ಸಮಾಜವಾದಗಳು ತಮ್ಮನ್ನು ರಕ್ಷಿಸಿ ಎಂದು ಕೂಗಿ ಹೇಳುತ್ತಿವೆ. ಈ ಕಳಕಳಿಯ ಕರೆಗೆ 'ಓ'ಗೊಟ್ಟು ಅವುಗಳನ್ನು ರಕ್ಷಿಸುವುದೇ ಜನಸಮುದಾಯದ ನಿಜವಾದ ರಾಜಧರ್ಮ. ಈ ಧರ್ಮವನ್ನು ರಕ್ಷಿಸಲು ಜನಸಮುದಾಯ ಶೀಘ್ರವಾಗಿ ಮುಂದೆ ಬರಲಿ ಎಂದು ಹಾರೈಸೋಣ.

**ಪಿ. ಎಂ. ಎನ್. ಮೂರ್ತಿ**
೨. ೪-೨೩೭/೨೪, ಭಾರತೀನಗರ, ಬಿಜೈ
ಮಂಗಳೂರು - ೫೭೫ ೦೦೪

೨೦೦೨ರ ಡಿಸೆಂಬರ್ ಕಡೆಯ ವಾರ, ಕ್ರಿಸ್ಮಸ್ ಹಬ್ಬ ಮುಗಿಸಿ ಹೊಸ ವರ್ಷದ ಸಂಭ್ರಮಾಚರಣೆಗೆ ಸಿದ್ಧವಾಗುತ್ತಿದ್ದ ಜನತೆಗೆ ಅಚ್ಚರಿಯ ಸುದ್ದಿಯೊಂದು ಕಾದಿತ್ತು. ಮೂವತ್ತೊಂದು ವರ್ಷದ ಅಮೆರಿಕನ್ ಮಹಿಳೆಯ ಡಿ.ಎನ್.ಎ.ಯಿಂದ ಈವ್ ಎಂಬ ತದ್ರೂಪಿ ಹೆಣ್ಣು ಮಗು ದಿನಾಂಕ ೨೬.೧೨.೨೦೦೨ರಂದು ಜನಿಸಿರುವುದಾಗಿ ಅಮೆರಿಕೆಯ ಕ್ಲೋನೇಯ್ಡ್ ಸಂಸ್ಥೆಯ ಮುಖ್ಯಸ್ಥೆ ಹಾಗೂ ರೇಲಿಯನ್ ಪಂಥದ ಅನುಯಾಯಿ ಬ್ರಿಗಿಟ್ ಬೊಯ್ಸೆಲಿಯರ್ ೪೬ರ ಸುದ್ದಿಗೋಷ್ಠಿಯಲ್ಲಿ ಪ್ರಕಟಿಸಿದಾಗ ನಾಗರಿಕ ಜಗತ್ತಿಗೆ ರೋಮಾಂಚನ ಮತ್ತು ಆತಂಕ ಮಿಶ್ರಿತವಾದ ವಿಶಿಷ್ಟ ಅನುಭವ. ಈ ಹಿಂದೆ ೧೯೯೬ರ ಫೆಬ್ರವರಿಯಲ್ಲಿ ಸ್ಕಾಟ್ಲೆಂಡಿನ ಎಡಿನ್‌ಬರೋನ ರೋಸ್ಲಿನ್ ಇನ್‌ಸ್ಟಿಟ್ಯೂಟ್‌ನಲ್ಲಿ ಡಾ|| ವಿಲ್ಮಟ್ ಹಾಗೂ ಅವರ ಸಹವರ್ತಿಗಳು ಕ್ಲೋನಿಂಗ್ ವಿಧಾನದಿಂದ ಡಾಲಿ ಎಂಬ ಕುರಿಮರಿಯೊಂದರ ಹುಟ್ಟಿಗೆ ಕಾರಣವಾಗಿದ್ದನ್ನು ಇಲ್ಲಿ ಸ್ಮರಿಸಬಹುದು. ಅಂದಿನಿಂದಲೇ ಪ್ರಾರಂಭವಾದ ಮಾನವ ತದ್ರೂಪುಗಳ ಬಗೆಗಿನ ವಿವಾದ ಈಗ ಕುತೂಹಲದ ಘಟ್ಟ ತಲುಪಿದೆ. ಏಕೆಂದರೆ ಪ್ರಸ್ತುತ ಕ್ಲೋನಿಂಗ್ ವಿಧಾನದಿಂದ ಮಾನವ ತದ್ರೂಪಿಯನ್ನು ಸೃಷ್ಟಿಸಿರುವುದಾಗಿ ಹೇಳಿಕೊಂಡಿರುವ ಬ್ರಿಗಿಟ್ ಬೊಯ್ಸೆಲಿಯರ್ ಭೂಗ್ರಹದ ಮಾನವ ಜೀವಿಗಳನ್ನು ಸುಮಾರು ೨೫೦೦೦ ವರ್ಷಗಳ ಹಿಂದೆ ಎಲೋಹಿಮ್‌ಗಳೆಂಬ ಅನ್ಯಗ್ರಹ ಜೀವಿಗಳು ತಮ್ಮದೇ ದೇಹದ ಜೀವಕೋಶಗಳನ್ನು ಬಳಸಿ ಕ್ಲೋನಿಂಗ್ ವಿಧಾನದಿಂದ ಸೃಷ್ಟಿಸಿದುದಾಗಿ ನಂಬುವ ರೇಲಿಯನ್ ಪಂಥಕ್ಕೆ ಸೇರಿದಾಕೆ. ಅಲ್ಲದೆ ಆಕೆ ಕ್ಲೋನಿಂಗ್ ವಿಧಾನದಿಂದ ಹುಟ್ಟಿದೆ ಎಂದು ಹೇಳಲಾದ ಮಗುವಿನ ಡಿ.ಎನ್.ಎ. ಪರೀಕ್ಷೆ ನಡೆಸಿ ಮುಂದಿನ ೮-೯ ದಿನಗಳಲ್ಲಿ ತಮ್ಮ ಸಂಸ್ಥೆಯ ಸಾಧನೆಗೆ ಪುರಾವೆ ಒದಗಿಸುವುದಾಗಿ ತಿಳಿಸಿದ್ದಳಾದರೂ, ತತ್ಸಂಬಂಧದ ಯಾವುದೇ ಪರೀಕ್ಷೆಗೂ ಈ ದಿನದವರೆವಿಗೂ ಕ್ಲೋನಿಂಗ್‌ನಿಂದ ಜನ್ಮ ತಳೆದುದೆನ್ನಲಾದ ಮಗುವನ್ನು ಒಳಪಡಿಸಲಾಗಿಲ್ಲ. ಇಷ್ಟೇ ಅಲ್ಲದೆ ರೇಲಿಯನ್ ಪಂಥದ ಪ್ರವಾದಿ ಎನ್ನಲಾದ ಕ್ಲೌಡ್ ವೊರಿಲಾನ್‌ನ ತದ್ರೂಪಿಗಳ ಬಗೆಗಿನ ವಾದ ಸಂಪೂರ್ಣ ಕಾಲ್ಪನಿಕವಾದದ್ದಾಗಿದ್ದು ಅಸಂಬದ್ಧ ಪ್ರಲಾಪಗಳಿಂದ ಕೂಡಿದೆ ಎಂಬುದು ತಜ್ಞರ ಅಭಿಮತ. ಹೀಗಿರುವಾಗ ಅಂತಹ ವ್ಯಕ್ತಿಯ ಅನುಯಾಯಿಗಳ ಮಾತುಗಳು ಎಷ್ಟರ ಮಟ್ಟಿಗೆ ನಂಬಿಕೆಗೆ ಯೋಗ್ಯ ಎನ್ನುವುದೇ ಈಗಿನ ಪ್ರಶ್ನೆ.

# ರೇಲಿಯನ್ ಪಂಥ ಮತ್ತು ಮಾನವ ತದ್ರೂಪಿಗಳು

ರೇಲಿಯನ್ ಪಂಥದ ಸಂಸ್ಥಾಪಕ ಅಥವಾ ಪ್ರವಾದಿ ಎನ್ನಲಾದ ಕ್ಲೌಡ್ ವೊರಿಲಾನ್ ಫ್ರಾನ್ಸ್ ದೇಶದ ಮೋಟಾರು ಕ್ರೀಡೆಯ ಪತ್ರಿಕಾ ವರದಿಗಾರ ಹಾಗೂ ರೇಸ್ ಕಾರ್ ಚಾಲಕ. ತನ್ನನ್ನು ಸಂದೇಶವಾಹಕ ಎಂದು ಸ್ವಯಂ ಘೋಷಿಸಿಕೊಂಡಿರುವ ಈತ ಡಿಸೆಂಬರ್ ೧೩, ೧೯೭೩ರಲ್ಲಿ ಫ್ರಾನ್ಸಿನ ಕ್ಲರ್ಮಂಟ್-ಫರಾಂಡ್ ಅಗ್ನಿ ಪರ್ವತದ ಬಳಿ ಬೆಳ್ಳಂಬೆಳ್ಳಗೆ ಹೊಳೆಯುವ ಸುಮಾರು ೭ಮೀ. ವ್ಯಾಸದ U.F.O. (ಗುರುತಿಸಿರದ ಆಕಾಶಕಾಯ) ವೊಂದು ಮೆಲ್ಲಗೆ ನಿಶ್ಯಬ್ದವಾಗಿ ಚಲಿಸುತ್ತಿರುವುದನ್ನು ಕಂಡನಂತೆ. ಅಂತರಿಕ್ಷ ಕಾಯದಿಂದ ಕೆಳಗಿಳಿದ ತೇಜಃ ಪುಂಜನಾದ ವ್ಯಕ್ತಿಯೊಬ್ಬ ವೊರಿಲಾನ್‌ನಿಗೆ ಭೂಮಿಯ ಮಾನವ ಜೀವಿಗಳನ್ನು ೨೫೦೦೦ ವರ್ಷಗಳ ಹಿಂದೆ ಸ್ವತಃ ತಮ್ಮ ಡಿ.ಎನ್.ಎ.ಯನ್ನೇ ಬಳಸಿ ಕ್ಲೋನಿಂಗ್ ವಿಧಾನದಿಂದ ಸೃಷ್ಟಿಸಿದುದಾಗಿ ಮನುಕುಲದ ಹುಟ್ಟಿನ ಬಗೆಯನ್ನು ವಿವರಿಸಿ ಹೇಳಿದುದಲ್ಲದೆ ಅವನಿಗೆ 'ರೇಲ್' (ತಮ್ಮ ಸಂದೇಶವಾಹಕ) ಎಂದು ಹೊಸ ನಾಮಾಂಕಿತವನ್ನು ನೀಡಿ ಆಶೀರ್ವದಿಸಿದನಂತೆ.

ಸಿದ್ಧರಾಜು ಕೊತ್ತತ್ತಿ

**ರೇಲಿಯನ್‌ಗಳೆಂದರೆ ಯಾರು ?**

ಈ ಭೂಗ್ರಹದಲ್ಲಿ ಜೀವಿಗಳ ಸಾವಯವ ವಿಕಾಸದಂತೆ ಸಾಮಾಜಿಕ ವಿಕಾಸವೂ ಕೂಡ ಒಂದು ನಿರಂತರ ಪ್ರಕ್ರಿಯೆ. ಹೀಗಾಗಿ ಧಾರ್ಮಿಕವಾದಿಗಳ ಪ್ರಕಾರ ಮಾನವ ಜೀವಿಗಳ ಸೃಷ್ಟಿಗೆ ಕಾರಣರೆನ್ನಲಾದ ಪ್ರಾಚೀನ ಗ್ರೀಕ್, ಈಜಿಪ್ಟ್, ಚೀನಾ ಹಾಗೂ ಸುಮೇರಿಯಾ ನಾಗರಿಕತೆಗಳ ದೇವರುಗಳೆಲ್ಲಾ ಕಾಲಾಂತರದಲ್ಲಿ ಮ್ಯೂಸಿಯಂಗಳನ್ನು ಸೇರಬೇಕಾಯ್ತು. ವಿಜ್ಞಾನ ತಂತ್ರಜ್ಞಾನದ ಬೆಳವಣಿಗೆಯಿಂದ ನಾಗರಿಕ ಜಗತ್ತು ವೈಮಾನಿಕ ಕ್ಷೇತ್ರಕ್ಕೆ ಪ್ರವೇಶಿಸಿದಾಗ ನಿಗೂಢತೆಯ ಬಗೆಗೆ ಸಹಜವಾಗಿ ಕುತೂಹಲಿಯಾದ ಮಾನವ ಮನಸ್ಸು ಅನ್ಯಗ್ರಹಗಳಲ್ಲಿ ಜೀವಿಗಳ ಅಸ್ತಿತ್ವ, ಅವರ ರೂಪ, ನಾಗರಿಕತೆಯ ವಿಕಾಸ ಹಾಗೂ ವೈಜ್ಞಾನಿಕ ಸಾಧನೆಯ ಬಗ್ಗೆ ತನ್ನ ಸೃಜನಶೀಲ ಕಲ್ಪನೆಯ ತೆರೆಯ ಮೇಲೆ ವಿಭಿನ್ನ ರೀತಿಯ ಚಿತ್ರಣ ಮೂಡಿಸತೊಡಗಿದ್ದರಿಂದ ಆಯಾ ಕಾಲಘಟ್ಟಗಳಲ್ಲಿ ಈ ವಿಷಯದ ಬಗೆಗೆ ಸಾಕಷ್ಟು ಕಾಲ್ಪನಿಕ ಕತೆಗಳು ಪ್ರಕಟಗೊಂಡವು. ಕಲ್ಪನೆ ಮತ್ತು ನೈಜತೆಯನ್ನು ಪ್ರತ್ಯೇಕಿಸಿ ನೋಡುವ ಪ್ರಬುದ್ಧತೆ ಇರದ ಅಥವಾ ವೈಜ್ಞಾನಿಕ ಕಲ್ಪನೆಯ ರೋಚಕತೆಯನ್ನೇ ಬಳಸಿ ಸಂಪತ್ತು ರೂಢಿಸಬಯಸಿದ ಜನ ಅನ್ಯಗ್ರಹ ಜೀವಿಗಳ ಬಗೆಗೆ ಪೂರ್ವಾಗ್ರಹಪೀಡಿತ ಮನಸ್ಸಿನಿಂದ ಅಂತರಿಕ್ಷದೆಡೆಗೆ ಕಣ್ಣು ಹಾಯಿಸಿದಾಗ ಅವರಿಗೆ ಕೃತಕ ಉಪಗ್ರಹಗಳು, ಹವಾಮಾನ ಸಮೀಕ್ಷೆಗಾಗಿ ಅಂತರಿಕ್ಷದಲ್ಲಿ ಹಾರಿಬಿಡಲಾದ ಬಲೂನುಗಳು, ಭೂವಾತಾವರಣವನ್ನು ಪ್ರವೇಶಿಸಿದಾಗ ಹೊತ್ತಿ ಉರಿಯುವ ಉಲ್ಕೆ ಮುಂತಾದವುಗಳು ಅನ್ಯಗ್ರಹ ಜೀವಿಗಳು ವಿಹರಿಸುತ್ತಿರುವ ವ್ಯೋಮ ನೌಕೆಗಳಿರಬಹುದೇ ? ಎಂಬ ಭ್ರಮೆ ಹುಟ್ಟಿಸತೊಡಗಿದವು. ಖಗೋಳ ವಿಜ್ಞಾನದ ಬೆಳವಣಿಗೆಯಿಂದ ಬ್ರಹ್ಮಾಂಡದ ಅನಂತತೆ ಹಾಗೂ ಗೆಲಾಕ್ಸಿಗಳ ಬಗೆಗೆ ಅರಿವು ಹೆಚ್ಚಿದಂತೆಲ್ಲಾ ಈ ನಂಬಿಕೆಗಳೂ ಕೂಡ ವಿಭಿನ್ನ ರೂಪ ಪಡೆದುಕೊಂಡವು. ಹೀಗಾಗಿ ಭೂಮಿಯ ಮೇಲೆ ಯಾವುದೋ ಗೆಲಾಕ್ಸಿಯಿಂದ ಬಂದ ಅನ್ಯಗ್ರಹ ಜೀವಿಗಳು ಇಲ್ಲಿ ಜೀವದ ಬಿತ್ತನೆ ಮಾಡಿ ಹೋಗಿರಬಹುದೇ ಎಂದು ತರ್ಕಿಸುವ ಕೆಲವು ಪಂಥಗಳೂ ಹುಟ್ಟಿಕೊಂಡವು. ವೃಷಭ ರಾಶಿಯ ಕೃತ್ತಿಕಾ ನಕ್ಷತ್ರಪುಂಜಗಳಿಂದ ಬಂದ ಕೃತ್ತಿಕನ್ನರು ಭೂಮಿಯ ಮೇಲೆ ಜೀವ ಸಂಕುಲಗಳ ಬಿತ್ತನೆ ಮಾಡಿದ್ದಾಗಿಯೂ ಹಾಗೂ 'ತಮ್ಮ ತತ್ವಾದರ್ಶಗಳನ್ನು ಪ್ರಚುರಪಡಿಸಲು ತನ್ನನ್ನು ಅವರ ಪ್ರವಾದಿ (ಸಂದೇಶ ವಾಹಕ)ಯಾಗಿ ಆಯ್ಕೆ ಮಾಡಿಕೊಂಡಿದ್ದಾಗಿ **ಬಾರ್ಬರಾ ಮಾರ್ಸಿನಿಯಾಕ್** ಎಂಬ ಮಹಿಳೆ ಹೇಳಿಕೊಳ್ಳುತ್ತಾಳೆ. ಆಕೆಯ ಪುಸ್ತಕ *'Bringers of the Dawn'*ದಲ್ಲಿ ಜನಗಳು ಇಹಲೋಕದ ಜಂಜಾಟ, ಸಂಬಂಧಗಳಿಂದ ಮುಕ್ತರಾದರೆ ಅವರು ಅನಂತ ವಿಶ್ವದಲ್ಲಿ ಸೇರಿಹೋಗುತ್ತಾರೆ ಎಂದು ಹೇಳುತ್ತಾಳೆ. ತನ್ನ ಮತ್ತೊಂದು ಪುಸ್ತಕ *'Comes the Awakening-Realizing the divine nature of who you are'*ದಲ್ಲಿ ಅನ್ಯಗ್ರಹ ಜೀವಿಗಳ ಬಗೆಗೆ ಜನರ ಭಾವನೆಗಳನ್ನು ಎಷ್ಟರಮಟ್ಟಿಗೆ ಉದ್ರೇಕಿಸಿಬಿಟ್ಟಳೆಂದರೆ ಆ ಪುಸ್ತಕದ ೨,೮೦,೦೦೦ ಪ್ರತಿಗಳು ಮಸಾಲೆ ದೋಸೆಗಳಂತೆ ಬಹುಬೇಗ ಬಿಕರಿ



ಯಾಗಿಬಿಟ್ಟವು. ಇದನ್ನು ಕಂಡ ಇತರೆ ಅನೇಕ ಬರಹಗಾರರು ಕೂಡ ಜನರ ಈ ಬಗೆಯ ನಂಬಿಕೆಗಳನ್ನೇ ಆಧಾರವಾಗಿಟ್ಟುಕೊಂಡು ಅದನ್ನು ರೋಚಕವಾಗಿ ಚಿತ್ರಿಸುವ ಪುಸ್ತಕಗಳನ್ನು ಬರೆದು ಹಣ ಮಾಡಿಕೊಂಡರು. ಕೆಲವರು ಈ ವಿಷಯದ ಬಗೆಗೆ ಚಲನಚಿತ್ರಗಳನ್ನೂ ಮಾಡಿ ಜನರ ಕುತೂಹಲಕ್ಕೆ ಮತ್ತಷ್ಟು ಮಸಾಲೆ ಅರೆದು ಸಾಕಷ್ಟು ಹಣ ದೋಚಿದರು. ಮಾನವ ಕ್ಲೋನಿಂಗ್‌ನ ಬಗೆಗೆ ವಿವಾದವನ್ನೇ ಸೃಷ್ಟಿಸಿರುವ ರೇಲಿಯನ್ ಪಂಥವೂ ಕೂಡ ಈ ರೀತಿಯ ನಂಬಿಕೆಗಳ ಮೇಲೆಯೇ ಹುಟ್ಟಿಕೊಂಡಿರುವಂಥದು.

ರೇಲಿಯನ್ ಪಂಥದ ಸಂಸ್ಥಾಪಕ ಅಥವಾ ಪ್ರವಾದಿ ಎನ್ನಲಾದ ಕ್ಲೌಡ್ ವೊರಿಲಾನ್ ಫ್ರಾನ್ಸ್ ದೇಶದ ಮೋಟಾರು ಕ್ರೀಡೆಯ ಪತ್ರಿಕಾ ವರದಿಗಾರ ಹಾಗೂ ರೇಸ್‌ಕಾರ್ ಚಾಲಕ.

ತನ್ನನ್ನು ಸಂದೇಶವಾಹಕ ಎಂದು ಸ್ವಯಂ ಘೋಷಿಸಿಕೊಂಡಿರುವ ಈತ ಡಿಸೆಂಬರ್ ೧೩, ೧೯೭೩ರಲ್ಲಿ ಫ್ರಾನ್ಸಿನ ಕ್ಲರ್ಮಾಂಟ್-ಫರಾಂಡ್ ಅಗ್ನಿ ಪರ್ವತದ ಬಳಿ ಬೆಳ್ಳಂಬೆಳ್ಳಗೆ ಹೊಳೆಯುವ ಸುಮಾರು ೭ಮೀ. ವ್ಯಾಸದ U.F.O. (ಗುರುತಿಸಿರದ ಆಕಾಶಕಾಯ)ವೊಂದು ಮೆಲ್ಲಗೆ ನಿಶ್ಶಬ್ದವಾಗಿ ಚಲಿಸುತ್ತಿರುವುದನ್ನು ಕಂಡನಂತೆ. ಅಂತರಿಕ್ಷಕಾಯದಿಂದ ಕೆಳಗಿಳಿದ ತೇಜಃಪುಂಜನಾದ ವ್ಯಕ್ತಿಯೊಬ್ಬ ವೊರಿಲಾನ್‌ನಿಗೆ ಭೂಮಿಯ ಮಾನವ ಜೀವಿಗಳನ್ನು ೨೫೦೦೦ ವರ್ಷಗಳ ಹಿಂದೆ ಸ್ವತಃ ತಮ್ಮ ಡಿ.ಎನ್.ಎ. ಯನ್ನೇ ಬಳಸಿ ಕ್ಲೋನಿಂಗ್ ವಿಧಾನದಿಂದ ಸೃಷ್ಟಿಸಿದುದಾಗಿ ಮನುಕುಲದ ಹುಟ್ಟಿನ ಬಗೆಯನ್ನು ವಿವರಿಸಿ ಹೇಳಿದುದಲ್ಲದೆ ಅವನಿಗೆ **'ರೇಲ್'** (ತಮ್ಮ ಸಂದೇಶವಾಹಕ) ಎಂದು ಹೊಸ ನಾಮಾಂಕಿತವನ್ನು ನೀಡಿ ಆಶೀರ್ವದಿಸಿದನಂತೆ. ಈಗ ಭೂವಾಸಿ ಮಾನವರು ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಪ್ರಗತಿ ಹೊಂದಿದ್ದು ತಮ್ಮ ಹುಟ್ಟಿನ ತಾಂತ್ರಿಕ ಸಂಕೀರ್ಣತೆ ಹಾಗೂ ವಿಧಾನವನ್ನು ಗ್ರಹಿಸುವಷ್ಟು ಪ್ರಬುದ್ಧರಾಗಿರುವುದರಿಂದ ತಾವೀಗ ಭೂಮಿಗೆ ಮರಳಿ ಬಂದು ತಾವೇ ಸೃಷ್ಟಿಸಿದ ಇಲ್ಲಿನ ಮಾನವ ಜೀವಿಗಳೊಡನೆ ಸಂಪರ್ಕವಿರಿಸಿಕೊಳ್ಳಲು ಬಯಸಿರುವುದಾಗಿ ತಿಳಿಸಿ, ಇದಕ್ಕಾಗಿ ತಮ್ಮನ್ನು ಸ್ವಾಗತಿಸಲು ಹಾಗೂ ಇಲ್ಲಿನ ಜಾಗತಿಕ ಸರ್ಕಾರಗಳೊಡನೆ ವ್ಯವಹರಿಸುವುದಕ್ಕಾಗಿ ರಾಯಭಾರ ಕಛೇರಿಯೊಂದನ್ನು ತೆರೆಯುವಂತೆ ರೇಲ್‌ಗೆ ಸೂಚಿಸಿದನಂತೆ. ರೇಲ್ *'The True Face of God'* ಎಂಬ ತನ್ನ ಪುಸ್ತಕದಲ್ಲಿ ಹೇಳಿಕೊಳ್ಳುವಂತೆ ಅನ್ಯಗ್ರಹ ಜೀವಿಗಳು ೧೯೭೫ರಲ್ಲಿ ಆತನನ್ನು U.F.O.ವೊಂದರಲ್ಲಿ ಕೂರಿಸಿಕೊಂಡು (ಕನಸಿನಲ್ಲಿರಬಹುದೆ ?) ಎಲೋಹಿಮ್ ಎಂಬ ಗ್ರಹವೊಂದಕ್ಕೆ ಕೊಂಡೊಯ್ದಿದ್ದರಂತೆ. ಅಲ್ಲಿ ಇವನಿಗೆ ಪ್ರಾಚೀನ ಜಗತ್ತಿನ ದಾರ್ಶನಿಕರಾದ ಬುದ್ಧ, ಜೀಸಸ್, ಜೋಸೆಫ್, ಸ್ಮಿತ್, ಕನ್ಫೂಷಿಯಸ್ ಮುಂತಾದವರನ್ನು ಪರಿಚಯಿಸಿದರಂತೆ. ವೊರಿಲಾನ್‌ನ ವರ್ಣನೆಯ ಪ್ರಕಾರ **ಎಲೋಹಿಮ್**ಗಳು (ಭೂಮಿಯ ಮನುಕುಲದ ಮೂಲ ಪುರುಷರು ಅಥವಾ ಸೃಷ್ಟಿಕರ್ತರು) ಸುಮಾರು ನಾಲ್ಕು ಅಡಿ ಎತ್ತರದ, ಉದ್ದನೆಯ ಕಪ್ಪು ಕೂದಲಿನ, ತೆಳು ಹಸಿರು ಮೈಬಣ್ಣದ ಹಾಗೂ ಬಾದಾಮಿ ಆಕಾರದ ಕಣ್ಣುಗಳಿರುವ ಮಾನವ ರೂಪಿ ಕುಬ್ಜ ಜೀವಿಗಳಂತೆ. ಪ್ರಾಚೀನ ಯಹೂದಿಗಳು ಹಾಗೂ ಕ್ರಿಶ್ಚಿಯನ್ನರ ಕಲ್ಪನೆಯ ಆದಿಮ ದೈವದ ಸ್ವರೂಪ ಇದೇ ಬಗೆಯದು ಎಂಬುದನ್ನಿಲ್ಲಿ ಗಮನಿಸಬೇಕು. ಎಲೋಹಿಮ್‌ಗಳು ವೊರಿಲಾನ್‌ನನ್ನು ನೀನು ರೇಲ್ ಎಂಬ ಹೆಸರಿನ ಕೊನೆಯ ಪ್ರವಾದಿಯೆಂದು ತಿಳಿಸಿದರಲ್ಲದೆ ತಾವು ೨೦೨೫ಕ್ಕೆ ತಮ್ಮ ಸೃಷ್ಟಿಯ ಜೀವಿಗಳನ್ನು ನೋಡುವುದಕ್ಕಾಗಿ ಜೆರುಸಲೇಮ್‌ಗೆ ಬರುವುದಕ್ಕೆ ಮುನ್ನ ಮನುಕುಲಕ್ಕೆ ಶಾಂತಿ ಹಾಗೂ ಇಂದ್ರಿಯಧ್ಯಾನದ ರೇಲಿಯನ್‌ರ ಸಂದೇಶ ಸಾರಲಿಕ್ಕಾಗಿ ಅವನನ್ನು ನೇಮಿಸಿರುವುದಾಗಿ ತಿಳಿಸಿದರಂತೆ. ಪ್ರಸ್ತುತ ರೇಲಿಯನ್ನರ ಕೇಂದ್ರ ಕಛೇರಿ ಮಾಂಟ್ರಿಯಲ್‌ನಲ್ಲಿದ್ದು, ೮೫ ದೇಶಗಳ ೫೦೦೦೦ ಮಂದಿ ಅದರ ಸದಸ್ಯರಂತೆ.

**ರೇಲಿಯನ್ನರ ಬೋಧನೆ**

ಎಲೋಹಿಮ್‌ಗಳು ರೇಲ್‌ನಿಗೆ ಬೋಧನೆ ಮಾಡಿದ ಪ್ರಕಾರ ಸುಮಾರು ೨೫೦೦೦ ವರ್ಷಗಳ ಹಿಂದೆ ಅನ್ಯಗ್ರಹ ಜೀವಿಗಳು ತಮ್ಮ ಡಿ.ಎನ್.ಎ. ಪಡಿಯಚ್ಚಿನಿಂದ ಮಾನವ ಜೀವಿಗಳನ್ನು ಸೃಷ್ಟಿಸಿದುವಂತೆ. ರೇಲ್‌ನ ಪ್ರಕಾರ ಮನುಷ್ಯ ಅಮರತ್ವವನ್ನು ಪಡೆಯಲು ಕ್ಲೋನಿಂಗ್ ಅತ್ಯುತ್ತಮ ವಿಧಾನ. ಹೀಗಾಗಿ ದೇವರು ಅಥವಾ ಆತ್ಮದ ಪರಿಕಲ್ಪನೆ ಸತ್ಯವಾದುದಲ್ಲ. ನಮ್ಮ ಸೃಷ್ಟಿಕರ್ತರು ನಾವು ಸುಂದರವಾಗಿರುವುದನ್ನು ಹಾಗೂ ಲೈಂಗಿಕಾಸಕ್ತರಾಗಿ ಸಾಂಪ್ರದಾಯಿಕ ನೀತಿಕಟ್ಟಳೆಗಳಿಂದ ಮುಕ್ತವಾದ ಇಂದ್ರಿಯ ಸುಖಭೋಗಗಳನ್ನು ಅನುಭವಿಸುತ್ತಾ ಸದಾ ಆನಂದವಾಗಿರುವುದನ್ನು ಬಯಸುತ್ತಾರೆ. ಸಂತಾನಹೀನ ನಿರ್ವೀರ್ಯ ಹಾಗೂ ಸಲಿಂಗಕಾಮಿ ದಂಪತಿಗಳು ಕ್ಲೋನಿಂಗ್ ವಿಧಾನದಿಂದ ಮಕ್ಕಳನ್ನು ಪಡೆಯಲು ನೆರವಾಗುವುದೇ ತಾನು ಆರಂಭಿಸಿರುವ ಕ್ಲೊನಾಯ್ಡ್ ಕಂಪನಿಯ ಉದ್ದೇಶ ಎಂಬುದು ವೊರಿಲಾನ್‌ನ ಹೇಳಿಕೆ. ರೇಲಿಯನ್ ಪಂಥದಲ್ಲಿ ನಮ್ಮ ರಜನೀಶರ ಅಧ್ಯಾತ್ಮದ ರೀತಿ ಲೈಂಗಿಕ ರಸಾತಿರೇಕಕ್ಕೆ ಮುಕ್ತ ಅವಕಾಶ ನೀಡಲಾಗಿದೆ. ರೇಲಿಯನ್ ಪಂಥದ ಇಂತಹ ಮುಕ್ತ ಕಾಮಕೇಳಿಯ ಆಕರ್ಷಣೆ ಸುಲಭವಾಗಿ ಹೆಚ್ಚುಹೆಚ್ಚು ಜನರನ್ನು ತನ್ನತ್ತ ಸೆಳೆಯುವಲ್ಲಿ ಯಶಸ್ವಿಯಾಗಿದೆ. ಅದೃಷ್ಟವಶಾತ್ ರೇಲಿಯನ್ನರು ವ್ಯಾಪಕವಾಗಿ ಕಾಂಡೋಮ್‌ಗಳನ್ನು ಬಳಸುತ್ತಿದ್ದಾರೆ ಎನ್ನುವುದೇ ಸಮಾಧಾನಕರ ಅಂಶ. ರೇಲಿಯನ್ನರ ಪ್ರಕಾರ ಮಾನವ ಸಂಕುಲ ತನಗೆ ಅರಿವಿಲ್ಲದ್ದರ ಬಗ್ಗೆ ಅನಗತ್ಯ ಭೀತಿಯನ್ನು ಹೊಂದಿದೆ. ತಿಳಿವಿನ ಬಾಗಿಲಿನ ಹಿಂದೆ ಅಪರಿಮಿತ ಆನಂದವಿದ್ದರೂ ಅಂಜಿಕೆಯಿಂದ ಆ ಬಾಗಿಲನ್ನೇ ತೆರೆಯದೆ ಆನಂದದ ಆಸ್ವಾದನೆಯಿಂದ ಅದು ವಂಚಿತವಾಗಿದೆ. ತಿಳಿವನ್ನು ಮರೆಮಾಡಿರುವ ಆ ಬಾಗಿಲನ್ನು ತೆರೆಯಲಿಕ್ಕೆ ಕೆಲವರು ಅಡ್ಡಿಯಾಗಿದ್ದಾರೆ. ಹೀಗಾಗಿ ಇಡೀ ಮನುಕುಲ ಸಂಕಟ ಮತ್ತು ಅಜ್ಞಾನದಲ್ಲಿಯೇ ಖಾಯಂ ಆಗಿ ಉಳಿಯುತ್ತಿದೆ. ಮಾನವ ಜೀವಿಗಳೆಲ್ಲಾ ಅನಂತ ವಿಶ್ವದ ಭಾಗಾಂಶವಾಗಿರುವುದರಿಂದ ನಾವು ಪರಸ್ಪರ ಪ್ರೀತಿ ಮತ್ತು ಸಾಮರಸ್ಯದಿಂದ ಬದುಕಬೇಕು ಹಾಗೂ ನಮ್ಮ ಸೃಷ್ಟಿಕರ್ತರಾದ ಎಲೋಹಿಮ್‌ಗಳ ನೀತಿಬೋಧೆಗಳಿಗೆ ಕಿವಿಗೊಡಬೇಕು. ನಮ್ಮ ಮನಸ್ಸನ್ನು ಅದರ ಪೂರ್ಣ ಸಾಮರ್ಥ್ಯದವರೆಗೂ ಪೂರ್ಣವಾಗಿ ಅರಳಲು ಮುಕ್ತವಾಗಿಸಬೇಕು. ಮಕ್ಕಳನ್ನು ಬಯಸುವ ದಂಪತಿಗಳಿಬ್ಬರೂ ತಾವು ಬೌದ್ಧಿಕವಾಗಿ ಇಂತಹ ಪೂರ್ಣಾವಸ್ಥೆಯನ್ನು ತಲುಪಿದ ನಂತರವಷ್ಟೇ ಮಗುವನ್ನು ಪಡೆದರೆ ಎರಡು ಮುಕ್ತ ಜೀವಿಗಳ ಮಿಲನದ ಫಲವಾಗಿ ಉತ್ತಮ ಮಗು ಅವರಿಗೆ ಲಭಿಸುತ್ತದೆ.

ಇಂತಹ ವಿಶಿಷ್ಟ ತೆರನಾದ ಬೋಧನೆಗಳಿಂದ ಪ್ರಭಾವಿತರಾದ ಅನೇಕ ಮಂದಿ ಗುಂಪುಗೂಡಿಕೊಂಡು ರೇಲಿಯನ್ ಪಂಥ ಎಂಬ ಹೊಸ ಮತವನ್ನೇ ಹುಟ್ಟುಹಾಕಿಕೊಂಡರು. ಇವರ ಗುರು ವೊರಿಲಾನ್ ಅಲಿಯಾಸ್ ರೇಲ್ ಜಗತ್ತಿನ ವಿವಿಧ ಧರ್ಮಗಳ ಬೋಧನೆಯ ಮುಖ್ಯಾಂಶಗಳು ಹಾಗೂ ಮಹಾನಾಯಕರುಗಳ ಅಭಿಪ್ರಾಯಗಳ ಕಿಚಡಿಯನ್ನು ರೇಲಿಯನ್ ಪಂಥದ ತತ್ವಗಳೆಂಬಂತೆ ಬಿಂಬಿಸಿ ಹಲವು ಮಂಕುದಿಣ್ಣೆಗಳ ದಿಕ್ಕು ತಪ್ಪಿಸಿ ಒಂದು ಕಾರ್ಯಪಡೆಯನ್ನೇ ಕಟ್ಟಿಕೊಂಡ. ೧೯೯೭ರ ಫೆಬ್ರವರಿಯಲ್ಲಿ ಸ್ಕಾಟ್ಲೆಂಡಿನ ಎಡಿನ್‌ಬರೋನ ರೋಸ್ಲಿನ್ ಇನ್‌ಸ್ಟಿಟ್ಯೂಟ್‌ನಲ್ಲಿ ಕ್ಲೋನಿಂಗ್ ವಿಧಾನದಿಂದ ಡಾಲಿ ಎಂಬ ಕುರಿಯ ಪ್ರತಿರೂಪಿಯೊಂದನ್ನು ಸೃಷ್ಟಿಸಿದ್ದು ವೈಜ್ಞಾನಿಕ ವಂಚನೆಯ ಮತ್ತೊಂದು ತಂತ್ರವನ್ನು ಹೆಣೆಯಲು ವೊರಿಲಾನ್‌ಗೆ ನೆರವಾಯಿತು. ಇದಕ್ಕಾಗಿ ೧೯೯೭ರ ಫೆಬ್ರವರಿಯಲ್ಲಿ ಜಗತ್ತಿನ ಮೊದಲ ಮಾನವ ಕ್ಲೋನಿಂಗ್ ಕಂಪನಿ (!?) ಕ್ಲೊನಾಯ್ಡ್‌ನ್ನು ಪ್ರಾರಂಭಿಸಿದ. ಈಗ್ಗೆ ಸುಮಾರು ಮೂರು ವರ್ಷಗಳ ಹಿಂದೆ ಈ ಪ್ರಾಜೆಕ್ಟ್‌ನ ಉಸ್ತುವಾರಿಯನ್ನು ನೋಡಿಕೊಳ್ಳಲು ರೇಲಿಯನ್ ಪಂಥದ ಬಿಷಪ್‌ಗಳಲ್ಲಿ ಒಬ್ಬರಾದ ಡಾ॥ ಬ್ರಿಗಿಟ್ ಬೊಯ್ಸೆಲಿಯರ್ ಎಂಬುವಳನ್ನು ನೇಮಿಸಿದ. ಜಗತ್ತಿನ ಮೊದಲ ಕ್ಲೋನಿಂಗ್ ಬೇಬಿ ಜನಿಸಿತೆಂದು ಭಾರೀ ಬಂಡಲ್ ಬಿಟ್ಟು ಈಗ ತೆಪ್ಪಗಾಗಿರುವ ಬ್ರಿಗಿಟ್ ಬೊಯ್ಸೆಲಿಯರ್ ಈಗ ಕ್ಲೊನಾಯ್ಡ್ ಕಂಪನಿಯ ವ್ಯವಸ್ಥಾಪಕ ನಿರ್ದೇಶಕಿ. ಸದೃಢ ಆಧಾರಗಳಿಂದ ಬೆಂಬಲಿತವಾಗಿರುವ ಜೀವಿಗಳ ಸಾವಯವ ವಿಕಾಸ ಪರಿಕಲ್ಪನೆಯನ್ನೇ ಬದಿಗೊತ್ತಿ ಎಲೋಹಿಮ್‌ಗಳು ಭೂಗ್ರಹದ ಮೇಲೆ ಮಾನವನನ್ನು ತಮ್ಮ ಡಿ.ಎನ್.ಎ. ಬಳಸಿ ಕ್ಲೋನಿಂಗ್ ಮೂಲಕ ಸೃಷ್ಟಿಸಿದುದೇ ನಿಜವೆಂದು ನಂಬುವುದಾದರೆ ಸೊಳ್ಳೆಯಂತಹ ರೋಗ



ಬ್ರಿಗಿಟ್ ಬೊಯ್ಸೆಲಿಯರ್

ಹರಡುವ ಕೀಟಗಳನ್ನು ಹಾಗೂ ಮಾನವ ಆರೋಗ್ಯದ ವಿಷಯದಲ್ಲಿ ಜಾಗತಿಕವಾಗಿ ಸವಾಲನ್ನೇ ಒಡ್ಡಿರುವ ರೋಗಕಾರಕ ಬ್ಯಾಕ್ಟೀರಿಯಾ, ವೈರಸ್, ಶಿಲೀಂಧ್ರ ಮುಂತಾದವುಗಳನ್ನು ಯಾರು ಯಾವ ಉದ್ದೇಶದಿಂದ ಸೃಷ್ಟಿಸಿದರು ಹಾಗೂ ತಾವು ಭೂಮಿಯ ಮೇಲೆ ಜೀವಸೃಷ್ಟಿ ಮಾಡಿದ ವಿಷಯವನ್ನು ಅರುಹಲು ೨೫೦೦೦ ವರ್ಷಗಳವರೆಗೆ ಅದೂ ತಮ್ಮ U.F.O.ವನ್ನು ವೊರಿಲಾನ್ ನೋಡುವವರೆಗೆ ಕಾಯ್ದದ್ದೇಕೆ ಎಂಬ ಪ್ರಶ್ನೆಗೆ ಕಂಬಿಯೇ ಇಲ್ಲದೆ ರೈಲು ಬಿಡುವ ರೇಲಿಯನ್ನರಿಂದ ಉತ್ತರಿಸಲು ಸಾಧ್ಯವೆ ?

**ಏನಿದು ಕ್ಲೋನಿಂಗ್ ?**

ಜೀವಶಾಸ್ತ್ರದ ಪರಿಭಾಷೆಯಲ್ಲಿ ಕ್ಲೋನಿಂಗ್ ಎಂದರೆ ಒಂದು ಜೀವಿಯಿಂದ ಎಲ್ಲಾ ತಳಿಗುಣಗಳಿಂದಲೂ ತನ್ನ ಮೂಲ (ತಂದೆ ಅಥವಾ ತಾಯಿ) ಜೀವಿಯನ್ನೇ ಹೋಲುವ ತದ್ರೂಪುಗಳನ್ನು ನಿರ್ಲಿಂಗ ರೀತಿಯಲ್ಲಿ ಉತ್ಪಾದಿಸುವುದು. ಇಲ್ಲಿ ಜೀವಿಯೊಂದರ ಹುಟ್ಟಿಗೆ ನಿಸರ್ಗ ನಿಯಮದ ರೀತ್ಯಾ ಹೆಣ್ಣು-ಗಂಡುಗಳ ಮಿಲನದ ಅವಶ್ಯಕತೆಯಿಲ್ಲ. ಈ ಬಗೆಯಲ್ಲಿ ಉತ್ಪತ್ತಿಯಾದ ಜೀವಿಗಳೂ ತಂದೆ ತಾಯಿಗಳ ಅನುವಂಶೀಯ ಪೀಳಿಗೆಯಾಗಿರದೆ ನಿರ್ದಿಷ್ಟ ಜೀವಿಯೊಂದರ ಯಥಾವತ್ ತದ್ರೂಪುಗಳಾಗಿರುತ್ತವೆ.



# ನಾನು - ನೀವೆಲ್ಲ

ನಿಮ್ಮ ನೋವುಗಳನ್ನೆಲ್ಲ
ಕೊಟ್ಟುಬಿಡಿ ಕನಸುಗಳೇ, ಗಟ್ಟಿಯಾಗಿ
ನಾ ಅಳುತ್ತೇನೆ ಮೌನದೊಡನೆ
ಏಕೆಂದರೆ ನಿಮ್ಮ
ನಗು ಬೇಕು ನನಗೆ.

ನಿಮ್ಮ ದ್ವೇಷಗಳನ್ನೆಲ್ಲ
ಇತ್ತ ಕೊಡಿ ಹೃದಯಗಳೇ, ರೋಷಾಗ್ನಿಯಾಗಿ
ನಾ ಉರಿಯುತ್ತೇನೆ ಶೂನ್ಯದೊಡನೆ
ಏಕೆಂದರೆ ನಿಮ್ಮ
ಪ್ರೀತಿ ಬೇಕಿದೆ ನನಗೆ.

ನನ್ನ ನಿಮ್ಮೊಳಗೇ ಕಳೆದುಬಿಡಿ
ನೀವು ನನ್ನೊಳಗೇ ಉಳಿಯಗೊಡಿ
ಏಕೆಂದರೆ ನೀವೆಲ್ಲರೂ
ಬೇಕು ನನಗೆ.

ನಿಮ್ಮ ಮಾತು, ಮೌನ, ಶೂನ್ಯ,
ಗಾಳಿ, ಸ್ಪರ್ಶ, ಸದ್ದು, ಕೂಗು, ಕನಸು....
ಏನೆಲ್ಲವೂ ಬೇಕು
ನಿಮ್ಮ ಹಿತ ನೆನಪನ್ನೇ ನಾ
ಮೆಲ್ಲಬೇಕು ; ನನ್ನ ಸೊಲ್ಲು
ನಿಮಗೆಲ್ಲ ತಿಳಿಯಬೇಕು
ನಮಗೆ ನಾವೆಲ್ಲ ಅರ್ಥವಾಗಬೇಕು.

ಎಲ್ಲೆಯಾಚೆ ನಾವೆಲ್ಲ
ಒಂದಾಗಿ ನಿಲ್ಲಬೇಕು.
ನಮಗೆಲ್ಲ ಬೇಕೇ ಬೇಕು ಭೂಮಿ
ಹಾಗೇ ಆಗಸವೂ.

**ಗಣೇಶ ಹೊಸ್ಮನೆ**
ಜಾನ್ಮನೆ - ೫೮೧ ೩೧೫ ಶಿರಸಿ (ಉ.ಕ.)

ಸರಳವಾಗಿ ಹೇಳುವುದಾದರೆ ಸೂಕ್ಷ್ಮಕೋಶೀಯ ಹಂತದಲ್ಲಿ ಮಾನವ ಹಸ್ತಕ್ಷೇಪದಿಂದ ಜೀವಿಗಳ ತದ್ರೂಪುಗಳನ್ನು ಪಡೆಯಲು ಬಳಸುವ ಜೈವಿಕ ತಂತ್ರಜ್ಞಾನಕ್ಕೆ ಕ್ಲೋನಿಂಗ್ ಎನ್ನಬಹುದು. ಇದು ಫೋಟೊಸ್ಟಾಟ್ ಯಂತ್ರವೊಂದು ದಾಖಲೆಯೊಂದರ ಹಲವು ನಕಲುಗಳನ್ನು ತೆಗೆದುಕೊಡುವ ರೀತಿ ಜೀವಿಯೊಂದರ ತದ್ರೂಪುಗಳ ವಿಶ್ವಾಮಿತ್ರ ಸೃಷ್ಟಿಯತ್ತ ಜೀವ ವಿಜ್ಞಾನದ ದಾಪುಗಾಲು !?

ನಿಸರ್ಗದಲ್ಲಿ ನಿರ್ಲಿಂಗ ರೀತಿಯ ಸಂತಾನೋತ್ಪತ್ತಿ ನಡೆಸುವ ಹಲವು ಸಸ್ಯಗಳು ಮತ್ತು ಕೆಲವು ನಿಮ್ನ ದರ್ಜೆಯ ಪ್ರಾಣಿ ಪ್ರಭೇದಗಳಲ್ಲಿ ತದ್ರೂಪುಗಳ ಸೃಷ್ಟಿ ಸಾಧ್ಯವಾದುದಾದರೂ ಲೈಂಗಿಕ ರೀತಿಯಲ್ಲಿ ಸಂತಾನೋತ್ಪತ್ತಿ ನಡೆಸುವ ಉನ್ನತ ಪ್ರಾಣಿಪ್ರಭೇದಗಳಲ್ಲಿ ತದ್ರೂಪುಗಳ ಉತ್ಪತ್ತಿಯ ಪರಿಪಾಠವಿಲ್ಲ. ಕಳೆದ ಶತಮಾನದ ಉತ್ತರಾರ್ಧದಲ್ಲಿ ಉನ್ನತ ಸಸ್ಯ ಹಾಗೂ ಪ್ರಾಣಿ ಪ್ರಭೇದಗಳಿಂದ ಅಂಗಾಂಶ ಕೃಷಿ ವಿಧಾನದ ಮೂಲಕ ತದ್ರೂಪುಗಳನ್ನು ಪಡೆಯುವ ಪ್ರಯತ್ನಗಳು ನಡೆದು ಸಸ್ಯ ಪ್ರಭೇದಗಳಲ್ಲಿ ಅದು ಗಣನೀಯ ಯಶಸ್ಸು ಗಳಿಸಿದರೂ ಪ್ರಾಣಿ ವರ್ಗಗಳಲ್ಲಿ ಇದು ನಿರೀಕ್ಷಿತ ಫಲ ನೀಡಿಲ್ಲ. ಆದಾಗ್ಯೂ ಜೀವಿಯ ಜೀವಕೋಶ ಅಥವಾ ನ್ಯೂಕ್ಲಿಯಸ್‌ಅನ್ನು ವಿಭಜನೆ ಮತ್ತು ವಿಭೇದೀಕರಣ (Differentiation)ಕ್ಕೆ ಪ್ರಚೋದಿಸಿ ಕ್ಲೋನಿಂಗ್ ಎಂಬ ಜೈವಿಕ ತಂತ್ರಜ್ಞಾನದ ಮೂಲಕ ಮಾನವನನ್ನೂ ಒಳಗೊಂಡಂತೆ ಜೀವಿಗಳ ತದ್ರೂಪು ಸೃಷ್ಟಿಯ ಬಗ್ಗೆ ವೈಜ್ಞಾನಿಕ ವಲಯಗಳಲ್ಲಿ ಚಿಂತನೆಗಳು ಪ್ರಾರಂಭವಾದವು. ೧೯೭೮ರಲ್ಲಿ ವೈದ್ಯಕೀಯ ಪುಸ್ತಕಗಳ ಪ್ರಕಟಣೆಗೆ ಹೆಸರಾದ ಲಿಪ್ಪಿನ್ ಕಾಟ್ ಕಂಪನಿ **'ಅವನ ಪ್ರತಿಬಿಂಬದಲ್ಲಿ'** (In His Image) ಎಂಬ ಪುಸ್ತಕವೊಂದನ್ನು ಪ್ರಕಟಿಸಿತು. ಡೇವಿಡ್ ರೋರ್‌ವಿಕ್ ಎಂಬ ಬರಹಗಾರ ಈ ಪುಸ್ತಕದಲ್ಲಿ ಜೆನೆಟಿಕ್ ಎಂಜಿನಿಯರಿಂಗ್ ಮೂಲಕ ಮಾನವ ತದ್ರೂಪುಗಳನ್ನು ಉತ್ಪತ್ತಿ ಮಾಡುವ ಬಗ್ಗೆ ವಿವರಿಸುತ್ತಾನೆ. ಓದುಗರ ವಲಯದಲ್ಲಿ ರೋಮಾಂಚನದ ಅಲೆಗಳನ್ನು ಎಬ್ಬಿಸಿದ ಈ ಪುಸ್ತಕ ಅತ್ಯಧಿಕ ಸಂಖ್ಯೆಯಲ್ಲಿ ಮಾರಾಟವಾಯಿತಾದರೂ ವೈಜ್ಞಾನಿಕ ಜಗತ್ತು ಇದನ್ನೊಂದು ವಂಚನೆಯ ಪ್ರಕರಣವೆಂದು ಸಾರಾಸಗಟಾಗಿ ತಿರಸ್ಕರಿಸಿತು. ತನ್ನ ಬರವಣಿಗೆಯನ್ನು ಸಮರ್ಥಿಸಿಕೊಳ್ಳಲು ರೋರ್‌ವಿಕ್ ಈ ಪುಸ್ತಕದಲ್ಲಿ ಉಲ್ಲೇಖಿಸಿದ ವಿಜ್ಞಾನಿಯೊಬ್ಬ ತನ್ನ ಹೆಸರನ್ನು ವಿವಾದದಲ್ಲಿ ಅನವಶ್ಯಕವಾಗಿ ಎಳೆದಿರುವ ಬಗ್ಗೆ ಪುಸ್ತಕ ಪ್ರಕಾಶಕರ ವಿರುದ್ಧ ನ್ಯಾಯಾಲಯದಲ್ಲಿ ದಾವೆ ಹೂಡಿದ. ಆ ವಿಜ್ಞಾನಿಗೆ ನಷ್ಟ ಭರ್ತಿಯಾಗಿ ಅನಿರ್ದಿಷ್ಟ ಮೊತ್ತವನ್ನು ತುಂಬಿಕೊಟ್ಟ ಪ್ರಕಾಶನ ಸಂಸ್ಥೆ ಕೊನೆಗೆ ಕ್ಲೋನಿಂಗ್‌ನ ಕಥೆ ಸತ್ಯವಾದುದಲ್ಲವೆಂದು ನಿಜ ಒಪ್ಪಿಕೊಳ್ಳಬೇಕಾಯ್ತು.

ಸ್ಕಾಟ್ಲೆಂಡ್‌ನ ಎಡಿನ್‌ಬರೋನಲ್ಲಿರುವ ರೋಸ್ಲಿನ್ ಇನ್‌ಸ್ಟಿಟ್ಯೂಟ್‌ನಲ್ಲಿ ಡಾ|| ವಿಲ್ಮಟ್ ಮತ್ತು ಅವರ ತಂಡ ೬ ವರ್ಷ ಪ್ರಾಯದ ಹೆಣ್ಣು ಕುರಿಯ ಕೆಚ್ಚಲಿನ ಕೋಶದ ನ್ಯೂಕ್ಲಿಯಸ್ ಅನ್ನು ಬೇರ್ಪಡಿಸಿ ಮತ್ತೊಂದು ಹೆಣ್ಣು ಕುರಿಯ ನ್ಯೂಕ್ಲಿಯಸ್‌ರಹಿತ ತತ್ತಿಕೋಶದೊಳಗೆ ವಿದ್ಯುದಾಘಾತದ ಮೂಲಕ ಮಿಲನಗೊಳಿಸಿ ವಿಭಜನೆಗೆ ಪ್ರೇರೇಪಿಸಿತು. ಹೀಗೆ ವಿಭಜನೆ ಮತ್ತು ವಿಭೇದೀಕರಣಗೊಂಡು ರೂಪು ತಳೆದ ಭ್ರೂಣವನ್ನು ಮತ್ತೊಂದು ಹೆಣ್ಣು ಕುರಿಯ ಗರ್ಭ ಚೀಲದೊಳಗೆ ನಾಟಿ ಮಾಡಲಾಯ್ತು. ಈ ಪ್ರಯೋಗ ಯಶಸ್ವಿಯಾಗಿ ೧೯೯೬ರ ಫೆಬ್ರವರಿಯಲ್ಲಿ ತನ್ನ ತಾಯಿಯನ್ನೇ ಹೋಲುವ ತದ್ರೂಪು ಕುರಿಮರಿ ಡಾಲಿ ಜನ್ಮ ತಳೆಯಿತು. ಇದಾದನಂತರ ಕೆಲವು ಜೈವಿಕ ತಂತ್ರಜ್ಞಾನ ಕಂಪನಿಗಳು ಕ್ಲೋನಿಂಗ್‌ನಿಂದ ಮಾನವ ಪ್ರತಿಕೃತಿಗಳನ್ನು ಸೃಷ್ಟಿಸುವ ಸಂಶೋಧನೆಗಳು ತಮ್ಮ ಪ್ರಯೋಗಾಲಯಗಳಲ್ಲಿ ಪ್ರಗತಿಯಲ್ಲಿರುವುದಾಗಿ ಘೋಷಿಸಿದರು. ಸಂದರ್ಭದ ಸದುಪಯೋಗ ಮಾಡಿಕೊಂಡ ರೇಲಿಯನ್ ಪಂಥದ ವೊರಿಲಾನ್ ಈ ವಿಷಯದಲ್ಲಿ ಜನರ ಭಾವನಾತ್ಮಕ ಹಾಗೂ ಕುತೂಹಲಕಾರಿ ಸಂವೇದನೆಗಳನ್ನೇ ಬಂಡವಾಳವಾಗಿಸಿಕೊಂಡು ಮಾನವ ತದ್ರೂಪಿ ಸೃಷ್ಟಿಯ ಯೋಜನೆಯನ್ನು ಗುರಿಯಾಗಿಸಿಕೊಂಡು ೧೯೯೭ರಲ್ಲಿ ಕ್ಲೊನಾಯ್ಡ್ ಎಂಬ ಕಂಪನಿಯೊಂದನ್ನು ಆರಂಭಿಸಿಬಿಟ್ಟ. ಈ ಬೆಳವಣಿಗೆಗಳಿಂದ ವಿಜ್ಞಾನ ವಲಯ ಮಹತ್ತರವಾದುದನ್ನು ಸಾಧಿಸಿದುದರ ಬಗ್ಗೆ ಹರ್ಷಿಸಿದರೆ ಕೆಲವು ವಿಜ್ಞಾನಿಗಳು, ಧಾರ್ಮಿಕ ನೀತಿವಾದಿಗಳು ಹಾಗೂ ಪರಿಸರವಾದಿಗಳು ನಿಸರ್ಗಕ್ರಿಯೆಯಲ್ಲಿ ಮಾನವನ ಈ ತೆರನಾದ ಹಸ್ತಕ್ಷೇಪ ಸಲ್ಲದೆಂದೂ ಹಾಗೂ ಇಂತಹ ಚಟುವಟಿಕೆಗಳಿಂದ ಪ್ರಕೃತಿಯಲ್ಲಿ ಅನಾದಿ ಕಾಲದಿಂದ ನಡೆದುಕೊಂಡು ಬಂದಿರುವ ಸಾವಯವ ವಿಕಾಸ ಪ್ರಕ್ರಿಯೆಯೇ ವ್ಯತ್ಯಯವಾಗುವುದಲ್ಲದೆ ಇದರಿಂದ ಅನೇಕ ಬಗೆಯ ಸಾಮಾಜಿಕ ಹಾಗೂ ನೈತಿಕ ಸಮಸ್ಯೆಗಳು ತಲೆದೋರಬಹುದೆಂದೂ ಆತಂಕಗೊಂಡರು. ಇವೆಲ್ಲದರ ನಡುವೆ ಬಹಾಮದ ಕ್ಲೊನಾಯ್ಡ್ ಕಂಪನಿ ೩೧ ವರ್ಷ ವಯಸ್ಸಿನ ಅಮೆರಿಕನ್ ಮಹಿಳೆಯ ಡಿ.ಎನ್.ಎ. (ನ್ಯೂಕ್ಲಿಯಸ್) ಬಳಸಿಕೊಂಡು ಕ್ಲೋನಿಂಗ್ ವಿಧಾನದಿಂದ ಈವ್ ಎಂಬ ತದ್ರೂಪಿ ಹೆಣ್ಣು ಮಗುವನ್ನು ಸೃಷ್ಟಿಸಿರುವುದಾಗಿ ೨೦೦೨ರ ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ಸುದ್ದಿ ಸ್ಫೋಟಿಸಿತು.

ಅಲ್ಲದೆ ತಾಯಿ ಹಾಗೂ ಮಗುವಿನ ಡಿ.ಎನ್.ಎ. ಪರೀಕ್ಷೆಯನ್ನು ಹಾರ್ವರ್ಡ್ ವಿಶ್ವ ವಿದ್ಯಾಲಯದ ಗಣಿತಶಾಸ್ತ್ರಜ್ಞ ಹಾಗೂ ಎಬಿಸಿ ನ್ಯೂಸ್‌ನ ವಿಜ್ಞಾನ ವಿಷಯಗಳ ಮಾಜಿ ಸಂಪಾದಕ ಮೈಕೆಲ್ ಗ್ವಿಲನ್ ನೇತೃತ್ವದ ವಿಜ್ಞಾನಿಗಳ ತಂಡ ನಡೆಸಿ ಖಚಿತತೆಯ ಬಗ್ಗೆ ಒಂದು ವಾರದೊಳಗೆ ಫಲಿತಾಂಶ ನೀಡಲಿರುವುದಾಗಿ ಆ ಕಂಪನಿಯ ವ್ಯವಸ್ಥಾಪಕ ನಿರ್ದೇಶಕಿ ಡಾ॥ ಬ್ರಿಗಿಟ್ ಬೊಯ್ಸೆ ಲಿಯರ್ ಫ್ಲೋರಿಡಾದಲ್ಲಿ ನಡೆಸಿದ ವರ್ಣರಂಜಿತ ಪತ್ರಿಕಾ ಗೋಷ್ಠಿಯಲ್ಲಿ ಪ್ರಕಟಿಸಿದರು. ಇದಾದ ಕೆಲವೇ ದಿನಗಳಲ್ಲಿ ಡಿ.ಎನ್.ಎ. ಪರೀಕ್ಷೆಯಲ್ಲಿ ಪರಿಣತರಾದ ತನ್ನ ನೇತೃತ್ವದ ವಿಜ್ಞಾನಿಗಳ ತಂಡಕ್ಕೆ ಕ್ಲೋನಿಂಗ್ ಮೂಲಕ ಮಗುವನ್ನು ಪಡೆದರೆನ್ನಲಾದ ಕುಟುಂಬವನ್ನು ಸಂಪರ್ಕಿಸಲಿಕ್ಕೇ ಆಗಲಿಲ್ಲವೆಂದೂ, ಕ್ಲೋನಿಂಗ್‌ನಿಂದ ಮಾನವ ಪ್ರತಿಕೃತಿ ಸೃಷ್ಟಿಯ ಬಗೆಗಿನ ಕ್ಲೊನಾಯ್ಡ್‌ನ ಪ್ರತಿಪಾದನೆ ಒಂದು ವಿಸ್ತೃತ ವಂಚನೆ ಎಂದೂ ಗ್ವಿಲನ್ ಘೋಷಿಸಿದ್ದು ಕ್ಲೊನಾಯ್ಡ್‌ನ ನಿಜ ಬಣ್ಣ ಬಯಲು ಮಾಡಿದೆ. ಅದೇ ಸಂದರ್ಭದಲ್ಲಿ ಆಸ್ಟ್ರೇಲಿಯಾದ ಮೆಲ್ಬೋರ್ನ್‌ನ ಮೊನಾಶ್ ವಿಶ್ವವಿದ್ಯಾಲಯದ ಅಲನ್ ಟ್ರೌನ್ಸನ್ ಎಂಬ ವಿಜ್ಞಾನಿ ಸಿಡ್ನಿ ಮಾರ್ನಿಂಗ್ ಪತ್ರಿಕೆಗೆ ನೀಡಿದ ಸಂದರ್ಶನದಲ್ಲಿ ಕ್ಲೊನಾಯ್ಡ್ ಕಂಪನಿಗೆ ಮಾನವ ಕ್ಲೋನಿಂಗ್‌ಗೆ ಅಗತ್ಯವಾದ ಪರಿಣತಿ ಇರುವ ಬಗ್ಗೆಯೇ ಸಂದೇಹ ವ್ಯಕ್ತಪಡಿಸಿದ್ದಲ್ಲದೆ ಕ್ಲೊನಾಯ್ಡ್‌ನವರು ಈವರೆಗೆ ಹೇಳಿರುವ ಯಾವ ವಿಷಯವೂ ವೈಜ್ಞಾನಿಕ ತನಿಖೆಗಳಲ್ಲಿ ದೃಢಪಡದಿರುವುದರತ್ತ ಬೊಟ್ಟು ಮಾಡುತ್ತಾರೆ. ಇಷ್ಟೇ ಅಲ್ಲದೆ ಎಡಿನ್‌ಬರೋನ ರೋಸ್ಲಿನ್ ಇನ್‌ಸ್ಟಿಟ್ಯೂಟ್‌ನಲ್ಲಿ ಕ್ಲೋನಿಂಗ್ ವಿಧಾನದಿಂದ ಡಾಲಿ ಕುರಿಮರಿಯನ್ನು ಪಡೆದ ವಿಜ್ಞಾನಿಗಳ ತಂಡದಲ್ಲಿದ್ದ ಡಾ॥ ಅಲನ್ ಕೋಲ್ಮನ್ ಅವರು ಇತ್ತೀಚೆಗೆ ಬೆಂಗಳೂರಿನಲ್ಲಿ ಬಯೊ ೨೦೦೩ ಸಮ್ಮೇಳನದಲ್ಲಿ ಮಾತನಾಡುತ್ತಾ ಕ್ಲೋನಿಂಗ್ ಮಾನವ ನಂತಹ ಉನ್ನತ ಸಸ್ತನಿಗಳಲ್ಲಿ ಕಷ್ಟಸಾಧ್ಯವಾಗಿದ್ದು, ಕೆಲವು ಬಗೆಯ ಪ್ರಾಣಿಗಳಲ್ಲಿ ಮಾತ್ರ ಈ ಪ್ರಯತ್ನ ಕೊಂಚ ಯಶಸ್ಸು ಸಾಧಿಸಿರುವ ಬಗ್ಗೆ ಒತ್ತಿ ಹೇಳಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಗರ್ಭಪಾತ ಹಾಗೂ ಜನ್ಮಜನ್ಯ ಅನುವಂಶೀಯ ದೋಷಗಳು ಕ್ಲೋನಿಂಗ್‌ನಿಂದ ಪಡೆದ ತದ್ರೂಪಿಗಳಲ್ಲಿ ಸರ್ವೇಸಾಮಾನ್ಯವಾಗಿದ್ದು ಡಾಲಿ ಕುರಿಮರಿ ಹುಟ್ಟುವುದಕ್ಕೆ ಮುಂಚೆ ವಿಕಾರ ರೂಪದಲ್ಲಿ ಹುಟ್ಟಿದ್ದ ಸುಮಾರು ೨೫೦ ಭ್ರೂಣಗಳನ್ನು ತಿಪ್ಪೆಗೆ ಎಸೆಯಲಾಗಿತ್ತಲ್ಲದೆ ಕ್ಲೋನಿಂಗ್‌ನಿಂದ ಜನ್ಮ ತಳೆದ ಡಾಲಿ ಕುರಿಮರಿ ಸಹ ಜನ್ಮಜನ್ಯ ತೊಂದರೆಯಿಂದ ಬಳಲುತ್ತಿತ್ತು ಎಂಬುದು ಗಮನಿಸಬೇಕಾದ ಅಂಶ. ಇಂತಹ ಸಮಸ್ಯೆಗಳಿಂದಾಗಿ ಮಾನವನಲ್ಲಿ ಈ ಬಗೆಯ ಪ್ರಯೋಗಗಳನ್ನು ನಡೆಸುವುದಕ್ಕೆ ತೊಂದರೆ ಯಾಗಿದೆ ಎನ್ನುವುದು ಕೋಲ್ಮನ್‌ರ ಮಾತುಗಳ ಸಾರಾಂಶ.



**ಸ್ಟೆಮ್ ಸೆಲ್ ಕ್ರಾಂತಿ**

ಜೀವಕೋಶವೊಂದು ಭ್ರೂಣವಾಗಿ ಬೆಳೆಯುವಾಗ ಅದು ಬ್ಲಾಸ್ಟುಲಾ (ಮಾನವನಲ್ಲಿ ಬ್ಲಾಸ್ಟೋಸಿಸ್ಟ್), ಗ್ಯಾಸ್ಟುಲಾ ಹಾಗೂ ನ್ಯೂರುಲಾ ಕೋಶೋತ್ಪತ್ತಿಯ ಹಾಗೂ ವಿಭೇದೀಕರಣಗಳ ಹಂತಗಳನ್ನು ದಾಟಿ ಹೋಗಬೇಕಾಗುತ್ತದೆ. ಅಮೆರಿಕೆಯ ಹೆಸರಾಂತ ಬಯೊಟೆಕ್ನಾಲಜಿ ಕಂಪನಿಗಳಲ್ಲೊಂದಾದ ಎಸಿಟಿ (ಅಡ್ವಾನ್ಸ್‌ಡ್ ಸೆಲ್ ಟೆಕ್ನಾಲಜಿ) ಮಾನವ ಕ್ಲೋನಿಂಗ್‌ನಲ್ಲಿ ಮೊದಲ ಯಶಸ್ಸಿನ ಮೆಟ್ಟಿಲೇರಿರುವುದಾಗಿ ೨೦೦೧ರಲ್ಲಿ ಹೇಳಿಕೊಂಡಿತಾದರೂ ಅದು ಬ್ಲಾಸ್ಟುಲಾ ಹಂತವನ್ನು ತಲುಪಲು ಕೂಡಾ ಸಾಧ್ಯವಾಗಲಿಲ್ಲ ಎಂಬುದು ಪರಿಣತರ ಅಭಿಮತ. ಇದೇ ಸಂಸ್ಥೆ ೨೦೦೨ರಲ್ಲಿ ಹಸುವಿನ ಚರ್ಮದ ಕೋಶ ವೊಂದರಿಂದ ಕ್ಲೋನಿಂಗ್ ವಿಧಾನ ಬಳಸಿ ಪ್ರಾಥಮಿಕ ಹಂತದ ಭ್ರೂಣವಾಗಿ ಬೆಳೆಸಿದ ನಂತರ ಅದನ್ನು ನಾಟಿ ಮಾಡಲಾಗಿದ್ದ ಹಸುವಿನಿಂದ ಗರ್ಭಪಾತ ಮಾಡಿಸಿ ಹೊರತೆಗೆದು ಆ ಭ್ರೂಣದಿಂದ ಸ್ವಲ್ಪ ಅಂಗಾಂಶವನ್ನು ಬೇರ್ಪಡಿಸಿ ಪ್ರನಾಳದಲ್ಲಿ ಬೆಳೆಸಿದಾಗ ಅದು ಪೂರ್ಣ ಸ್ಥಿತಿಯ ಭ್ರೂಣವಾಗಿ ರೂಪುಗೊಂಡಿದ್ದಾಗಿ ಕಂಪನಿಯ ವರದಿ ತಿಳಿಸಿದೆ. ವಿಭಜನೆ ಹಾಗೂ ವಿಭೇದೀಕರಣ ಸಾಮರ್ಥ್ಯವುಳ್ಳ ಪ್ರಾಥಮಿಕ ಭ್ರೂಣದಲ್ಲಿನ ಇಂತಹ ಕೋಶಗಳಿಗೆ ಆಕರ ಕೋಶಗಳು ಅಥವಾ ಸ್ಟೆಮ್ ಸೆಲ್‌ಗಳು ಎಂದು ಹೆಸರು. ಹೊಕ್ಕಳು ಬಳ್ಳಿ ಹಾಗೂ ತಾಯಿಯ ಮಾಸು(Placenta)ವಿನ ಕೋಶಗಳಿಗೆ ಆಕರ ಕೋಶಗಳ ಗುಣ ವಿರುತ್ತದೆ. ಮಾನವನಲ್ಲೂ ಇಂತಹ ಸ್ಟೆಮ್ ಸೆಲ್‌ಗಳನ್ನು ಬೆಳೆಸಿಕೊಂಡು, ನಂತರ ಇವು (ಆಕರ ಕೋಶ)ಗಳ ನಿರ್ದೇಶಿತ ವಿಭಜನೆ ಮತ್ತು ವಿಭೇದೀಕರಣದಿಂದ (Directed differentiation) ನಮಗೆ ಅಗತ್ಯವಾದ ಹೃದಯ, ಕಿಡ್ನಿ, ಯಕೃತ್ ಮುಂತಾದ ಮಾನವ ಅಂಗಾಂಗಗಳನ್ನು ಕಾರ್ಖಾನೆಗಳಲ್ಲಿ ಮೋಟಾರು ಬಿಡಿಭಾಗಗಳನ್ನು ತಯಾರಿಸುವಂತೆ ಉತ್ಪಾದಿಸುವುದು ಸಾಧ್ಯವಾದರೆ, ಎಂಬ ಆಕಾಂಕ್ಷೆಯೇ ಇಂದು ಮಾನವ ಕ್ಲೋನಿಂಗ್‌ನ ಬಗೆಗೆ ವಿಜ್ಞಾನಿಗಳು ಈ ಪ್ರಮಾಣದಲ್ಲಿ ಆಸಕ್ತಿ ವಹಿಸಲು ಮುಖ್ಯ ಕಾರಣ. ಆದರೆ ಭ್ರೂಣದ ಬೆಳವಣಿಗೆಗೆ ಈವರೆವಿಗೂ ಜೀವಂತ ತಾಯಿಯ ಗರ್ಭಚೀಲದ ಅವಶ್ಯಕತೆಯಿದ್ದು ಆಕೆ ಮಗುವಿಗೆ ಬದಲಾಗಿ ಬರೇ ಮಾನವ ಅಂಗಗಳಾದ ಕಿಡ್ನಿ, ಯಕೃತ್, ಹೃದಯ ಮುಂತಾದ ಅಂಗಾಂಗಗಳನ್ನು ಹೆರಲು ಸಿದ್ಧಳಿದ್ದಾಳೆಯೇ ಎನ್ನುವಾಗ ಧಾರ್ಮಿಕ ಹಾಗೂ ನೈತಿಕತೆಯ ಪ್ರಶ್ನೆಗಳು ಧುತ್ತೆಂದು ಎದ್ದುನಿಲ್ಲುತ್ತವೆ. ಆದರೆ ಪ್ರನಾಳಗಳಂತಹ ದೇಹದ ಹೊರಗೆ ಪೋಷಕ ಮಾಧ್ಯಮಗಳಲ್ಲಿ ಸ್ಟೆಮ್ ಸೆಲ್‌ಗಳ ಮೂಲಕ ಮಾನವ ಅಂಗಾಂಗಗಳನ್ನು ಬೆಳೆಸುವಲ್ಲಿ ವಿಜ್ಞಾನಿಗಳು ಸಫಲರಾದದ್ದೇ ಆದರೆ ವೈಜ್ಞಾನಿಕ ರಂಗದಲ್ಲಿ ಬಹುದೊಡ್ಡ ಕ್ರಾಂತಿಯೇ ಆದೀತು. ಆಗ ಅಂಗಾಂಗಗಳ ದಾನಕ್ಕಾಗಿ ಯಾರನ್ನೂ ಆಶ್ರಯಿಸದೆಯೇ ರೋಗಿಯ ದೇಹಕೋಶದಿಂದಲೇ ಕ್ಲೋನಿಂಗ್ ಮೂಲಕ ಅವನಿಗೆ ಅಗತ್ಯವಾದ ಅಂಗಾಂಗಗಳನ್ನು ಬೆಳೆಸಿ ನಾಟಿ ಮಾಡಲು ಸಾಧ್ಯವಾದೀತು. ನಮಗೆ ಈ ಬಗೆಯ ಯಶಸ್ಸು ದೊರೆತಾಗ ಗಾಜಿನ ಪ್ರನಾಳಗಳಲ್ಲಿ ಕ್ಲೋನಿಂಗ್‌ನಿಂದ ಕೇವಲ ನರಕೋಶಗಳನ್ನು ಬೆಳೆಸಿ ಸದ್ಯಕ್ಕೆ ಪರಿಹಾರ ಕ್ಲಿಷ್ಟವಾಗಿರುವ ಆಲ್ಜೈಮೀರ್ ಮತ್ತು ಪಾರ್ಕಿನ್‌ಸೋನಿಯಾದಂತಹ ಪೀಡಕ ರೋಗಗಳನ್ನು ಗುಣಪಡಿಸಲು ವೈದ್ಯಕೀಯ ಜಗತ್ತಿಗೆ ಸಾಧ್ಯ ವಾಗುತ್ತದೆ. ಆದರೆ ವೈದ್ಯವಿಜ್ಞಾನ ಕ್ಷೇತ್ರದಲ್ಲಿ ಈ ಮಟ್ಟದ ಪ್ರಗತಿ ಸಾಧಿಸಲು ವಿಜ್ಞಾನಿಗಳಿಗೆ ಈವರೆವಿಗೂ ಸಾಧ್ಯ ವಾಗಿಲ್ಲ. ವಾಸ್ತವವಾಗಿ ಪ್ರಾಣಿಗಳಲ್ಲಿ ಕೂಡ ಕ್ಲೋನಿಂಗ್‌ನ ಯಶಸ್ಸು ಶೇ. ೨ಕ್ಕಿಂತ ಕಡಿಮೆಯಿದ್ದು ಅದು ಕುರಿ, ಇಲಿ ಹಾಗೂ ಹಸುವಿನಂತಹ ಕೆಲವೇ ಪ್ರಾಣಿಗಳಲ್ಲಿ ಫಲಪ್ರದ ವಾಗಿದೆ. ಮಾನವನಲ್ಲಿ ಕ್ಲೋನಿಂಗ್ ಇನ್ನೂ ಪ್ರಾಯೋಗಿಕ ಹಂತದಲ್ಲಿಯೇ ಇದ್ದು ಸಾಗಬೇಕಾದ ಹಾದಿ ಬಹಳವಿದೆ. ವಿಜ್ಞಾನಿಗಳ ಪ್ರಕಾರ ಕ್ಲೊನಾಯ್ಡ್ ನೈಜವಾಗಿ ಕ್ಲೋನಿಂಗ್ ಸಂಶೋಧನೆಗಳಲ್ಲಿ ನಿರತ ವಾಗಿರದೆ ಕೇವಲ ರೋಚಕ ಸುದ್ದಿಗಳನ್ನಷ್ಟೇ ಹರಡುತ್ತಿದೆ. ಹೀಗಾಗಿ ಮಾನವ ತದ್ರೂಪು ಶಿಶು ಜನಿಸಿರುವ ಬಗೆಗಿನ ಕ್ಲೊನಾಯ್ಡ್ ಕಂಪನಿಯ ಕಥೆ ಬರೇ ಬಂಡಲ್ ಅಂದರೆ ವೈಜ್ಞಾನಿಕ ಬುರುಡೆ ಎಂಬುದರಲ್ಲಿ ಎರಡು ಮಾತಿಲ್ಲ. ಇಷ್ಟೆಲ್ಲದರ ನಡುವೆ ಮಕ್ಕಳಿಲ್ಲದ ದಂಪತಿಗಳಿಗೆ ಕ್ಲೋನಿಂಗ್ ಮೂಲಕ ಮಗುವೊಂದನ್ನು ದೊರಕಿಸಿ ಕೊಡಲು ಕ್ಲೊನಾಯ್ಡ್ ಕಂಪನಿ ತಲಾ ೫೦೦೦೦ ಅಮೆರಿಕನ್ ಡಾಲರ್‌ಗಳ ಶುಲ್ಕ ವಿಧಿಸುತ್ತಿದೆಯಂತೆ. ಎಷ್ಟು ಮಂದಿ ಈ ಆಕರ್ಷಣೆಯ ಬಲೆಗೆ ಬಿದ್ದು ತಲೆ ಬೋಳಿಸಿಕೊಂಡಿದ್ದಾರೋ !

**ವಿಜ್ಞಾನ ಮತ್ತು ನೀತಿಶಾಸ್ತ್ರಗಳ ಸಂಘರ್ಷ**

ಮಾನವ ತದ್ರೂಪಿ ಶಿಶು ಜನಿಸಿದೆ ಎಂಬ ಸುದ್ದಿ ಪ್ರಕಟವಾದದ್ದೇ ತಡ ಸಾಮಾಜಿಕ ವಲಯಗಳಲ್ಲಿ ಕೋಲಾಹಲದ ಭಾರೀ ಬಿರುಗಾಳಿಯೇ ಎದ್ದಿತು. ಗರ್ಭಪಾತವೇ ಮಹಾಪರಾಧ ಎಂದು ನಂಬುವ ಅಮೆರಿಕೆಯ ಕ್ರಿಶ್ಚಿಯನ್ ಮೈತ್ರಿಕೂಟದ ಅಧ್ಯಕ್ಷೆ ರಾಬರ್ಟಾ ಕೋಮ್ಸ್ ಹೇಳಿಕೆ ನೀಡಿ, 'ಜೀವನದ ಬಗ್ಗೆ ಕೊಂಚವೂ ಗೌರವವಿಲ್ಲದಿರುವ ಇಂತಹ ಕೆಲಸವನ್ನು ತಡೆಯಬೇಕು' ಎಂದು ಆಗ್ರಹಿಸಿದರು. ವಿಷಯ ತಿಳಿಯುತ್ತಿದ್ದಂತೆಯೇ ಸಿಡಿಮಿಡಿಗೊಂಡ ಅಮೆರಿಕಾ ಅಧ್ಯಕ್ಷ ಜಾರ್ಜ್ ಬುಷ್, 'ತದ್ರೂಪಿ ಮಾನವ ಸೃಷ್ಟಿಕಾರ್ಯ ತುಂಬಾ ಕಿರಿಕಿರಿ ಉಂಟುಮಾಡುವಂತಹದ್ದಾಗಿದ್ದು ಇದನ್ನು ತಕ್ಷಣವೇ ನಿಷೇಧಿಸಬೇಕು', ಎಂದರು. 'ತದ್ರೂಪಿ ತಂತ್ರಜ್ಞಾನವನ್ನು ಸಮಗ್ರವಾಗಿ ನಿಷೇಧಿಸಬೇಕು ಎನ್ನುವವರಿಗೆ ಈ ಶಿಶು ಬೆಂಬಲ ಒದಗಿಸುತ್ತದೆ', ಎಂದವರು ವಿಸ್ಕಾನ್‌ಸಿನ್ ವಿಶ್ವವಿದ್ಯಾಲಯದ ವೈದ್ಯಕೀಯ ನೀತಿ ತಜ್ಞ ನಾರ್ಮನ್ ಫ್ರಾಸ್ಟ್. ತದ್ರೂಪಿ ತಂತ್ರಜ್ಞಾನವನ್ನು ವೈದ್ಯಕೀಯವಾಗಿ ಬದಲೀ ಅಂಗಾಂಗಗಳ ಉತ್ಪಾದನೆಗೆ ಹಾಗೂ ಔಷಧ ತಯಾರಿಕಾ ಉದ್ದೇಶಗಳಿಗೆ ಬಳಸಿಕೊಂಡರೆ ತಪ್ಪೇನು ಎಂಬುದು ಒಂದು ವಲಯದ ವಿಜ್ಞಾನಿಗಳ ವಾದ. ಈ ವಿವಾದ ಆರಂಭ ವಾದಾಗಲೇ ಪ್ರತಿಕ್ರಿಯಿಸಿದ ಬೆಂಗಳೂರಿನ ಹೆಸರಾಂತ ಪ್ರಸೂತಿ ತಜ್ಞೆ ಹಾಗೂ ಪ್ರಜನನ ಜೀವ ವಿಜ್ಞಾನಿ ಡಾ॥ ಸುಲೋಚನಾ ಗುಣಶೀಲ, ಪ್ರಕೃತಿ ಸಹಜ ಸೃಷ್ಟಿಯೇ ಎಂದಿಗೂ ಶ್ರೇಷ್ಠ ಎಂಬುದು ನಿಜವಾದರೂ ಒಬ್ಬ ಬುದ್ಧಿವಂತ ಹಾಗೂ ಕ್ರಿಯಾಶೀಲ ಮನುಷ್ಯನ ಸೃಷ್ಟಿ

೫೦ನೇ ಪುಟಕ್ಕೆ

# ಇದೇನು ಹಾವೋ ಹುಳುವೋ ?

ಪ್ರವಾಸ ಮಾಡಿದಾಗ ಎಷ್ಟೋ ವೈಚಿತ್ರ್ಯಗಳು ನಮ್ಮ ಕಣ್ಣಿಗೆ ಬೀಳುತ್ತವೆ, ಹೃದಯವನ್ನು ಪುಳಕಗೊಳಿಸುತ್ತವೆ. ಹಾಗಾಗಿ, ಮೆಲ್ಬೋರ್ನಿನಲ್ಲಿರುವ ನನ್ನ ತಂಗಿಯ ಮಗ ನನ್ನನ್ನೇ ಅಲ್ಲಿಗೆ ಕರೆಸಿಕೊಂಡಾಗ, ನನಗೆ ಎಲ್ಲಿಲ್ಲದ ಸಂತೋಷ! ಕಾರಣ, ಆಸ್ಟ್ರೇಲಿಯಾ ವಿಚಿತ್ರ ಪ್ರಾಣಿ, ಪಕ್ಷಿಗಳ ತವರೂರು. ಬೇರೆಲ್ಲೂ ಇಲ್ಲದ ಅಪರೂಪದ ಜೀವಿಗಳನ್ನು ನಾವು ಅಲ್ಲಿ ಕಾಣಬಹುದು.

ನನ್ನ ಸೋದರಳಿಯ ಸುಜಯ್ ನಮ್ಮನ್ನು ಯಾವುದೋ ಸ್ಥಳಕ್ಕೆ ಕರೆದೊಯ್ಯುತ್ತ ಹೈವೇನಲ್ಲಿ ಧಾವಿಸುತ್ತಿದ್ದಾಗ ಅವನ ಕಾರು ಒಮ್ಮೆಗೇ ಪಕ್ಕದ ರಸ್ತೆಯೊಂದಕ್ಕೆ ಹೊರಳಿದಾಗ ನನಗೆ ಆಶ್ಚರ್ಯವಾಯಿತು. ಕಾರಣ ಗೊತ್ತಾಗಲಿಲ್ಲ. ಕೇಳಿದರೆ ಹೇಳುವ ಆಸಾಮಿಯೂ ಅವನಲ್ಲ! ''ಇಲ್ಲೇನಿದೆಯೋ ?'' ಎಂಬ ನನ್ನ ಪ್ರಶ್ನೆಗೆ ''ಸುಮ್ಮನಿರಿ, ನಿಮಗೊಂದು ತಮಾಷೆ ತೋರಿಸುತ್ತೇನೆ'' ಎಂದು ಉತ್ತರ ನೀಡಿ ನನ್ನ ಬಾಯಿ ಮುಚ್ಚಿಸಿದ !

ಅಲ್ಲೊಂದು ಕೆಂಪು ಇಟ್ಟಿಗೆಗಳ ಸುಂದರ ಕಟ್ಟಡ. ಸುತ್ತಲ ಗೋಡೆಯಲ್ಲೆಲ್ಲಾ ಆಕರ್ಷಕವಾದ ಬಣ್ಣ ಬಣ್ಣದ ಚಿತ್ರಗಳು. ಟಿಕೆಟ್ ಕೊಂಡು ಒಳಗೆ ಹೋದರೆ, ಅಲ್ಲಿ ನಾವು ಕಂಡದ್ದು ಅವಿಸ್ಮರಣೀಯವಾದ ದೃಶ್ಯ! ೧೨ ಅಡಿ ಉದ್ದದ ಎರೆಹುಳು!! ಅದನ್ನು ಪ್ರದರ್ಶಿಸಲೆಂದೇ ಮಾಡಿರುವ ಉದ್ದನೆಯ ಗಾಜಿನ ಕೊಳವೆ. ಅಲ್ಲಿ ಆ ಜೀವಂತ ಹುಳುವಿನ ಮೆಲು ಚಲನೆ ಸ್ಪಷ್ಟವಾಗಿ ಕಾಣುತ್ತಿತ್ತು (ಮನೇಕಾ ಗಾಂಧಿಯವರ ಪ್ರತಿಕ್ರಿಯೆ ಏನಿರಬಹುದು ?). ಪಕ್ಕದ ಹಜಾರದಲ್ಲಿ ಆ ಅದ್ಭುತ ಎರೆಹುಳುವಿನ ಆಕಾರ ರೂಪುಗಳಲ್ಲಿ ವರ್ಣರಂಜಿತವಾದ ಒಂದು ದೊಡ್ಡ ಸುರಂಗವನ್ನು ಮಾಡಿದ್ದಾರೆ. ಅದರ ಬಾಯನ್ನು ನಾವು ಹೊಕ್ಕು, ಅದರ ''ದೇಹ''ದೊಳಗೆ ಕಾಲಿಟ್ಟು, ಅಲ್ಲಿನ ಅಂಕುಡೊಂಕುಗಳ ಅನುಭವ ಪಡೆಯುವ ಹಾಗೂ ಆ ಹುಳುವಿನಿಂದ ಹೊಮ್ಮುವ ''ಗುರುಗುರು'' ಶಬ್ದಗಳನ್ನು ಕೇಳಿಸಿಕೊಳ್ಳುವ ಅಸಾಧಾರಣ ವ್ಯವಸ್ಥೆ ಮಾಡಿದ್ದಾರೆ.



ಎರೆಹುಳು (ಮಣ್ಣು ಹುಳು) ಅನೆಲಿಡಾ ವರ್ಗಕ್ಕೆ ಸೇರಿದ ಒಂದು ಅಕಶೇರುಕ (ಬೆನ್ನುಮೂಳೆ ಇಲ್ಲದ) ಜಂತು. ಅದು ಸಾಮಾನ್ಯವಾಗಿ ಆರೇಳು ಅಂಗುಲ ಉದ್ದ ಇರುತ್ತದಲ್ಲವೆ ? ಆದರೆ ಆಸ್ಟ್ರೇಲಿಯಾದ ಈ ವಿಚಿತ್ರ ಎರೆಹುಳು ೬.೧ ಅಡಿ ಉದ್ದ ಇರುತ್ತದೆ, ೧.೫ ಪೌಂಡ್‌ಗಳವರೆಗೂ ತೂಗುತ್ತದೆ ಎಂದರೆ ನಂಬುತ್ತೀರಾ ? ಹೌದು, ಈ ಹುಳುಗಳನ್ನು ಮೊದಲು ಕಂಡ ವಿದೇಶಿಯರು ಅದನ್ನು ಹಾವೆಂದೇ ಭ್ರಮಿಸಿ, ಹೆದರಿಕೆಯಿಂದ ಹಿಂಜರಿದರಂತೆ! ನಂತರ ಅದೊಂದು ಅನಪಾಯಕರ ಎರೆಹುಳು ಎಂದು ತಿಳಿದ ಮೇಲೆ ಅದನ್ನು ತುಂಡು ತುಂಡು ಮಾಡಿ, ತಮ್ಮ ಮೀನು ಗಾಳಗಳಿಗೆ ಸಿಕ್ಕಿಸಲು ಪ್ರಾರಂಭಿಸಿದರು. ಆದರೆ ತನ್ನ ದೇಹದಿಂದ ಹಾಲಿನಂಥ ಒಂದು ದ್ರವವನ್ನು ಚಿಮ್ಮಿಸಿ, ಜಾರಿ ಜಾರಿ ಹೋಗುವ ಈ ಹುಳುವನ್ನು ಹಿಡಿಯುವುದೇನೂ ಅಷ್ಟು ಸುಲಭವಾಗಿರಲಿಲ್ಲ. ಅದರ ತಲೆ ಮಣ್ಣಿನಿಂದ ಹೊರಬರುತ್ತೇನೋ ಎಂದು ಕಾಯುತ್ತಾ ಕೂತಿದ್ದು, ಅದು ಕಂಡ ಕೂಡಲೇ ಆ ಭಾಗವನ್ನು ಹಿಡಿದೆಳೆದರೆ, ಆ ಜೀವಿಯ ಉಳಿದ ಭಾಗ ಉಬ್ಬಿಕೊಂಡು ಬಿಗಿಯಾಗಿ ಮಣ್ಣಿನಲ್ಲೇ ಉಳಿದು ಅವರನ್ನು ಸತಾಯಿಸುತ್ತಿತ್ತು.



ಆದರೆ ಅವರು ಬಿಡಬೇಕಲ್ಲಾ? ಹೊರಗೆ ಬಂದ ಆ ತಲೆಯ ಭಾಗಕ್ಕೊಂದು ಗಂಟು ಹಾಕಿ, ಮತ್ತೆ ಕಾಯುತ್ತ ಆಗಾಗ ಜಗ್ಗುತ್ತ ಕೂಡುತ್ತಿದ್ದರು. ಆ ಹುಳುವಿಗೇ ಸುಸ್ತಾಗಿ ಉಬ್ಬಿಕೊಳ್ಳುವುದು ನಿಂತಾಗ ಅದರ ಇಡೀ ದೇಹ ಸಲೀಸಾಗಿ ಹೊರಗೆ ಬಂದು ಅದರ ತೇಕಡಗಳು ಗಾಳದಲ್ಲಿ ನೇತಾಡಿ, ಮೀನುಗಳನ್ನು ಆಕರ್ಷಿಸಲು ಅನುಕೂಲವಾಗುತ್ತಿದ್ದವು. ಆಸ್ಟ್ರೇಲಿಯಾದ ಪ್ರಸಿದ್ಧ ''ಕೂಕಬರಾ'' ಪಕ್ಷಿಗಳಿಗೂ ಈ ಹುಳುವಿನ ರುಚಿ ಬಹಳ ಇಷ್ಟ! ಅವೂ ಹೀಗೆಯೇ ತಾಳ್ಮೆಯಿಂದ ಈ ಜಂತುಗಳನ್ನು ಎಳೆದೆಳೆದು ಸುಸ್ತು ಮಾಡಿಸಿ ಹಿಡಿಯುತ್ತವೆ. ಆದರೆ ಭಾರವನ್ನು ಹೊತ್ತು ಅವುಗಳಿಗೆ ಮುಂದೆ ಹಾರುವುದು ಕಷ್ಟವಾಗುತ್ತದೆ !

ಇಡೀ ಜಗತ್ತಿನಲ್ಲಿರುವ ಅಕಶೇರುಕ ಪ್ರಾಣಿಗಳಲ್ಲಿ ಆಸ್ಟ್ರೇಲಿಯಾದ ಈ ಹುಳುವೇ ದೊಡ್ಡದೆಂದು ಹೇಳಬಹುದು. ಬೇರೆ ಎರೆಹುಳುಗಳಂತೆ ಇವೂ ದ್ವಿಲಿಂಗಿಗಳೇ. ಆದರೆ ಅವುಗಳ ಮೊಟ್ಟೆಗಳು ಫಲಿತವಾಗಬೇಕಾದರೆ ಅವು ಬೇರೆ ಹುಳುಗಳೊಡನೆ ಲೈಂಗಿಕ ಸಂಬಂಧ ಇಟ್ಟುಕೊಳ್ಳಲೇಬೇಕಾಗುತ್ತದೆ. ಮಣ್ಣಿನಲ್ಲಿ ''ಬರೋ''ಗಳನ್ನು ಕೊರೆದು, ಭೂಮಿಯನ್ನು ಸಡಿಲಗೊಳಿಸಿ ರೈತನ ಗೆಳೆಯರೇ ಆಗಿರುವ ಈ ಎರೆಹುಳುಗಳು ಈಗಿನ ''ಸೂಪರ್ ಫಾಸ್ಫೇಟ್''ಗಳ ದಾಳಿಯಿಂದ ಅಪರೂಪವಾಗುತ್ತಿವೆ ಎನ್ನುತ್ತಾರೆ ಇಲ್ಲಿನವರು. ರಾಸಾಯನಿಕ ಗೊಬ್ಬರಗಳ ಭರಾಟೆಯ ಕಾರಣದಿಂದ ಹಾಗೂ ಮೀನುಗಾರರ ದೋಚುವಿಕೆಯ ಫಲವಾಗಿ ಈ ಲಂಬೂಗಳ ಅಸ್ತಿತ್ವಕ್ಕೇ ಕೊಡಲಿಪೆಟ್ಟು ಬೀಳುತ್ತಿದೆ ಎಂದು ಮನಗಂಡು, ಆಸ್ಟ್ರೇಲಿಯಾ ಸರ್ಕಾರ ಇವುಗಳಿಗೆ ಆರಕ್ಷಣೆ ನೀಡಲು ಪ್ರಾರಂಭಿಸಿದೆ.

ಈ ೧೦-೧೨ ಅಡಿ ಉದ್ದದ ರಾಕ್ಷಸ ಮಣ್ಣು ಹುಳುಗಳು ಮೊಟ್ಟೆ ಇಡುತ್ತವೆ, ನಿಜ. ಆದರೆ ಅವುಗಳ ಮೇಲೆ ಅಷ್ಟಾಗಿ ಕಾಳಜಿ ತೋರಿಸುವಂತೆ ಕಾಣುವುದಿಲ್ಲ. ಎಲ್ಲೆಂದರಲ್ಲಿ, ತೆರೆದ ಸ್ಥಳಗಳಾದರೂ ಸರಿ ಅವುಗಳನ್ನಿಟ್ಟು ಹೋಗಿಬಿಡುವುದೇ ಈ ಪೆದ್ದು ಜೀವಿಗಳ ಜಾಯಮಾನ. ಮೊಟ್ಟೆಯಿಂದ ಹೊರಬೀಳುವಾಗಲೇ ಆರಿಂಚು ಉದ್ದವಿರುವ ಮರಿಗಳೂ ಅಷ್ಟೆ– ಅತಿ ಸೂಕ್ಷ್ಮ, ಬೇಗ ಕಿತ್ತುಹೋಗುತ್ತವೆ.

''ಬರೀ ಮಣ್ಣು ಹುಳು ತಾನೇ'' ಎಂದು ಮೂಗು ಮುರಿಯದೆ, ಸೃಷ್ಟಿಯ ಈ ವೈಚಿತ್ರ್ಯವನ್ನು ಹಿಡಿದು, ಪ್ರದರ್ಶಿಸಿ ನಮಗೆಲ್ಲಾ ಬೆರಗು ಮೂಡಿಸಿ, ಹಣ ಮಾಡಿಕೊಳ್ಳುತ್ತಿರು ವವರ ಜಾಣತನಕ್ಕೇನು ಹೇಳೋಣ ?

ಡಾ|| ಲೀಲಾವತಿ ದೇವದಾಸ್
ನಂ. ೭೦, ಕೆ.ಜಿ.ಎಸ್. ಬಡಾವಣೆ, ವಿಜಯನಗರ, ಬೆಂಗಳೂರು - ೫೬೦ ೦೪೦

# ಸ್ವಾಯತ್ತತೆ ಕಾರ್ಯಭಾರ ಇತ್ಯಾದಿ

**ಈ**ಗೀಗ ವಿಶ್ವವಿದ್ಯಾಲಯ ಧನ ಸಹಾಯ ಆಯೋಗವು ವಿಶ್ವವಿದ್ಯಾಲಯಗಳು ಹಾಗೂ ಪದವಿ ಕಾಲೇಜುಗಳಿಗೆ ಸ್ವಾಯತ್ತತೆ ನೀಡುವತ್ತ ಹೆಚ್ಚು ಒಲವು ತೋರಿಸುತ್ತಿದೆ. ಕರ್ನಾಟಕ ಸರ್ಕಾರದ ಉನ್ನತ ಶಿಕ್ಷಣ ಸಚಿವರು ಆಗಾಗ ಈ ಬಗೆಯ ಮಾತುಗಳನ್ನೂ ಆಡುತ್ತಾರೆ. ಆದರೆ ವಿ.ವಿ.ಗಳು ಮತ್ತು ಕಾಲೇಜುಗಳು ಆ ದಿಸೆಯಲ್ಲಿ ಪ್ರಯತ್ನಿಸಿದಾಗ ಅದಕ್ಕೆ ಅಡ್ಡಗಾಲು ಹಾಕುವ ಮನೋಭಾವವೇ ಕಂಡುಬರುತ್ತಿದೆ.

ಇತ್ತೀಚೆಗೆ ಕುವೆಂಪು ವಿ.ವಿ. ಎರಡು ನಿರ್ಧಾರಗಳನ್ನು ತೆಗೆದುಕೊಂಡಿದೆ.

(೧) ಭಾಷಾ ಬೋಧನೆಗೆ ವಾರಕ್ಕೆ ಐದು ಗಂಟೆಗಳ ಕಾರ್ಯಭಾರವನ್ನು ನಿಗದಿಗೊಳಿಸುವುದು;

(೨) 'ಸೆಕ್ಷನ್' ಒಂದಕ್ಕೆ ೬೦ ವಿದ್ಯಾರ್ಥಿಗಳ ಮಿತಿ ನಿಗದಿಗೊಳಿಸುವುದು.

ಮೇಲಿನ ಎರಡೂ ನಿರ್ಧಾರಗಳೂ ವೈಜ್ಞಾನಿಕವಾಗಿ, ಶೈಕ್ಷಣಿಕವಾಗಿ, ಆಡಳಿತಾತ್ಮಕವಾಗಿ ಸೂಕ್ತ ನಿರ್ಧಾರಗಳೇ ಆಗಿವೆ. ಈ ಸಾಲಿನಿಂದ ಕುವೆಂಪು ವಿ.ವಿ.ದಲ್ಲಿ 'ಸೆಮಿಸ್ಟರ್ ಪದ್ಧತಿ' ಜಾರಿಯಾಗಿರುವುದರಿಂದಲೂ, 'ಭಾಷೆ'ಯನ್ನು ಅದರ ಎಲ್ಲಾ ಆಯಾಮಗಳೊಂದಿಗೆ ಕಲಿಸಲು ಪರೀಕ್ಷಾ ದೃಷ್ಟಿಯೊಂದನ್ನೇ ಬಿಟ್ಟು ಸಾಮಾಜಿಕ, ಸಾಂಸ್ಕೃತಿಕ ನೆಲೆಗಳೊಂದಿಗೆ – ಐದು ಗಂಟೆಗಳ ಕಾರ್ಯಭಾರ ನಿಗದಿಗೊಳಿಸಿರುವುದು ಸರಿಯಾದ ಕ್ರಮವಾಗಿದೆ. ಈ ಮೊದಲು ಅದು ೪ ಗಂಟೆ ಇತ್ತು. ಹೊಸ ನಿರ್ಧಾರದಿಂದ ಒಂದು ಗಂಟೆ ಹೆಚ್ಚಾಗಿದೆ. ಇದರಿಂದ ಅಧ್ಯಾಪಕರು ಯಾವುದೇ ಧಾವಂತವಿಲ್ಲದೆ ಭಾಷೆ, ಛಂದಸ್ಸು, ವ್ಯಾಕರಣ, ಸಂವಹನ, ಇತ್ಯಾದಿಗಳ ಹಿನ್ನೆಲೆಯಲ್ಲಿ ಕನ್ನಡ ಮತ್ತಿತರ ಭಾಷೆಗಳನ್ನು ಕಲಿಸಲು ಅನುಕೂಲವಾಗುತ್ತದೆ.

ಹಾಗೆಯೇ 'ಸೆಕ್ಷನ್' ಒಂದಕ್ಕೆ ೬೦ ವಿದ್ಯಾರ್ಥಿಗಳ ಮಿತಿ ನಿಗದಿಪಡಿಸಿರುವುದೂ ಕೂಡ ಉತ್ತಮ ಆಲೋಚನೆಯೇ ಆಗಿದೆ. ವಿದೇಶಗಳಲ್ಲಿನ ಕಾಲೇಜು ಮತ್ತು ವಿ.ವಿ.ಗಳಲ್ಲಿ ಈ ಸಂಖ್ಯೆ ೧೫, ೨೦, ೨೫ ಮಾತ್ರ ಇರುತ್ತದೆ. ನಮ್ಮದು ಬಡ ದೇಶವಾದ್ದರಿಂದ ಈ ಸಂಖ್ಯೆ ೫೦ ಇರುವುದು ಸೂಕ್ತ. ಈಗ ವಿ.ವಿ. ನಿರ್ಧರಿಸಿರುವಂತೆ ೬೦ ಆದರೂ ಸರಿಯೇ. ಆದರೆ ಸರ್ಕಾರ ಇನ್ನೂ ಈ ನೀತಿಯನ್ನು ಅನುಮೋದಿಸಿಲ್ಲವಂತೆ! ಸ್ವಾಯತ್ತತೆ ಕುರಿತು ಗಂಟೆಗಟ್ಟಲೆ ಮಾತನಾಡುವ ಸರ್ಕಾರ ಮತ್ತು ಸಚಿವರು, ಅಧಿಕಾರಿಗಳು ಇದನ್ನು ಒಪ್ಪುತ್ತಿಲ್ಲವಂತೆ. ಸರ್ಕಾರದ ಸದ್ಯದ ಆದೇಶದ ಪ್ರಕಾರ ಸೆಕ್ಷನ್ ಒಂದರ ಮಿತಿ ೯೦+೯= ೯೯ ! ಈ ಸಚಿವರು, ಸರ್ಕಾರಿ ಅಧಿಕಾರಿಗಳು, ಇಲಾಖೆ ಅಧಿಕಾರಿಗಳು ಎಂದಾದರೂ ಪಾಠ ಮಾಡಿದ್ದಾರೆಯೆ ? ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾದಷ್ಟೂ, ಅವರ ಮೇಲೆ ವೈಯಕ್ತಿಕ ಗಮನ ಹರಿಸುವುದು ಅಧ್ಯಾಪಕರಿಗೆ ಸಾಧ್ಯವಾಗುವುದೆ ? ಈ ನಡುವೆ ಆಪ್ತಸಲಹೆ, ಕಿರು ಪರೀಕ್ಷೆ, ಮಧ್ಯಾವಧಿ ಪರೀಕ್ಷೆ, ಆಂತರಿಕ ಮಾಪನ ಎಲ್ಲ ಇರುತ್ತವೆ. ೯೦ ವಿದ್ಯಾರ್ಥಿಗಳಿಗೆ ಇವನ್ನೆಲ್ಲಾ ಸೂಕ್ತವಾಗಿ ನಿರ್ವಹಿಸುವುದು ಸಾಧ್ಯವಾಗುತ್ತದೆಯೆ ? ಕೊನೆಯ ಪಕ್ಷ '೬೦'ರ ಸಂಖ್ಯೆಯಾದರೆ ಈಗಿರುವ ಸ್ಥಿತಿಗಿಂತಲೂ ಇನ್ನಷ್ಟು ಸಮರ್ಪಕವಾಗಿ ಬೋಧಿಸಬಹುದು. ಎಲ್ಲ ವಿದ್ಯಾರ್ಥಿಗಳು ಸಕ್ರಿಯವಾಗಿ ಕಲಿಕೆಯ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅವಕಾಶ ನೀಡುವುದು ಸಾಧ್ಯವಾಗುತ್ತದೆ. ಅದು ಬಿಟ್ಟು ಯಾವುದೋ ಕಾಲದ ೯೯ರ ಸಂಖ್ಯೆಗೆ ಪಟ್ಟು ಹಿಡಿದು ಸರ್ಕಾರ ಕುಳಿತಿರುವುದು ಸಮರ್ಥನೀಯವಲ್ಲ. ವಿ.ವಿ.ಗಳು ಒಂದು ಹೆಜ್ಜೆ ಮುಂದಿಟ್ಟರೆ, ನಮ್ಮ ಹೈಟೆಕ್ ಸರ್ಕಾರದ ನೀತಿಗಳು ಹತ್ತು ಹೆಜ್ಜೆ ಹಿಂದಿವೆ !

ಇನ್ನು ಹೊಸ ಕಾರ್ಯಭಾರ ಕುರಿತ ವಿ.ವಿ. ಆದೇಶ ತಲುಪಿ ತಿಂಗಳ ಮೇಲಾಗಿದೆ. ಆದರೆ ಸರ್ಕಾರ ಇನ್ನೂ ಅದನ್ನು ಅನುಮೋದಿಸಿಲ್ಲವಂತೆ ! ಸರ್ಕಾರದ ಅನುಮೋದನೆ ಪಡೆಯದ ವಿ.ವಿ. ತನ್ನ ಆದೇಶವನ್ನು ಕಾಲೇಜುಗಳಿಗೆ ಏಕೆ ಕಳಿಸಿತು ?

ಕೆಲವು ಕಾಲೇಜುಗಳಲ್ಲಿ ಅಧ್ಯಾಪಕರು ಸಿಬ್ಬಂದಿಯ ಕೊರತೆ ಇರುವುದರಿಂದಲೂ, ಅರೆಕಾಲಿಕರ ಸೇವೆ ಇನ್ನೂ ಇಲ್ಲದಿರುವುದರಿಂದಲೂ ಒಂದು ವಾರಕ್ಕೆ 'ಸೆಮಿಸ್ಟರ್ ಪದ್ಧತಿ'ಯಲ್ಲೂ ನಾಲ್ಕೇ ಗಂಟೆ ಕಾರ್ಯಭಾರ ನಿರ್ವಹಿಸುತ್ತಿದ್ದಾರಂತೆ ! ಇದು ವಿ.ವಿ. ಆದೇಶದ ಸ್ಪಷ್ಟ ಉಲ್ಲಂಘನೆ ಮಾತ್ರವಲ್ಲ, ಕಾರ್ಯಭಾರವನ್ನು ಹತ್ತಿಕ್ಕುವ ನಿರ್ಧಾರವೂ ಆಗಿದೆ. ಇಂಥದ್ದನ್ನು ಪ್ರಿನ್ಸಿಪಾಲರು ಹೇಗೆ ಸಮರ್ಥಿಸುತ್ತಾರೆ ?

ಇನ್ನೊಂದು ಕಾಲೇಜಿನಲ್ಲಿ ಉಪನ್ಯಾಸಕರ ಕೊರತೆ ಇರುವುದರಿಂದ ಮೊದಲಿನ ಹಾಗೆ ೯೯ ಜನಕ್ಕೆ ಒಂದು ವಿಭಾಗದಂತೆಯೇ ತರಗತಿ ತೆಗೆದುಕೊಳ್ಳುತ್ತಿದ್ದಾರಂತೆ !

ಇತ್ತೀಚೆಗೆ ಕೆಲವು ವಿಷಯಗಳನ್ನು ಬೋಧಿಸುವ ಅಧ್ಯಾಪಕರ ಸಂಘಗಳು ಎಲ್ಲ ವಿ.ವಿ.ಗಳಲ್ಲಿ ಇವೆ. ಈ ಸಂಘಗಳು ಸ್ವಾಯತ್ತತೆ, ಸೌಲಭ್ಯ, ಸಾಂಸ್ಕೃತಿಕ ಪರಿಸರ ನಿರ್ಮಾಣ ಮೊದಲಾದ ಚಟುವಟಿಕೆಗಳ ಬದಲು ಪಠ್ಯಕ್ರಮ ನಿರೂಪಿಸುವುದನ್ನೇ ತಮ್ಮ ಮುಖ್ಯ ಚಟುವಟಿಕೆಯನ್ನಾಗಿ ಮಾಡಿಕೊಂಡಿವೆ. ಆದರೆ ವಿ.ವಿ.ಗಳಲ್ಲಿ ಅಧ್ಯಯನ ಮಂಡಲಿಗಳು ಇರುವುದೇ ಈ ಕಾರಣಕ್ಕೆ. ಅಧ್ಯಾಪಕ ಸಂಘ ಈ ಬಗ್ಗೆ ಕೆಲವು ಸಲಹೆ ನೀಡಿದರೆ ಸಾಕು. ಅದು ಬಿಟ್ಟು ಪಠ್ಯಕ್ರಮ ತಯಾರಿಕೆಯೆ ಮುಖ್ಯ ಎಂದುಕೊಳ್ಳಬಾರದು.

ಏಕೆಂದರೆ, ಉನ್ನತ ಶಿಕ್ಷಣ ಇಂದು ಅನೇಕ ಒತ್ತಡಗಳಲ್ಲಿದೆ. ವಿದೇಶೀ ವಿ.ವಿ.ಗಳ ಆರಂಭದ ಒತ್ತಡ ಒಂದು ಕಡೆ ಇದ್ದರೆ, ಕುಸಿಯುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ, ಆಡಳಿತದಲ್ಲಿನ ಅದಕ್ಷತೆ, ಹಳೇ ಮಾದರಿ ಪರೀಕ್ಷೆ, ಕಾಣದಾಗುತ್ತಿರುವ ಸಾಹಿತ್ಯಿಕ-ಸಾಂಸ್ಕೃತಿಕ ವಾತಾವರಣ, ಮರೆಯಾಗುತ್ತಿರುವ ಮಾನವ ಸಂಬಂಧಗಳು, ಈ ನೆಲೆಗಳನ್ನು ಗುರುತಿಸಿ ಅಧ್ಯಾಪಕರ ಸೇವಾ ಭದ್ರತೆ, ಸೌಲಭ್ಯಗಳ ಸಮರ್ಪಕ ವಿತರಣೆ, ವಿದ್ಯಾರ್ಥಿಗಳ ಸಕ್ರಿಯ ಪಾಲ್ಗೊಳ್ಳುವಿಕೆ, ಆಪ್ತಸಲಹೆ, ಸಾಂಸ್ಕೃತಿಕ ಚಟುವಟಿಕೆ ಇತ್ಯಾದಿಗಳ ಕಡೆ ಹೆಚ್ಚು ಗಮನವನ್ನು ಈ ಸಂಘಗಳು ನೀಡಬೇಕಾಗಿದೆ.

ಇತ್ತೀಚೆಗೆ ಯು.ಜಿ.ಸಿ.ಯ 'ನ್ಯಾಕ್' ಸಮಿತಿ ಕೆಲವು ಕಾಲೇಜುಗಳನ್ನು ಪರಿಶೀಲಿಸಿ ಅವುಗಳಿಗೆ 'ಗ್ರೇಡಿಂಗ್' ನೀಡುತ್ತಿದೆ. ಹೀಗೆ 'ಗ್ರೇಡಿಂಗ್' ನೀಡುವಾಗ ನ್ಯಾಕ್ ಸಮಿತಿ ಅಧ್ಯಾಪಕರ ಶೈಕ್ಷಣಿಕ ಅರ್ಹತೆ ಮತ್ತು ಅವರ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಅತ್ಯಂತ ಮಹತ್ವ ನೀಡುತ್ತದೆ. ಅಂದರೆ ಸಂಶೋಧನೆ ಕೈಗೊಂಡಿರುವ, ಲೇಖನ ಬರೆಯುವ, ಪುಸ್ತಕ ಪ್ರಕಟಿಸುವ, ಪ್ರಾಜೆಕ್ಟ್ ಕೈಗೊಳ್ಳುವ ಅಧ್ಯಾಪಕರನ್ನು ಗುರುತಿಸಿ, ಶ್ಲಾಘಿಸಿ, ಇನ್ನೂ ಹೆಚ್ಚು ಹೆಚ್ಚು 'ಅಕಾಡೆಮಿಕ್' ಆಗಿ ಬೆಳೆಯಲು ಉತ್ತೇಜಿಸುತ್ತದೆ. ಹಾಗೆಯೇ ಪಿಎಚ್.ಡಿ. ಆದ ಅಧ್ಯಾಪಕರಿಗೆ ಎರಡು ಇಂಕ್ರಿಮೆಂಟ್ ಕೂಡ ನೀಡಿದೆ.

ಆದರೆ ನಮ್ಮ ಸರ್ಕಾರಕ್ಕೆ ಈ ಪಿಎಚ್.ಡಿ., ಗೀಎಚ್.ಡಿ. ಏನೂ ಮುಖ್ಯ ಅಲ್ಲ! ಅವರಿಗೆ ಎಲ್ಲವೂ ಒಂದೇ ! ಪಿಎಚ್.ಡಿ., ಎಂ.ಫಿಲ್. ಮಾಡಿದ ಅಧ್ಯಾಪಕರಿಗೆ ಈ ಮೊದಲು ಕೊಡುತ್ತಿದ್ದ ಸೌಲಭ್ಯವನ್ನು ಹಿಂತೆಗೆದುಕೊಂಡು 'ಅದ್ಭುತ' ಉತ್ತೇಜನ ನೀಡುತ್ತಿದೆ !

ಹಾಗೆಯೇ ನ್ಯಾಕ್ ಕಮಿಟಿಗಳು ಬಂದಾಗ ಪ್ರಿನ್ಸಿಪಾಲರು ನಿಮ್ಮ ಲೇಖನ, ಪುಸ್ತಕ, ಥೀಸಿಸ್ ತೋರಿಸಿ ಎಂದು ಅಧ್ಯಾಪಕರಿಗೆ ಹೇಳುತ್ತಾರೆ. ಅಧ್ಯಾಪಕನೊಬ್ಬ ಲೇಖನವೊಂದನ್ನು ಬರೆಯಲು ಓದಬೇಕು, ಸಭೆಗಳಲ್ಲಿ ಮಾತನಾಡಬೇಕು, ನಂತರ ಅದನ್ನು ಸಮರ್ಪಕವಾಗಿ ಬರೆಯಬೇಕು. ಆದರೆ ಅದು ಸಾಧ್ಯವಾಗುತ್ತಿಲ್ಲ. ಏಕೆಂದರೆ ಅಧ್ಯಾಪಕರು ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಸಭೆ ಸಮಾರಂಭಗಳಿಗೆ ಇತರೆ ಕಾಲೇಜುಗಳಿಗೆ ಹೋಗಲು ಸೌಲಭ್ಯಗಳಿಲ್ಲ. ಆದ್ದರಿಂದ ವಿ.ವಿ.ಗಳು, ಶಿಕ್ಷಣ ಇಲಾಖೆಗಳು ವರ್ಷಕ್ಕೆ ಐದಾರು ದಿನಗಳನ್ನು ಈ ಬಗೆಯ ಚಟುವಟಿಕೆಗಳಿಗೆ ಮೀಸಲಿಡಬೇಕು. ಉಪನ್ಯಾಸಕನೊಬ್ಬ ಈ ಬಗೆಯ ಚಟುವಟಿಕೆಗಳಲ್ಲಿ ತೊಡಗದಿದ್ದರೆ ಅವನು ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸುವುದಾದರೂ ಹೇಗೆ ? ಅಂತಹ ಪ್ರಯತ್ನಗಳನ್ನು ಕೈಗೊಳ್ಳುವುದಾದರೂ ಹೇಗೆ ?

ಆದ್ದರಿಂದ ವಿ.ವಿ.ಗಳು ಮತ್ತು ಸರ್ಕಾರಿ ಕಾಲೇಜುಗಳ, ಅಧ್ಯಾಪಕರ ಸ್ವಾಯತ್ತತೆ, ಶೈಕ್ಷಣಿಕ ಅರ್ಹತೆಗಳ ಬಗ್ಗೆ ಸೂಕ್ತ ನಿರ್ಧಾರಗಳನ್ನು ಈಗಾದರೂ ತೆಗೆದುಕೊಳ್ಳಲಿ. ಆ ಮೂಲಕ ಬರುವ ದಿನಗಳಲ್ಲಿ ನಮ್ಮ ಶಿಕ್ಷಣ ವ್ಯವಸ್ಥೆ ಇನ್ನಷ್ಟು ಸಮರ್ಪಕವಾಗಲಿ. ಈ ದಿಸೆಯಲ್ಲಿ ವಿ.ವಿ. ಮತ್ತು ಉನ್ನತ ಶಿಕ್ಷಣ ಇಲಾಖೆ, ಕಾಲೇಜು ಶಿಕ್ಷಣ ಇಲಾಖೆ ಚಿಂತಿಸಬೇಕಿದೆ.

ಎಸ್. ಪ್ರಸಾದಸ್ವಾಮಿ
ಕನ್ನಡ ವಿಭಾಗದ ಮುಖ್ಯಸ್ಥರು, ಸರ್. ಎಂ. ವಿ. ಸರ್ಕಾರಿ ವಿಜ್ಞಾನ ಕಾಲೇಜು. ಭದ್ರಾವತಿ - ೫೭೭ ೩೦೨



# ಎರೆಗೊಬ್ಬರದ ತಜ್ಞ ತಿಮ್ಮಯ್ಯ

**ಕ**ಣ್ಣಿಗೆ ಕಾಣಿಸುವಷ್ಟು ದೂರಕ್ಕೂ ಏರುತಗ್ಗಿನ ಬರಡು ಭೂಮಿ. ಅಲ್ಲಿ ಕೃಷಿಗೆ ಮಳೆಯ ನೀರೇ ಆಧಾರ. ಆದರೆ ಸುರಿಯುವ ಮಳೆ ನೀರು ಭೂಮಿಗೆ ಇಂಗುವ ಬದಲು, ಇಳಿಜಾರಿನತ್ತ ಹರಿದುಹೋಗುವಂಥ ಪ್ರದೇಶ. ಅರಸೀಕೆರೆ ತಾಲ್ಲೂಕು ಮೈಲನಹಳ್ಳಿಗೆ ಸೇರಿದ ಒಂಟೆಕಲ್ಲಟ್ಟೆ ದಾಖಲೆ ಗ್ರಾಮ ಮೇಲಿನ ಒಣ ಪ್ರದೇಶದ ವ್ಯಾಪ್ತಿಗೆ ಸೇರುತ್ತದೆ. ಎರೆಗೊಬ್ಬರ ತಜ್ಞ ತಿಮ್ಮಯ್ಯನವರನ್ನು ರೂಪಿಸಿದ್ದು ಆ ಗ್ರಾಮ. ತಿಪಟೂರಿನ ಬೈಫ್ ಸಂಸ್ಥೆ ಅಲ್ಲಿ ಅಂತರ್ಜಲ ಮರುಪೂರಣ ಯೋಜನೆ ಕೈಗೊಂಡಿದ್ದು, ಆ ಊರಿನ ರೈತ ತಿಮ್ಮಯ್ಯ ಸಂಸ್ಥೆಗೆ ಆ ಭಾಗದ ವಕ್ತಾರರೂ ಆಗಿದ್ದಾರೆ.

ಕೃಷಿಯ ಬಗ್ಗೆ, ಅಂತರ್ಜಲ ಮರುಪೂರಣದ ಬಗ್ಗೆ ಎರೆಗೊಬ್ಬರದ ಬಗ್ಗೆ ಹರಳು ಹುರಿದಂತೆ ಪಟಪಟ ಮಾತನಾಡುವ ತಿಮ್ಮಯ್ಯನವರನ್ನು 'ಈಟಿವಿ' ರೈತರಿಗಾಗಿ ನಡೆಸಿಕೊಡುವ 'ನೆಲ-ಜಲ' ಕಾರ್ಯಕ್ರಮ ನೋಡಿರುವವರು ಮರೆಯಲು ಸಾಧ್ಯವಿಲ್ಲ.

ನಾಲ್ಕುವರೆ ಎಕರೆ ಕಲ್ಲು ಬೋರೆ ಜಮೀನಿನ ಒಡೆಯರಾದ ಇವರು, ಗುಡ್ಡದ ಮೇಲೊಂದು ಮನೆ ಕಟ್ಟಿಕೊಂಡು ಮಕ್ಕಳು ಮರಿಗಳೊಂದಿಗೆ ತೃಪ್ತಿಯ ಜೀವನ ನಡೆಸುತ್ತಿದ್ದಾರೆ. ಸರಕಾರ ರೈತರಿಗೆ ನೀಡುವ ಸಾಲ, ನೆರವು, ಸಬ್ಸಿಡಿ ಇತ್ಯಾದಿ ಆಮಿಷಗಳಿಗಾಗಿ ಕೆಲಸ ಕಾರ್ಯ ಬದಿಗಿಟ್ಟು ಅಲೆಯುವವರಲ್ಲ. ಸಾವಯವ ಕೃಷಿ ಮಾಡುವ ಇವರಿಗೂ ರಸಗೊಬ್ಬರಕ್ಕೂ ಗಾವುದ ದೂರ. ತಿಪ್ಪೆ ಗೊಬ್ಬರ ಬಳಸಿಯೇ ತಮ್ಮ ಜಮೀನಿನಲ್ಲಿ ಬರದೊಡ್ಡಿ ಭತ್ತ, ರಾಗಿ, ಹುರುಳಿ, ಹಾರಕ, ಸಾಮೆ, ಅವರೆ, ತೊಗರಿ, ಹುಚ್ಚೆಳ್ಳು, ಹಲಸಂದೆ – ಇತ್ಯಾದಿ ಧಾನ್ಯ ಕಾಳು ಬೆಳೆಯುತ್ತಾರೆ.

ಎರೆಹುಳು ಗೊಬ್ಬರ ತಯಾರಿಸುವುದರಲ್ಲಿ ಪರಿಣತರಾಗಿರುವ ಇವರು ಎಷ್ಟು ಜಾತಿಯ ಎರೆಹುಳುಗಳಿವೆ, ಅವು ಹೇಗೆ ಸಂತಾನವೃದ್ಧಿ ಮಾಡುತ್ತವೆ, ಹೇಗೆ ಮಣ್ಣಿನ ಫಲವತ್ತತೆ ಹೆಚ್ಚಲು ಸಹಾಯಕವಾಗುತ್ತವೆ ಎಂಬುದನ್ನು ವಿವರಿಸುತ್ತ ಏಕಕಾಲಕ್ಕೆ ಕೀಟ ತಜ್ಞರೂ ಕೃಷಿ ಪರಿಣತರೂ ಆಗುತ್ತಾರೆ!

ಒಣ ಪ್ರದೇಶದ ರೈತನಾದರೂ ಮಳೆಯನ್ನೋ, ಸರಕಾರವನ್ನೋ ದೂರುತ್ತ ನಿಟ್ಟುಸಿರು ಬಿಡುವ ಜಾಯಮಾನದವರಲ್ಲ. ಬೈಫ್ ಸಂಪರ್ಕದಿಂದ ಸೃಜನಾತ್ಮಕವಾಗಿ ಆಲೋಚಿಸುವುದನ್ನು ಕಲಿತಿದ್ದಾರೆ. ಗ್ರಾಮೀಣ ರೈತರ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಸರಕಾರೇತರ ಸಂಸ್ಥೆಯಾದ ಬೈಫ್‌ನ ಹೆಸರು ಕೇಳಿಯೇ ಹೆದರಿ ತಪ್ಪಿಸಿಕೊಂಡು ಓಡುತ್ತಿದ್ದುದನ್ನು ನೆನಪಿಸಿಕೊಂಡು ಈಗಲೂ ಬಾಯ್ತುಂಬ ನಗುತ್ತಾರೆ!

ಮಳೆಯ ವಿಷಯ ಬಂದಾಗ, 'ಈ ವರ್ಷ ಈವರೆಗೆ ಬರಿಯ ಆರು ಮಿ.ಮೀ. ಮಳೆಯಷ್ಟೆ ಆಗಿದೆ!' – ಎನ್ನುತ್ತ ನಮ್ಮನ್ನು ಅಚ್ಚರಿಗೊಳಿಸುತ್ತಾರೆ. ಅವರ ಜಮೀನಿನ ಒಂದು ಮೂಲೆಯಲ್ಲಿ ಮಳೆ ಅಳೆಯುವ ಉಪಕರಣವಿರುವುದು ಆಗಷ್ಟೆ ನಮ್ಮ ಗಮನಕ್ಕೆ ಬರುತ್ತದೆ! ಬೆಂಗಾಡು ರೈತನ ಈ ಆಧುನಿಕ ಅರಿವಿನ ಬಗ್ಗೆ ನಮಗೆ ಮತ್ತೊಮ್ಮೆ ಅಚ್ಚರಿಯಾಗದೆ ಇರುವುದಿಲ್ಲ.

ಅಂತರ್ಜಲ ಮರುಪೂರಣ ಯೋಜನೆಗೆ ಬೈಫ್ ಸಂಸ್ಥೆ ಈ ಪ್ರದೇಶವನ್ನು ಆಯ್ದುಕೊಂಡಿರುವುದು ಸೂಕ್ತವೇ ಆಗಿದೆ. ಮಳೆಯ ನೀರು ಹರಿದು ಪೋಲಾಗದಿರುವಂತೆ ಅಲ್ಲಲ್ಲಿ ಅಡ್ಡದಿಣ್ಣೆ ಎಬ್ಬಿಸಲಾಗಿದೆ. ನೀರು ಸಂಗ್ರಹವಾಗುವಂತೆ ಒಂದೆರಡು ಕಡೆ ಕಟ್ಟೆಯನ್ನೂ ಕಟ್ಟಿಸಿದ್ದಾರೆ. ಈ ಎಲ್ಲ ಪ್ರಯತ್ನಗಳ ಫಲವಾಗಿ ಆ ಭಾಗದ ಅಂತರ್ಜಲದ ಮಟ್ಟ ಸಾಕಷ್ಟು ಹೆಚ್ಚಿರುವುದನ್ನೂ ಗುರುತಿಸಲಾಗಿದೆ. ಅಂತರ್ಜಲ ಮರುಪೂರಣದ ಬಗ್ಗೆ ಪ್ರತ್ಯಕ್ಷ ತಿಳಿವಳಿಕೆ ಪಡೆಯಲು ದೂರದ ಊರುಗಳಿಂದ ರೈತರು, ಕೃಷಿ ವಿಶ್ವ ವಿದ್ಯಾನಿಲಯದ ಪ್ರಾಧ್ಯಾಪಕರು, ವಿದ್ಯಾರ್ಥಿಗಳು ಆಗಾಗ ಅಲ್ಲಿಗೆ ಬರುತ್ತಾರೆ. ಅಂಥವರಿಗೆ ಕ್ಲಾಸ್ ತೆಗೆದುಕೊಳ್ಳಲು ತಿಮ್ಮಯ್ಯನವರ ಹೊಲದಲ್ಲೇ ಒಂದು ವಿಶ್ರಾಂತಿ ಕಟ್ಟೆ ನಿರ್ಮಿಸಲಾಗಿದೆ! ಆಗ ತಿಮ್ಮಯ್ಯನವರು ಜಲತಜ್ಞರಾಗಿ, ನೀರಾವರಿ ಎಂಜಿನಿಯರಾಗಿ ಪ್ರಾಧ್ಯಾಪಕರುಗಳಿಗೆ ಬೋಧಿಸುತ್ತಾರೆ!

ಈಗ ರೈತರ ರಸಗೊಬ್ಬರದ ಮೇಲಣ ಮೋಹ ಕ್ರಮೇಣ ಕಡಿಮೆಯಾಗುತ್ತಿದ್ದು, ಅವರ ಒಲವು ಸಾವಯವ ಕೃಷಿಯತ್ತ ಹೊರಳುತ್ತಿದೆ. ತಿಮ್ಮಯ್ಯನವರ ಎರೆಗೊಬ್ಬರಕ್ಕೆ ಬೇಡಿಕೆಯೂ ಹೆಚ್ಚುತ್ತಿದೆ. ಎರೆಗೊಬ್ಬರ ಕೊಳ್ಳಲು ಬರುವ ರೈತರಿಗೂ ತಿಮ್ಮಯ್ಯನವರ ಉಪದೇಶ ಬೇಕಾಗುತ್ತದೆ. ಹಾಗೆ ಬಂದವರು ಮಳೆ ನೀರು ಕೊಯ್ಲಿನ ಬಗೆಗೂ ತಿಳಿವಳಿಕೆ ಪಡೆಯುತ್ತಾರೆ. ತಮ್ಮ ಊರುಗಳಲ್ಲಿಯೂ ಇಂಥ ಪ್ರಯತ್ನ ಯಾಕೆ ಮಾಡಬಾರದು ಎಂಬ ಆಲೋಚನೆ ಅವರ ತಲೆಯಲ್ಲಿ ಸುಳಿಯುತ್ತದೆ. ಇದರಿಂದ ಊರಿಗೊಬ್ಬ ತಿಮ್ಮಯ್ಯ ರೂಪುಗೊಳ್ಳುವುದಕ್ಕೂ ಸಹಾಯಕವಾಗುತ್ತದೆ.

ಹೀಗೆ ಹಲವಾರು ಆಧುನಿಕ ವಿಷಯಗಳನ್ನು ತಿಳಿಸಿಕೊಡುವ ತಿಮ್ಮಯ್ಯನವರು ಇದನ್ನೆಲ್ಲ ಶಾಲೆ-ಕಾಲೇಜಿನಲ್ಲಿ ಕಲಿತವರಲ್ಲ. ಮಾತಿನ ಮಧ್ಯೆ ಒಂದೊಂದೇ ಗಾದೆ ಹೇಳುತ್ತ ತಮಗಿರುವ ತಿಳಿವಳಿಕೆಯನ್ನು ನಮ್ಮೊಂದಿಗೆ ಹಂಚಿಕೊಳ್ಳುತ್ತಾರೆ. ಬರಿಯ



ತಿಮ್ಮಯ್ಯನವರ ಕುಟುಂಬದ ಸದಸ್ಯರು

ಮಾತಾಡುತ್ತಲೇ ಕಾಲ ಕಳೆಯುವ ರೈತನಲ್ಲ. ಕೇಳುವವರನ್ನು ಆಲೋಚನೆಗೆ ಹಚ್ಚುವ ರೈತ. ಜೀವನದ ಅನುಭವದ ಶಾಲೆಯಲ್ಲಿ ಕಲಿತವರು. ಅವರು ಆ ಊರಿನ ರೈತ ಸಂಘಟನೆಯ ಅಧ್ಯಕ್ಷರೂ ಹೌದು.

ಬೈಫ್‌ನ ಸಂಪರ್ಕದಿಂದ ಹಳ್ಳಿಯ ರೈತರು ಸ್ವಾವಲಂಬಿಗಳಾಗಲು, ಸ್ವತಃ ಆಲೋಚಿಸಲು, ಇತರರಿಗೆ ಮಾರ್ಗದರ್ಶಿಯಾಗಲು ಸಾಧ್ಯವಾಗಿದೆ. ಹಾಗಾಗಿ, ಬೈಫ್ ಸಂಸ್ಥೆಗೂ ಶ್ಲಾಘನೆ ಸಲ್ಲುತ್ತದೆ.

**ಕೆ. ಪಿ. ಸ್ವಾಮಿ**
೧೬೮, ೧೧ನೇ ಮುಖ್ಯರಸ್ತೆ, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮

# ಸಂಗೀತ ಮತ್ತು ಕ್ರಾಂತಿ ಗೀತೆಗಳು

**ಸ. ರಾ. ಸುಳಕೂಡೆ**

> **'ಕ್ರಾಂತಿಗೀತೆ'ಗಳು ಕೂಲಿಕಾರರ, ರೈತರ, ದುಡಿಮೆಗಾರರ ಒಡಲಾಳದೊಳಗೆ ಯಾವತ್ತು ಜೀವಂತವಾಗಿವೆ. ಅವರು ತಮ್ಮ ತಮ್ಮ ವಲಯಗಳಲ್ಲಿ ವ್ಯಕ್ತಗೊಳಿಸಿದ್ದರೂ ಅದು ಸಂಗೀತ ಕ್ಷೇತ್ರದೊಳಗೆ ಪರಿಚಿತವಾಗುವುದಿಲ್ಲ. ಜನಪದ, ಕ್ರಾಂತಿಯ ಧಾಟಿಗಳನ್ನು ಆಧುನಿಕರು ತಪ್ಪಾಗಿ ಪ್ರಯೋಗಿಸಿ ಕ್ರಾಂತಿಕಳೆಯನ್ನು ಇನ್ನೊಂದಕ್ಕೆ ಕಟ್ಟುತ್ತಿರುತ್ತಾರೆ. ಒಬ್ಬ ಸಂಗೀತಗಾರನು ಸಾಕ್ಷರತಾ ಆಂದೋಲನ ಗೀತೆಗಳನ್ನು ಅತೀ ಸಪ್ಪೆಯಾದ ನೀರಸ ಧಾಟಿಯಲ್ಲಿ ಹಾಡಿದಾಗ ನಡುವೆ ಬಾಯಿ ಹಾಕಿದ ಪ್ರಾಜ್ಞ ಹೇಳಿದ್ದು ಕ್ರಾಂತಿಗೀತೆಗಳನ್ನು ಹಾಡುವುದು ಈ ಪರಿಯಲ್ಲವೆಂದಾಗ ಸಂಗೀತಗಾರನಿಗೆ ಇರುಸುಮುರುಸಾಗಿದ್ದು ಸಹಜವೇ. ಕ್ರಾಂತಿಗೀತೆಗಳನ್ನು ಹಾಡಿದಾಗ ರೋಮಾಂಚನವಾಗುತ್ತದೆ.**

**ಸಂ**ಗೀತವಿಲ್ಲದ ಸ್ಥಾನವಿಲ್ಲ; ಆ ಸ್ಥಾನವೂ ಇಲ್ಲೆಂದರೆ ಯಾರಿಗೂ ಮುಜುಗರವಾಗಲಾರದು. ಲಯ ರಸ ಜೀವನದ ಅವಿಭಾಜ್ಯ ಅಂಗಗಳೇ ಆಗಿವೆ. ಮನುಷ್ಯನನ್ನು ಕಟ್ಟಿಹಾಕಲು ಅನೇಕ ಸಂಗತಿಗಳು ಕಾಲ ಕಾಲಕ್ಕೆ ಪೈಪೋಟಿಯನ್ನು ಮಾಡಿವೆ; ಮಾಡುತಲಿವೆ. ಪುರಾತನ ಕಾಲವನ್ನು ನೆನಸಿಕೊಂಡಾಗ ಬಲಿಷ್ಠರು ಅನೇಕ ಆಟಗಳನ್ನು ಹೂಡಿ ತಮ್ಮ ಶಕ್ತಿಯನ್ನು ಪ್ರದರ್ಶಿಸಿ ಗೆಲುವು ಸಾಧಿಸಿಯೇ ತೀರುತ್ತಿದ್ದರು. ಸಾಧನೆಯ ಉತ್ತುಂಗ ಶಿಖರಕ್ಕೇರಲು ವಿಶ್ವಾಮಿತ್ರ ಯತ್ನಿಸಿದಾಗಲೆಲ್ಲ ರಂಭೆ-ಊರ್ವಶಿಯರ ಆಗಮನವಾಗಿ ಎಲ್ಲವೂ ಭಂಗವಾಗುತ್ತಿದ್ದುದು ಜಗತ್ತಿನ ಮತ್ತು ಸಭ್ಯರ ಗೆಲುವಿಗಾಗಿಯೇ. ಮನುಷ್ಯ ಬದುಕುವುದಕ್ಕಿಂತ ಹೆಚ್ಚು ಹೆಚ್ಚು ಬಂಧನಕ್ಕೆ ಗುರಿಯಾಗುವಂತಹ ವ್ಯವಸ್ಥೆಗಳೇ ಬೆಳೆದುಬಂದಿವೆ; ಬೆಳೆಯಲು ಎಲ್ಲ ವ್ಯವಸ್ಥೆಗಳನ್ನು ಬಳಸಿಕೊಳ್ಳುತ್ತವೆ. ಸಂಗೀತ ಮನುಷ್ಯನನ್ನು ಪಳಗಿಸುವ ಇನ್ನೊಂದು ಮುಖವೇ ಆಗಿದೆ. ದೊಡ್ಡವರ ಸಂಭ್ರಮದ ಗೆಲುವಿನ ನಿಲುವಿನ ಸಂಕೇತವಾದ ಸಂಗೀತ ಇಂದು ಉತ್ತುಂಗಕ್ಕೇರಿ ನಿಂತಿದೆ. ರಾಜ ಮಹಾರಾಜರ ಒಡ್ಡೋಲಗ, ದೇವಸ್ಥಾನ, ಮಠ ಮಾನ್ಯರೊಂದಿಗೆ ನಿಕಟ ಸಂಬಂಧ ಹೊಂದಿದ ಸಂಗೀತ ಗುಡಿಸಲಿಗೂ ಲಗ್ಗೆ ಹಾಕಿದೆ. ಸಮೂಹ ಮಾಧ್ಯಮ ಕ್ರಾಂತಿಯಿಂದಾಗಿ ರಾಗ, ರಾಗವಲ್ಲದ ಅನುರಾಗ-ಅನುಗ್ರಹ, ಪ್ರೇಮ-ಕಾಮ, ಭಯ-ಭಕ್ತಿಯನ್ನು ಸಾರುವ ಸಂಗೀತ ಎಲ್ಲರ ನಾಲಿಗೆ, ತಲೆಗಳನ್ನು ತುಂಬಿಕೊಂಡಿದೆ.

ಸಂಗೀತವಿಂದು ದೇಶೀಯ ಪರಕೀಯವೆಂಬ ಎರಡು ಗೊಂದಲಗಳೊಂದಿಗೆ ಮಿಶ್ರ ತಳಿಯಾಗಿಯೂ ಹೊರ ಹೊಮ್ಮುತ್ತಿದೆ. ಸಂಗೀತ ಶಾಲೆಗಳು, ಸಂಗೀತ ಸಂಸ್ಥೆಗಳು, ಸಂಗೀತ ಮಾರಾಟ ಕೇಂದ್ರಗಳು ಇಂದು ವ್ಯಾಪಕವಾಗಿ ಹಬ್ಬುತ್ತಿವೆ. ಮನುಷ್ಯ ಯಾವಾಗ ಬದುಕಿಗೆ ವಿಮುಖನಾಗುತ್ತಾನೋ ಆವಾಗಲೆಲ್ಲ ಅವನು ಉತ್ಪಾದಕವಲ್ಲದ ಮತ್ತು ಸಮಯ ಅಪವ್ಯಯ ಮಾಡುವ ಕಾರ್ಯದಲ್ಲಿ ಮಗ್ನನಾಗುತ್ತಾನೆಂದರೆ ತಪ್ಪಾಗದು.

ಇಂದು ಸಂಗೀತ ವಾಣಿಜ್ಯೀಕರಣಕ್ಕೆ ಒಳಗಾಗಿದೆ. ಪೇಟೆಯ ಸರಕಾಗಿರುವ 'ಸಂಗೀತ' ಇಂದು ವಿಧವಿಧ ಲಹರಿ ಲಗಾಮುಗಳಿಂದ ಮನುಷ್ಯನ ಮನಸ್ಸನ್ನು ಆವರಿಸಿಕೊಂಡಿದೆ. ಹುಟ್ಟಿದ ಮಗುವಿನಿಂದ ಹಿಡಿದು ಮುದುಕರವರೆಗೂ ಸಂಗೀತ ಸೇವೆ ದೊರೆಯುವ ಅವಕಾಶ ಅನುಕೂಲಗಳಿವೆ. ಈ ಕಾಲವನ್ನು ಸಂಗೀತದ ಸಮೃದ್ಧಿ ಕಾಲವೆಂದೂ ಹೇಳಬಹುದು.

'ಸಂಗೀತ' ಒಂದು ವರದಾನ, ಪ್ರತಿಭೆಯ ಅನುಗ್ರಹ, ಸಾಧನೆಯಿಂದ ಸಿದ್ಧಿ ಎಂಬ ನಾನಾ ಮಜಲುಗಳೊಂದಿಗೆ ಜೋಡಿಸಿಕೊಂಡಿದೆ. ಸಂಗೀತ ಮನೋಲ್ಲಾಸ, ಮನರಂಜನೆ, ಸ್ಫೂರ್ತಿಯ ಸೆಲೆಯೆಂದು, ಆತ್ಮಾನುಭೂತಿಗೆ ಸಾಂಗತ್ಯವನ್ನು ಒದಗಿಸುವುದೆಂದು ಭಾವಿಸಲಾಗಿದೆ. ಭಾರತೀಯ ಪರಂಪರೆಯಲ್ಲಿ ಸಂಗೀತವು ಧಾರ್ಮಿಕ, ಸಾಂಸ್ಕೃತಿಕ ನೆಲೆಗಟ್ಟಿನೊಳಗೆ ಪ್ರಚಲಿತದಲ್ಲಿದೆ. ಸಂಗೀತವು ಆರಾಧನೆಯ ಮೂಲಕವೂ ಪ್ರಸಿದ್ಧಿ ಪಡೆದುಕೊಂಡಿದೆ.

ಸಂಗೀತ ಕಾಲಧರ್ಮವನ್ನು ಪ್ರತಿಬಿಂಬಿಸುತ್ತ ನಡೆದಿದೆ. ಅದು ಎಲ್ಲ ವ್ಯವಸ್ಥೆಗಳಂತೆ ಸ್ವಾಮಿ ನಿಷ್ಠೆಯನ್ನು , ಗುಲಾಮಗಿರಿಯನ್ನು ವಿಸ್ತರಿಸುವ ಜಾಡುಗಳಲ್ಲೊಂದಾಗಿದೆ. ಹಿಂದಿನ ಕಾಲದಲ್ಲಿ ರಾಜರ ಆಶ್ರಯದಲ್ಲಿಯೇ ಸಂಗೀತವು ಬೆಳೆಯಿತು. ಇಂದೂ ಆ ದಾರಿಯಲ್ಲಿಯೇ ಮೆರೆಯುತ್ತಿರುವುದು ವಾಸ್ತವವೇ ಆಗಿದೆ. ರಾಜ್ಯನಿಷ್ಠೆ, ಅಧಿಕಾರ ನಿಷ್ಠೆಯಲ್ಲಿ ಸಂಗೀತ ಸೇವೆ ನಿರತವಾಗಿರುವುದು ಸ್ಪಷ್ಟತೆಗೆ ಒಂದು ತಾಜಾ ಉದಾಹರಣೆ. ತುರ್ತು ಪರಿಸ್ಥಿತಿಯಲ್ಲಿ ಒಬ್ಬ ಗಾಯಕನ ಹಾಡುಗಳನ್ನು ಸಮೂಹ ಮಾಧ್ಯಮದಲ್ಲಿ ಪ್ರಸಾರಗೊಳಿಸಲು ನಿರ್ಬಂಧಿಸಿದ್ದರು. ಏಕೆಂದರೆ ಅಧಿಕಾರದಲ್ಲಿ ಇದ್ದವರ ಆಜ್ಞೆಯಂತೆ ಆತ ಹಾಡಲು ನಿರಾಕರಿಸಿದ್ದೆ ಕಾರಣ.

'ಸಂಗೀತ' ಅಳವಡಿಸಿಕೊಂಡ ಅನೇಕ ಹಾಡು ಕವನಗಳ ವಸ್ತು ವಿಷಯ ಹೆಣ್ಣು, ಪ್ರೀತಿ, ಪ್ರೇಮ, ವಿರಹ, ಕಾಮ ಮುಂತಾದವುಗಳೇ ಇರುತ್ತವೆ. ಸಿನಿಮಾದಲ್ಲಂತೂ ಅವುಗಳದೇ ಪ್ರಾಮುಖ್ಯತೆ ಇರುವಂತೆ ನೋಡಿಕೊಳ್ಳಲಾಗುತ್ತದೆ. ಇಂದಿನ ಹೊಲಸು ರಾಜಕೀಯವನ್ನು ಚಿತ್ರಿಸಲು ಹೊರಟ 'ಚಕ್ರವ್ಯೂಹ' ಚಿತ್ರದಲ್ಲಿ ವಿರಹ ಗೀತೆಯು ಕ್ರಾಂತಿಕಾರಕ ಮನೋಭಾವಕ್ಕಿಂತಲೂ ಹೆಚ್ಚು ಜನರಿಗೆ ವಿರಹದ ಅಭೂತಪೂರ್ವ ಅನುಭವವನ್ನು ನೀಡಿದ್ದು ಸತ್ಯವೇ ಆಗಿದೆ. 'ಚಳಿ ಚಳಿ ತಾಳೆನು ಈ ಚಳಿಯ' ಎನ್ನುವ ದೃಶ್ಯಾವಳಿಯನ್ನು ನೆನಪಿಸಿಕೊಂಡು ಮೈ ಮರೆಯುವುದೇ ಆಗಿದೆ.

ವೈಜ್ಞಾನಿಕ ಮೇರುಪರ್ವತದ ಸಾಧನೆಯನ್ನು ಸಾಧಿಸಿದವರೊಂದಿಗೆ ಸಿನಿಮಾದಲ್ಲಿ ಕಾರ್ಯಗೈದವರಿಗೂ ಗೌರವ ಡಾಕ್ಟರೇಟ್ ಕೊಡುವ ಕಾರ್ಯಕ್ರಮದಲ್ಲಿ 'ಎಮ್ಮೆ ನಿನಗೆ ಸಾಟಿ ಇಲ್ಲ' ಎಂಬ ಹಾಡೇ ಭಾರಿ ಬೇಡಿಕೆಯ ಸರಕಾಗಿದ್ದನ್ನು ನೆನೆದಾಗ ನಾವೆತ್ತ ಸಾಗುತ್ತಿದ್ದೇವೆಂಬುದು ಊಹೆಗೂ ನಿಲುಕದು.

ದೇವರನ್ನು ಆರಾಧಿಸುವ ಪ್ರಾರ್ಥನಾ ಗೀತೆಗಳು, ಜನಪದ ಗೀತೆಗಳು, ನಾಟಕಕ್ಕಾಗಿಯೇ ಬಳಸುವ ನಾಟಕ ಗೀತೆಗಳು, ಧರ್ಮ ಪ್ರಸಾರಕ್ಕಾಗಿಯೇ ರಚಿತಗೊಂಡ ಧಾರ್ಮಿಕ ಗೀತೆಗಳು, ಭಕ್ತಿ ಗೀತೆಗಳು, ರಾಷ್ಟ್ರ ಗೀತೆಗಳು, ಶೋಕ ಗೀತೆಗಳು, ಪ್ರೇಮ ಗೀತೆಗಳು, ವಿರಹ ಗೀತೆಗಳು, ಕ್ಯಾಸೆಟ್ ಎಂಬ ಬೃಹದಾಕಾರದ ವಾಣಿಜ್ಯಮಯದ ಶೀಲ-ಅಶ್ಲೀಲ ಗೀತೆಗಳು ಸಾಕಷ್ಟು ಸುದ್ದಿಯಲ್ಲಿವೆ; ಇರುವಂತೆ ಮಾಡಲಾಗಿದೆ. ಇವೆಲ್ಲ ಪ್ರಸಿದ್ಧಿ-ಸಿದ್ಧಿ-ಸುದ್ದಿ ಪಡೆದದ್ದು ಸಂಗೀತ ಸೇವೆಯಿಂದ ಎಂಬುದು ಮುಖ್ಯ.

ಸಂಗೀತ ಸೇವೆಯು ಇಂದು ನಾನಾ ರೂಪಗಳನ್ನು ಪಡೆದುಕೊಂಡಿದೆ. ಆದರೆ ಇದಕ್ಕೆಲ್ಲ ಮೂಲ ಶಾಸ್ತ್ರೀಯ ಸಂಗೀತ. ಕಾವ್ಯಕ್ಕೆ ಛಂದಸ್ಸು ಅಲಂಕಾರ ಮುಖ್ಯವೆಂಬ ಕಾಲವನ್ನು ಸರಿಸಿ ನಡೆದಂತೆ ಸಂಗೀತವೂ ಸಹ ಇಂದು ತಾಳ ಲಯವಿಲ್ಲದೆ ತೊಳಗಿ ಬೆಳಗುತ್ತಿದೆ; ಹಾಡಿದ್ದೇ ರಾಗ ನುಡಿದದ್ದೇ ಸಂಗೀತವೆನ್ನುವಂತಾಗಿದೆ. ಲಘು ಸಂಗೀತ, ಸುಗಮ ಸಂಗೀತ, ವಚನ ಸಂಗೀತ, ದಾಸರ ಪದಗಳ ಸಂಗೀತ, ಪಾಪ್ ಸಂಗೀತ, ಜನಪದ ಸಂಗೀತ, ಸಿನಿಮಾ ಸಂಗೀತ, ದೂರದರ್ಶನ ಸಂಗೀತ, ಕೆಲವರಂತೂ ತಾವು ಹಾಡಿಕೊಂಡಿದ್ದೇ ಸಂಗೀತವೆಂದು ಹೇಳುವ ಕಾಲಕ್ಕೂ ಮೀರಿ ಬೆಳೆಯುತ್ತಿದ್ದಾರೆ. ಸಂಗೀತದ ಗೀಳು ಇಲ್ಲದವರಿಲ್ಲವೆಂದೂ ಹೇಳಬಹುದು. ಜೀವನ ಸಂಗೀತಮಯ; ಜೀವನದೊಳಗೆ ಸಂಗೀತ ಹಾಸುಹೊಕ್ಕಾಗಿ ಹೋಗಿದೆ; ಜೋಗುಳದಿಂದ ಆರಂಭಗೊಂಡು ಶೋಕ ಗೀತೆ ನುಡಿಸುವವರೆಗೂ ಸಂಗೀತವು ಧ್ವನಿಗೂಡಿಸಿದೆ. ಸಂಗೀತ

ಸ್ವರಲೋಕದ ದ್ಯೋತಕವೂ ಆಗಿದೆ.

ಸಂಗೀತವು ರಾಗಗಳ ಆಲಾಪವಾಗಿರುವಂತೆ ಕಾವ್ಯದ ಗುಣಗಾನವೂ ಒಳಗೊಂಡಿದೆ. ವ್ಯಕ್ತಿಯ ನರನರಗಳಲ್ಲಿ ಇದ್ದದ್ದು ಧ್ವನಿ ಮೂಲಕ ಸ್ವಯಂ ಸ್ಫೂರ್ತಿಯಿಂದ ಹೊರ ಹೊಮ್ಮಿದ್ದೂ ಸಹ ಸಂಗೀತವನ್ನು ಸಾಂಕೇತಿಸುತ್ತದೆ. ಸಂಗೀತ, ಸಾಹಿತ್ಯಕ್ಕೆ ತಿರುಗಿ ನಿಂತವರು ಅರಸಿಕರು ಎಂದೆನಿಸಿಕೊಂಡಿದ್ದಾರೆ; ಹೃದಯ ಶೂನ್ಯರೆಂದೂ ಕರೆಯಿಸಿ ಕೊಂಡಿದ್ದಾರೆ. ಸಹೃದಯನಿಗೆ ಸಂಗೀತ, ಸಾಹಿತ್ಯ ಪಂಚಪ್ರಾಣ ಎಂಬ ಪ್ರತೀತಿಯೂ ಇದೆ. ಸಂಗೀತ, ಸಾಹಿತ್ಯದಿಂದಲೇ 'ಹೊಟ್ಟೆ' ತುಂಬಿಸಿಕೊಳ್ಳುವವರೂ ಇದ್ದಾರೆ. ಸಂಗೀತ ಸಾಹಿತ್ಯವಿದ್ದರೆ ನಿದ್ದೆ ನೀರಡಿಕೆಯು ಒಬ್ಬರಿಗೂ ಇರದೆಂದೂ ಹೇಳಲಾಗುತ್ತದೆ. ಸಂಗೀತಕ್ಕೆ ಇರುವ ಮಾಂತ್ರಿಕ ಶಕ್ತಿ ಮನುಷ್ಯನನ್ನು ತಲೆದೂಗಿಸುವಂತೆ ಮಾಡುತ್ತದೆ. ಸಂಗೀತ ಕುರೂಪಿಯನ್ನೇ ಸುಂದರ ಸುರಲೋಕಕ್ಕೂ ಒಯ್ಯುವ ಶಕ್ತಿ ಹೊಂದಿರುವುದು ಸ್ವಯಂವೇದ್ಯವೇ ಆಗಿದೆ.

ಸಂಗೀತ ತರ್ಕ ಮಾಡುವಂಥದಲ್ಲ; ತರ್ಕಕ್ಕೆ ನಿಲುಕದು; ಸಂಗೀತ ನಮ್ಮ ನಡುವೆ ದಿವ್ಯ ಮೌನವನ್ನು ಸೃಷ್ಟಿಸಬಲ್ಲದು ಎಂಬ ಅನೇಕ ಸೈದ್ಧಾಂತಿಕ ಮಾತುಗಳು ಕೇಳಿ ಬರುತ್ತವೆ. ಇದು ಮೌನದ ಕಾಲವಲ್ಲ, ಅಭಿವ್ಯಕ್ತಿಯ ಅಥವಾ ಮಾತಿನ ಕಾಲದೊಂದಿಗೆ ಪ್ರಯೋಗ ಪರೀಕ್ಷೆ-ನಿರೀಕ್ಷೆಯ ಕಾಲ. ಇಂಥ ಕಾಲದಲ್ಲಿ ಸಂಗೀತವು ಅನನ್ಯ ಸಂಭಾಷಣೆಗೆ, ಸಂವಾದಕ್ಕೆ ಪ್ರೇರಕ ಶಕ್ತಿಯಾಗುವಂತೆ ತನ್ನ ಪಾತ್ರವನ್ನು ಬಿಚ್ಚಿಕೊಳ್ಳಬೇಕಾಗಿದೆ. ಮನ ತೆರೆದು ತಾಳ ಬದ್ಧವಾಗಿ, ಲಯವಾಗಿ, ಮಧುರವಾದ ಮಾತುಗಳು ಮೂಡಿ ನಿಂತರೆ ಅದೇ ಸಂಗೀತ, ಅದೇ ದಿವ್ಯತೆ, ಮನುಕುಲದ ಶ್ರೇಯಸ್ಸು, ಕ್ರಾಂತಿಗೆ ಮೌನಕ್ಕಿಂತಲೂ ಮನ ತೆರೆದು ಮಾತಾಡಿ ಮುನ್ನುಗ್ಗಿ ನಿರಾತಂಕ, ನಿರ್ಭಯ, ಸುಗುಣ ಸಮಾಜವನ್ನು ನಿರ್ಮಿಸುವ ದಾರಿ ಬೇಕಾಗಿದೆ. ಮೌನ ಕ್ರಾಂತಿಯೊಂದಿಗೆ ಹೆಜ್ಜೆ ಹಾಕಲಾರದು. ಕ್ರಾಂತಿ ಯಾವಾಗಲೂ ಬಯಲು ಮಾಡುವ ಕ್ರಿಯೆ; ಅಚ್ಚ ಹೊಸತನದಿ ಇದ್ದ ಕೊಳೆಯನ್ನು ಕೊಚ್ಚಿ ಹಾಕುವ ಪೌರುಷದ ಸಂಕೇತ. ಇಂಥ ಅವಸ್ಥೆಯಲ್ಲಿ ಮೌನ ಮಾತಾಡಬೇಕಾಗುತ್ತದೆ; ಕಂಡದ್ದನ್ನು ನಿರೀಕ್ಷಿಸಿ, ಪರೀಕ್ಷಿಸಿ ಸ್ಪಷ್ಟತೆಯನ್ನು ನುಡಿದೇ ತೀರಬೇಕಾಗುತ್ತದೆ. ಮನ ಬಿಚ್ಚಿ ಮಾತಾಡಿದ್ದೆಲ್ಲವೂ ಕ್ರಾಂತಿಗೀತೆಯ ಸಮಾನ, ಕ್ರಾಂತಿಯ ಸೊಲ್ಲು ಸುಳ್ಳುಡಿ ಸಿಡಿಲ ನುಡಿಯಾಗುತ್ತದೆ. ಇಂಥ ಕ್ರಾಂತಿಗೀತೆಗಳು ನಾಡಿಗೆ ಬೇಕಾಗಿವೆ.

'ಕ್ರಾಂತಿಗೀತೆ'ಗಳು ಕೂಲಿಕಾರರ, ರೈತರ, ದುಡಿಮೆಗಾರರ ಒಡಲಾಳದೊಳಗೆ ಯಾವತ್ತೂ ಜೀವಂತವಾಗಿವೆ. ಅವರು ತಮ್ಮ ತಮ್ಮ ವಲಯಗಳಲ್ಲಿ ವ್ಯಕ್ತಗೊಳಿಸಿದ್ದರೂ ಅದು ಸಂಗೀತ ಕ್ಷೇತ್ರದೊಳಗೆ ಪರಿಚಿತವಾಗುವುದಿಲ್ಲ. ಜನಪದ, ಕ್ರಾಂತಿಯ ಧಾಟಿಗಳನ್ನು ಆಧುನಿಕರು ತಪ್ಪಾಗಿ ಪ್ರಯೋಗಿಸಿ ಕ್ರಾಂತಿಕಳೆಯನ್ನು ಇನ್ನೊಂದಕ್ಕೆ ಕಟ್ಟುತ್ತಿರುತ್ತಾರೆ. ಒಬ್ಬ ಸಂಗೀತಗಾರನು ಸಾಕ್ಷರತಾ ಆಂದೋಲನ ಗೀತೆಗಳನ್ನು ಅತೀ ಸಪ್ಪೆಯಾದ ನೀರಸ ಧಾಟಿಯಲ್ಲಿ ಹಾಡಿದಾಗ ನಡುವೆ ಬಾಯಿ ಹಾಕಿದ ಪ್ರಾಜ್ಞ ಹೇಳಿದ್ದು ಕ್ರಾಂತಿಗೀತೆಗಳನ್ನು ಹಾಡುವುದು ಈ ಪರಿಯಲ್ಲವೆಂದಾಗ ಸಂಗೀತಗಾರನಿಗೆ ಇರುಸುಮುರುಸಾಗಿದ್ದು ಸಹಜವೇ. ಕ್ರಾಂತಿಗೀತೆಗಳನ್ನು ಹಾಡಿದಾಗ ರೋಮಾಂಚನವಾಗುತ್ತದೆ; ರಮ್ಯತೆಯು ಹೊರಹೊಮ್ಮಿ ಅವ್ಯವಸ್ಥೆಗೆ ಸವಾಲು ಎದ್ದು ನಿಲ್ಲುತ್ತದೆ.

ಹೆಣ್ಣಿನ, ಸೃಷ್ಟಿಯ ವಿವಿಧ ಭಂಗಿ-ಭಾವನೆಗಳನ್ನು ವಿಸ್ತರಿಸಿದ ಕಾವ್ಯದ ಕಾರ್ಯವನ್ನು ಸಂಗೀತ ಪೂರ್ತಿಗೊಳಿಸುತ್ತದಲ್ಲದೆ ಇಂದಿಗೂ ಆ ಆಕರ್ಷಣೆಗೆ ಒಳಗಾಗದೇ ಬದುಕದಂತಿರಿಸಿದೆ. ಕನ್ನಡ ಕಾವ್ಯ ಈಗ ಮೂರು ಕವಲು ಸೇರುವ ಒಂದು ಅಪೂರ್ವ ನೆಲೆಯಲ್ಲಿ ನಿಂತಿದೆ ಎಂದು ವ್ಯಾಖ್ಯಾನಿಸಲಾಗಿದೆ. (೧) ಪದ್ಯ ಗಂಭೀರ ಸಂವೇದನೆಗಳನ್ನು ಮಾತಿಗೆ ಹತ್ತಿರವಾದ ಲಯದಲ್ಲಿ ಪ್ರೌಢವೂ ಬಿಗಿಯೂ ಆದ ಶೈಲಿಯಲ್ಲಿ ಹೇಳುವುದು. ಇದು ನವ್ಯ ಕಾವ್ಯ ರೂಢಿಸಿಕೊಟ್ಟ ರೂಪ. (೨) ಬಲು ಹಗುರವಾದ್ದು ಇದು ಕವಿತೆಯೇ ಎಂಬ ಜನಶಂಕೆಯ ಗಡಿಯಲ್ಲಿ ನಿಂತಿರುವಂಥಹದು; ಹನಿಗವನ, ಚುಟುಕು. (೩) ಸರಳವೂ ಲಲಿತವೂ ಕಾವ್ಯಾತ್ಮಕವೂ ಆದ ಭಾಷೆಯಲ್ಲಿ ನಿಯತ ಲಯದಲ್ಲಿ ಹಿಡಿದುಕೊಡಬಲ್ಲ ಕಾವ್ಯ. ನಿಯತ ಲಯ ಮತ್ತು ಸರಳ ಲಲಿತ ಶೈಲಿಗಳಲ್ಲಿರುವುದರಿಂದ ಈ ಕವಿತೆಗಳು ಸಂಗೀತದ ಜೊತೆಗೆ ಬೆರೆತು ಭಾವಗೀತೆ ಎಂದೇ ಕರೆಸಿಕೊಳ್ಳುತ್ತವೆ. ಇವು ರಾಗದ ಬೆನ್ನೇರಿ ಸುಗಮ ಗಾಯಕರ ಮೂಲಕ ನಾಡಿನ ಎಲ್ಲ ಭಾಗಕ್ಕೂ ಹರಡಿವೆ; ಜನಸಮುದಾಯದಿಂದ ಸ್ವೀಕೃತ ವಾಗಿವೆ. ರಾಯರು ಬಂದರು, ಎದೆ ತುಂಬಿ ಹಾಡಿದೆನು, ಎಲ್ಲಿ ಜಾರಿತೋ ಮನವು, ಲೋಕದ ಕಣ್ಣಾಗೆ, ಅಮ್ಮ ನಿನ್ನ ಎದೆಯಾಳದಲ್ಲಿ, ಬಾಗಿಲನು ತೆರೆದು ಒಳಗೆ ಬಾ ಯಾತ್ರಿಕನೇ.... ಮುಂತಾದ ಹಾಡುಗಳಲ್ಲಿಯೇ ಸಂಗೀತ ತನ್ನ ಸಾರ್ಥಕ್ಯವನ್ನು ಪಡೆದು ಕೊಂಡಿದೆ. ಸುಗಮ ಸಂಗೀತವು ಇಲ್ಲಿಯವರೆಗೆ ಬಳಸಿಕೊಂಡಿದ್ದು ಕವಿಗಳ ಭಾವ ಪರವಶ ಮತ್ತು ಹೃದಯದಲಿ ಸೌಂದರ್ಯ, ಅನುಕಂಪ, ಕರುಣ ರಸಗಳನ್ನು ಹುಟ್ಟಿಸುವ ಕವಿತೆಗಳೆನ್ನಬಹುದು. ಸುಗಮ ಸಂಗೀತವು ಎಲ್ಲ ಸಂಗೀತ ಪ್ರಕಾರಗಳಲ್ಲಿಯೇ ಹೆಚ್ಚು ಜನಪ್ರಿಯವಾಗಿದ್ದು ಏಕೆಂದರೆ ಅದು ಜನರಿಗೆ ಹಗುರವಾದ ಮತ್ತು ಸಂಬಂಧಗಳ ಸೃಷ್ಟಿಯ ವಸ್ತು-ವಿಷಯಗಳನ್ನು ಹೊಂದಿರುವುದರಿಂದಲೇ ಅಲ್ಲವೇ ? ಇಂಥ ಕವಿತೆಗಳಲ್ಲಿ ಪ್ರೀತಿಯ ನೆವವಿರುತ್ತದೆ, ಧ್ವನಿ ಕಲ್ಪನೆಯೊಂದಿಗೆ ಜೀವನವನ್ನು ಯಥಾಸ್ಥಿತಿಗೆ ಪಳಗಿಸುವ ವಾತಾವರಣದ ಗುಂಗಿರುತ್ತದೆ. ಕುವೆಂಪು ರಾಷ್ಟ್ರಕವಿಯಾಗಿ ಅನೇಕ ಕವನಗಳನ್ನು ಬರೆದಿದ್ದಾರೆ. ಅವರು ಬರೆದಿರುವ ಕ್ರಾಂತಿಗೀತೆಗಳನ್ನು ಇತರ ಗೀತೆಗಳಂತೆ ಯಾವ ಸಂಗೀತ ಕಲಾವಿದನೂ ಬಳಸಿಕೊಂಡಿಲ್ಲ.

ಕುವೆಂಪು ತಲೆಮಾರಿನಾಚೆಯ ಕನ್ನಡ ಸಾಹಿತ್ಯದ ಕಾವ್ಯ ಪ್ರಪಂಚದಲ್ಲಿಯೇ ವಚನ ಸಾಹಿತ್ಯವು ಅತ್ಯಂತ ಜನಪರವಾದದ್ದು ಮತ್ತು ಜೀವಿಗೆ ಬದುಕಲು ಬೆಳೆಯಲು ಸಾಮಾನ್ಯ ಅವಕಾಶಗಳನ್ನು ಬಿಂಬಿಸಿ ಎಚ್ಚರಿಸಿದ್ದಾಗಿದ್ದರೂ ಜನರಲ್ಲಿ ಕ್ರಾಂತಿಕಾರಕ ಬದಲಾವಣೆ ತರುವ ವಚನಗಳನ್ನು ಸಂಗೀತಕ್ಕೆ ಅಳವಡಿಸಿದ್ದು ಕ್ವಚಿತವೆಂದೇ ಹೇಳಬಹುದಾಗಿದೆ. ಸಮೂಹ ಮಾಧ್ಯಮದಲ್ಲಿ ಬಿತ್ತರಿಸುವ ಎಲ್ಲ ಸ್ತರದ ಹಾಡುಗಾರಿಕೆ ಜೀವವನ್ನು ಕ್ರಾಂತಿಕಾರಿ ಯನ್ನಾಗಿಸುವ ಬದಲು ರಾಜ ಸೂತ್ರಕ್ಕೆ ಬಗ್ಗಿಸುವ, ಗುಲಾಮಗಿರಿಯ ಆಶ್ರಯ ಪಡೆಯಲು ಹಾತೊರೆಯುವ ಇಲ್ಲ ಸಂಸಾರದ ಸೊಬಗಿನಲ್ಲಿಯೇ ನೇತಾಡುವ ಕಾವ್ಯ, ಕವನ, ಹಾಡು ಇರುತ್ತವೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಇನ್ನು ಕ್ರಾಂತಿದಾಯಕ ಒಂದಿಷ್ಟು ಭಿನ್ನವಾದ ಕವಿತೆಯನ್ನು ರಚಿಸಿದವರನ್ನು ನಾವೆಂದೂ ಸಹಿಸೆವು. ಇದು ಕವಿತೆಯೇ ಅಲ್ಲೆಂಬ ಭಾವನೆ ಬರುವಷ್ಟು ವಿಮರ್ಶೆ ಕಠೋರವಾಗಿರುತ್ತದೆ. ಕ್ರಾಂತಿ ಗೀತೆಗಳು ಸಾಕಷ್ಟಿದ್ದರೂ ಅವುಗಳಿಗೆ ಅಸಡ್ಡೆ ತೋರಿ ಮರೆಮಾಡಲು ಯತ್ನಿಸಲಾಗುತ್ತಿದೆ.

ಯಥಾಸ್ಥಿತಿಯನ್ನು ಕಾಪಾಡುವ, ಸ್ವಾಮಿನಿಷ್ಠೆಯನ್ನು ಹೆಚ್ಚಿಸುವ, ಸಂಸಾರದ ಸೌಖ್ಯವನ್ನು ಬಣ್ಣಿಸುವ, ಸುಂದರ ಕಲ್ಪನೆಯನ್ನು ಮಾತ್ರ ಊಹಿಸಿಕೊಳ್ಳುವ, ಪ್ರೇಮದ ಗುಂಗು ಹಿಡಿಯುವ... ಅನೇಕ ಗೀತೆಗಳನ್ನು ಸಂಗೀತ ದುಡಿಸಿಕೊಂಡು ಬೆಳೆಯ ಹೊರಟಿದೆ. ಅಶ್ಲೀಲತೆಯನ್ನು ಸಾಕಷ್ಟು ವಿಸ್ತರಿಸಲು ಹೊರಟಿರುವ ಕ್ಯಾಸೆಟ್ ಸಂಸ್ಕೃತಿ ಕಾವ್ಯವನ್ನು ಸಂಗೀತವನ್ನು ಕುಲಗೆಡಿಸಿದ್ದು ಗೊತ್ತಿಲ್ಲದಂತೆ ಸಾರಸ್ವತ ಲೋಕ ವರ್ತಿಸುತ್ತಿದೆ.

ಹೊಟ್ಟೆಪಾಡಿಗಾಗಿ ಹೊಗಳುವ, ಬಣ್ಣಿಸುವ, ತನ್ಮಯ ಆಧ್ಯಾತ್ಮ ಕಲೆಯನ್ನು ಬಿಂಬಿಸುವ ಹಾಡುಗಾರಿಕೆಗೆ ಸನ್ಮಾನ ಮಾನಪತ್ರ ಸಿಗುತ್ತಿವೆ. ಕ್ರಾಂತಿಗೀತೆಗಳ ಹಾಡುವಿಕೆಯನ್ನು ಪ್ರತಿಬಂಧಿಸುವ ಪೂರ್ವದಲ್ಲಿಯೇ ಸಂಗೀತಗಾರರು ಅವುಗಳಿಂದ ಅದೆಷ್ಟು ದೂರವಿರಲು ಸಾಧ್ಯ ಅಷ್ಟು ದೂರವಿರುವುದಕ್ಕೆ ಜಾಗರೂಕರಾಗಿರುತ್ತಾರೆ. ನಾಡಿನಲ್ಲಿ ಅನೇಕ ಸಂಗೀತ ಶಾಲೆಗಳು, ಸಂಘ-ಸಂಸ್ಥೆಗಳು ಇದ್ದರೂ ಕ್ರಾಂತಿಗೀತೆಗಳನ್ನು ಹಾಡುವುದನ್ನು ಅವರೆಂದೂ ತಪ್ಪಿಯೂ ಆಲೋಚಿಸರು. ಕನ್ನಡ ಸಾಹಿತ್ಯದಲ್ಲಿ ಇಂದು ಹೊಸದೊಂದು ಸಾಹಿತ್ಯ ಪೀಳಿಗೆ ಕಾಣಿಸಿಕೊಂಡಿದೆ. ಅದು ಪ್ರಶಸ್ತಿ ಮತ್ತು ಸರಕಾರದ ಅಕಾಡೆಮಿಗಳಿಗೆ ಅಥವಾ ಸಮಿತಿ, ಪ್ರಾಧಿಕಾರಗಳಿಗೆ ಸದಸ್ಯರಾಗುವುದು. ಪ್ರಶಸ್ತಿ ಪಡೆದುಕೊಳ್ಳುವ ಗೀಳು ಹಚ್ಚಿಕೊಂಡಿರುವ ಸಾಹಿತಿ ಪರಿಸ್ಥಿತಿಯ ಯಥಾಸ್ಥಿತಿ ಕಾಪಾಡುವ ಇಲ್ಲ ಅದನ್ನು ಇನ್ನಷ್ಟು ಸ್ಥಿರಗೊಳಿಸುವ ಕಾಯಕ ದಲ್ಲಿಯೇ ತನ್ನ ಪ್ರತಿಭೆಯನ್ನು ಕಣಕ್ಕೆ ಹಚ್ಚುತ್ತಾನೆ. ಇಂಥ ಸ್ಥಿತಿಯಲ್ಲೂ ಕೆಲ ಸಾಹಿತಿಗಳಲ್ಲಿ ಕ್ರಾಂತಿಕಾರಕ ಮನೋಧರ್ಮವು ಸಜೀವವಾಗಿದೆ; ಸತ್ವಯುತವಾಗಿದೆ. ಆದರೆ ಸಂಗೀತ ಕ್ಷೇತ್ರದಲ್ಲಿ ಯಾವ ಪ್ರಗತಿ ಬದಲಾವಣೆಯ ಸಂಕ್ರಮಣ ಬಂದದ್ದು ಕಾಣದಷ್ಟು ವಿರಳ ವಾಗಿದೆ. ಭಕ್ತಿ ಸಂಗೀತ, ಭಾವಗೀತೆಗಳ ಸಂಗೀತ, ಶಾಸ್ತ್ರೀಯ ಸಂಗೀತ ಬಿಟ್ಟು ಇನ್ನುಳಿದ ಕಾವ್ಯ ಮಗ್ಗಲುಗಳನ್ನು ಸಂಗೀತ ಕ್ಷೇತ್ರ ಬಳಸಿಕೊಂಡಿಲ್ಲ. ಮಾನವನ ಬದುಕಿಗೆ ಸಂಗೀತ ಅಮೂಲ್ಯವಾದ ಕೊಡುಗೆ ನೀಡುವ ಅವಶ್ಯಕತೆ ಇದೆ. ಇದು ಮಾನವನಲ್ಲಿ ಹುದುಗಿರುವ ಕ್ರಿಯಾಶೀಲ ಮತ್ತು ಲವಲವಿಕೆಯ ಗುಣಗಳನ್ನು ಎತ್ತರಿಸುವ ಅನಂತ ಶಕ್ತಿಯನ್ನು ಹೊಂದಿದೆ. ಸಂಗೀತ, ಕ್ರಾಂತಿಗೀತೆಗಳನ್ನು ಬಳಸಿಕೊಂಡು ತನ್ನ ಪಾಲಿನ ಕರ್ತವ್ಯವನ್ನೇ ನಿಭಾಯಿಸುವ ವ್ಯವಧಾನ ಮಾಡಬೇಕಿದೆ; ಇದಲ್ಲದೆ ಅಂಥ ವ್ಯವಸ್ಥೆ ರೂಪುಗೊಳ್ಳುವ ಅಗತ್ಯವಿದೆ.

ಸಂಗೀತ ನವರಸಗಳನ್ನು ಬಳಸಿಕೊಳ್ಳಲು ಮುಂದೆ ಬಂದಾಗ ವೀರ ರಸ ಅಥವಾ ಕ್ರಾಂತಿ ಕಾರಕ ಮನೋಗತದ ಹಾಡುಗಳನ್ನು ಬಳಸಿಕೊಂಡು ಜನರಲ್ಲಿ ನವಚೇತನ ಹೋರಾಟದ ಪ್ರತಿಭಟನೆಯ ಸೊಬಗನ್ನು ಹೆಚ್ಚಿಸುವಂತೆ ಮಾಡಬೇಕಿದೆ. ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಕ್ಷೇತ್ರದ ಹೊಲಸುಗಳನ್ನು ಹೊಡೆದೋಡಿಸುವ ಅಗತ್ಯ ಇಂದಿನದಾಗಿದೆ. ಭ್ರಷ್ಟತೆಯ ಅಗಾಧ ಕೂಪದಲ್ಲಿ ಬಿದ್ದು ನಾನಾ ಯಾತನೆಗಳನ್ನು ಪಡುತ್ತಿರುವವರಲ್ಲಿ ವೀರಾವೇಶ ಹೋರಾಟದ ಕಿಚ್ಚು ಹಚ್ಚಿಸುವ ಹಾಡುಗಾರಿಕೆ ಬೆಳೆದುಬರಬೇಕಾಗಿದೆ.

**ಸ. ರಾ. ಸುಳಕೂಡೆ**

೧೩೭೯, ರಾಮತೀರ್ಥನಗರ, ಬೆಳಗಾವಿ - ೫೯೦ ೦೧೬

# ಇತಿಹಾಸದಲ್ಲಿ ಸ್ತ್ರೀಯ ಸ್ಥಾನಮಾನಗಳು

ಜಿ. ಎಂ. ವಿಜಯಲಕ್ಷ್ಮೀ



**ತೆಂ**ಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧು ಮಹೋತ್ಸವಮಾದೊಡವೇನೆಂಬೆನಾ
ರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ

ಎಂದು ಮಹಾಕವಿ ಪಂಪ ಹೇಳಿದ.

'ಬನವಾಸಿ' ಎಂಬ ಶಬ್ದ ಕಿವಿಗೆ ಬಿದ್ದರೆ ಸಾಕು, ಪಂಪನ ಮಾತು ನೆನಪಾಗುತ್ತದೆ. ವರದಾ ನದಿಯ ದಂಡೆಯ ಮೇಲೆ ನೆಲೆಗೊಂಡಿರುವ ಶಿರಸಿ ತಾಲ್ಲೂಕಿನ ಒಂದು ಇತಿಹಾಸ ಪ್ರಸಿದ್ಧ ಗ್ರಾಮವೇ 'ಬನವಾಸಿ'. ಇತಿಹಾಸ ಪ್ರಸಿದ್ಧ ಸ್ಥಳ ಆಗಿದ್ದ ಈ ಬನವಾಸಿಯಲ್ಲಿ ಸ್ತ್ರೀಯರ ಸ್ಥಾನ-ಮಾನ ಏನಿತ್ತು ಎಂಬುದರ ಬಗ್ಗೆ ಒಂದು ಕುತೂಹಲದ ಇಣುಕು ನೋಟ ಇಲ್ಲಿದೆ.

ಕುಂತಳ ದೇಶ (ಕರ್ನಾಟಕ)ವನ್ನು ಆಳಿದ ಶಾತವಾಹನರ ರಾಜ್ಯದಲ್ಲಿ ಬನವಾಸಿಯು ದಕ್ಷಿಣ ಮೇರೆಯಲ್ಲಿದ್ದ ಒಂದು ಭಾಗವಾಗಿತ್ತು. ಶಾತವಾಹನರ ನಂತರ ರಾಜ್ಯಭಾರ ಮಾಡಿದ ಬನವಾಸಿಯ ಕದಂಬರು, ಬನವಾಸಿಯನ್ನೇ ರಾಜಧಾನಿಯಾಗಿ ಮಾಡಿಕೊಂಡು ಅತ್ಯುತ್ತಮವಾಗಿ ಆಡಳಿತವನ್ನು ನಿರ್ವಹಿಸಿದರು. ಬಾದಾಮಿಯ ಚಾಲುಕ್ಯರು ವಾತಾಪಿಯನ್ನೂ, ಆ ನಂತರ ಕಲ್ಯಾಣದ ಚಾಲುಕ್ಯರು ಕಲ್ಯಾಣವನ್ನೂ ರಾಜಧಾನಿಯಾಗಿ ಇಟ್ಟುಕೊಂಡು ಬನವಾಸಿಯನ್ನು ತಮ್ಮ ಆಧಿಪತ್ಯಕ್ಕೆ ಒಳಪಡಿಸಿಕೊಂಡರು. ಕರ್ನಾಟಕವಾದ ಕುಂತಳದಲ್ಲಿ ಕ್ರಮೇಣ ಬನವಾಸಿ ಒಂದಾಗಿಹೋಯಿತು. ಕರ್ನಾಟಕದ ಚಕ್ರವರ್ತಿ-ಸಾರ್ವಭೌಮರಾದವರು, ತಮ್ಮ ಮಹಾಮಂಡಲೇಶ್ವರರಿಗೆ ನೆರವು ನೀಡಲೆಂದು ಅಲ್ಲಲ್ಲಿ ರಾಜ್ಯಪಾಲರನ್ನು ನೇಮಿಸಿದರು. ಬನವಾಸಿ ತನ್ನ ಹಿಂದಿನ ವೈಭವವನ್ನು ಕಳೆದುಕೊಂಡು ಒಂದು ಜಿಲ್ಲೆ ಅಥವಾ ವಿಭಾಗ ಮಾತ್ರವಾಗಿ, ಚಾಲುಕ್ಯರು, ರಾಷ್ಟ್ರಕೂಟರು, ಕಲಚುರ್ಯರು, ಯಾದವರು ಮುಂತಾದ ವಿವಿಧ ಮನೆತನದ ಚಕ್ರವರ್ತಿಗಳು ಮತ್ತು ಮಹಾಮಂಡಲೇಶ್ವರರ ಆಳ್ವಿಕೆಗೆ ಒಳಪಟ್ಟಿತು. ಶಾತವಾಹನರ ಕಾಲದಿಂದ ಯಾದವರ ಕಾಲದ (೧೨೫೪)ವರೆಗಿನ ಅವಧಿಯಲ್ಲಿ ಬನವಾಸಿಯ ಸ್ತ್ರೀಯರ ಸ್ಥಿತಿ-ಗತಿ ಮತ್ತು ಸ್ಥಾನ-ಮಾನಗಳ ಬಗ್ಗೆ ಇಲ್ಲಿ ಉಲ್ಲೇಖಿಸಲಾಗಿದೆ. ದೇಶದ ಎಲ್ಲ ಭಾಗದ ಸಮಾಜಗಳೂ ಒಂದಕ್ಕೊಂದು ಪೂರಕವಾಗಿಯೂ, ಒಂದರಿಂದ ಇನ್ನೊಂದು ಪ್ರಭಾವಿತವಾಗಿಯೂ ಇರುತ್ತವಾದ್ದರಿಂದ ಯಾವುದೇ ಒಂದು ಅವಧಿಯನ್ನು ಪರಿಗಣನೆಗೆ ತೆಗೆದುಕೊಂಡರೆ, ಆ ಕಾಲದ, ಆ ದೇಶದ ಎಲ್ಲ ಸಮಾಜಗಳೂ ಎಲ್ಲ ಜನರೂ ಸ್ವಲ್ಪ ಹೆಚ್ಚು-ಕಡಿಮೆ ಒಂದೇ ರೀತಿಯ ನೀತಿ-ನಿಯಮಗಳನ್ನೂ, ಜೀವನ ಮೌಲ್ಯಗಳನ್ನೂ ಒಂದೇ ತೆರನ ಸ್ಥಾನ-ಮಾನಗಳನ್ನೂ ಹೊಂದಿರುತ್ತಾರೆ. ಈ ಆಧಾರದಿಂದ ಕರ್ನಾಟಕದ ಇತರೆ ಭಾಗಗಳಲ್ಲಿ ಆ ಕಾಲದಲ್ಲಿ ಜನ-ಜೀವನ ಹೇಗಿತ್ತೋ ಹಾಗೆಯೇ ಬನವಾಸಿಯಲ್ಲಿಯೂ ಇತ್ತೆಂದು ಪರಿಭಾವಿಸಬಾರದು. ಚರಿತ್ರೆಯ ಪುಟಗಳಲ್ಲಿ ಸಾಮಾನ್ಯ ವರ್ಗದ ಸ್ತ್ರೀಯರಿಗಿಂತ ಉನ್ನತ ವರ್ಗದ ಸ್ತ್ರೀಯರ ಸ್ಥಾನ-ಮಾನಗಳ ಬಗ್ಗೆ ಹೆಚ್ಚಿನ ಅಂಶಗಳು ಸಿಗುತ್ತವೆ. ದಾನ, ಧರ್ಮ, ಕಲೆ, ಆಡಳಿತ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಸ್ತ್ರೀಯರು ನಿರ್ವಹಿಸಿರುವ ಕೆಲಸಗಳ ಆಧಾರದ ಮೇಲೆ ಅವರ ಸ್ಥಾನ-ಮಾನಗಳನ್ನು ನಾವು ತಿಳಿದುಕೊಳ್ಳಬಹುದಾಗಿದೆ. ರಾಜ-ರಾಣಿಯರ ಹಾಗೂ ಉನ್ನತ ವರ್ಗದವರ ಪ್ರಭಾವ-ಪರಿಣಾಮಗಳು ಸಹಜವಾಗಿಯೇ ಸಾಮಾನ್ಯ ವರ್ಗದವರ ಮೇಲೆ ಸ್ವಲ್ಪವಾದರೂ ಬೀಳುತ್ತದೆಂಬುದನ್ನು ಗಮನಕ್ಕೆ ತೆಗೆದುಕೊಂಡರೆ ಆಯಾ ಕಾಲದಲ್ಲಿ ಬನವಾಸಿಯ ಸಾಮಾನ್ಯ ವರ್ಗದ ಸ್ತ್ರೀಯರಿಗೂ ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಅದೇ ಸ್ಥಾನಮಾನಗಳಿದ್ದವೆಂದು ತಿಳಿಯಬಹುದಾಗಿದೆ.

ಶಾತವಾಹನರ ಕಾಲದಿಂದಲೂ ಆಡಳಿತ, ರಾಜ್ಯಭಾರ ಇತ್ಯಾದಿ ಕ್ಷೇತ್ರಗಳಲ್ಲಿ ಉತ್ತಮವಾಗಿ ಕಾರ್ಯ ನಿರ್ವಹಿಸುವ ಶಕ್ತಿ-ಸಾಮರ್ಥ್ಯಗಳನ್ನು ಪ್ರದರ್ಶಿಸಿದ ಕೆಲ ಮಹಿಳೆಯರು ಪ್ರತಿಭೆಗೆ ನಿದರ್ಶನವಾಗಿ ನಮಗೆ ಕಾಣಸಿಗುತ್ತಾರಾದರೂ, ಇವರಂತೆಯೇ ಎಲ್ಲ ಪ್ರತಿಭಾವಂತ ಮಹಿಳೆಯರೂ ಉನ್ನತ ಸ್ಥಾನಗಳಲ್ಲಿ ಇದ್ದರು ಎಂದಾಗಲಿ, ಎಲ್ಲರಿಗೂ ಇದೇ ರೀತಿಯ ಅವಕಾಶಗಳು ಖಂಡಿತವಾಗಿ ಇದ್ದವು ಎಂದಾಗಲೀ ಹೇಳಲಾಗುವುದಿಲ್ಲ. ಎರಡನೇ ಶತಮಾನದಿಂದ ಹನ್ನೆರಡನೇ ಶತಮಾನದವರೆಗೆ ಕೆಲವೇ ಕೆಲವು ಮಹಿಳೆಯರು ರಾಜಕೀಯ, ಶಿಕ್ಷಣ, ಸಾಹಿತ್ಯಗಳ ಕ್ಷೇತ್ರದಲ್ಲಿ ಬೆಳಕಿಗೆ ಬಂದಿರುವುದನ್ನು ನೋಡಿದರೆ ಹಾಗೂ ಕಲೆ, ದಾನ-ಧರ್ಮ-ದತ್ತಿಗಳ ಬಗ್ಗೆ ಕಾಣಬರುವ ಹಲವರ ಉದಾಹರಣೆಗಳನ್ನು ಗಮನಿಸಿದರೆ, ಸಾಮಾನ್ಯವಾಗಿ ಹೆಣ್ಣು ಮಕ್ಕಳ ವಿಚಾರಗಳನ್ನು ಪ್ರಮುಖವಾಗಿ ಕುಟುಂಬ, ಹೊಂದಾಣಿಕೆಯ ಗುಣ, ಶೀಲ, ಧರ್ಮ ಮತ್ತು ಸೌಂದರ್ಯದ ಕ್ಷೇತ್ರದಲ್ಲಿಯೇ ಹೆಚ್ಚು ಪರಿಗಣಿಸಲಾಗುತ್ತಿತ್ತು ಎಂಬ ಅಂಶವೇ ಪ್ರಧಾನವಾಗಿ ಕಾಣುತ್ತದೆ.

**ಆಡಳಿತ**

ಯಾವುದೇ ಮಹಾರಾಜನ ಪಟ್ಟದರಸಿಯ ಹಿರಿಯ ಮಗನನ್ನು ಆ ರಾಜ್ಯದ ವಾರಸುದಾರನಾಗಿ ಪರಿಗಣಿಸಿ 'ಯುವರಾಜ' ಪಟ್ಟವನ್ನು ಕಟ್ಟಲಾಗುತ್ತಿತ್ತು. ಆ ಯುವರಾಜನೇ ಮುಂದಿನ ಮಹಾರಾಜನಾಗಿ ಪಟ್ಟಾಭಿಷಿಕ್ತನಾಗುತ್ತಿದ್ದ. ರಾಜನಿಗೆ ಗಂಡು ಮಕ್ಕಳಿಲ್ಲದಿದ್ದರೆ ದತ್ತು ತೆಗೆದುಕೊಳ್ಳಲಾಗುತ್ತಿತ್ತು ಅಥವಾ ಸೋದರರ ಗಂಡು ಮಕ್ಕಳಿಗೆ ಪಟ್ಟಾಭಿಷೇಕ ಮಾಡಲಾಗುತ್ತಿತ್ತು. ಇಲ್ಲವೇ ಆ ರಾಜನಿಗೆ ಇನ್ನೊಂದು ಮದುವೆ ಮಾಡಲಾಗುತ್ತಿತ್ತು. ಕದಂಬರ ಕಾಲದಲ್ಲಿ ಅನೇಕ ಮಹಿಳೆಯರು ಆಡಳಿತ ನಡೆಸಿರುವುದು ಕಂಡುಬರುತ್ತದೆಯಾದರೂ ಚಕ್ರಾಧಿಪನ ಅಧೀನಳಾಗಿ, ಇಲ್ಲವೇ ಅಂಗಭೋಗಕ್ಕೆಂದು ಅಧಿಕಾರ ಪಡೆದೋ ಗಂಡನ ಮರಣಾನಂತರ ಮಗನು ಪ್ರಾಪ್ತ ವಯಸ್ಸಿಗೆ ಬರುವವರೆಗೋ, ರಾಜನ ಅಥವಾ ಚಕ್ರಾಧಿಪತಿಯ ಕೃಪೆಗೆ ಪಾತ್ರರಾಗಿಯೋ ರಾಜ್ಯದ ಕೆಲವು ಭಾಗಗಳ ಆಡಳಿತ ನಡೆಸಿರುವುದು ಕಂಡುಬರುತ್ತದೆಯೇ ವಿನಃ, ಸ್ವತಂತ್ರರಾಗಿ ರಾಜ್ಯಭಾರ ಮಾಡಿದಂತಿಲ್ಲ. ಕದಂಬರು ಮತ್ತು ಚಾಲುಕ್ಯರ ಕಾಲದಲ್ಲಿ ಹಲವಾರು ಉನ್ನತ ವರ್ಗದ ಸ್ತ್ರೀಯರು ಉತ್ತಮ ಸ್ಥಾನ-ಮಾನಗಳನ್ನು ಪಡೆದಿದ್ದರೆಂದು ಕಂಡುಬರುತ್ತದೆ. ರಾಣಿಯರು ಸಾರ್ವಜನಿಕ ಕಾರ್ಯ ಕಲಾಪಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು.

'ಬನವಾಸಿ' ಎಂಬ ಶಬ್ದ ಕಿವಿಗೆ ಬಿದ್ದರೆ ಸಾಕು, ಪಂಪನ ಮಾತು ನೆನಪಾಗುತ್ತದೆ. ವರದಾ ನದಿಯ ದಂಡೆಯ ಮೇಲೆ ನೆಲೆಗೊಂಡಿರುವ ಶಿರಸಿ ತಾಲ್ಲೂಕಿನ ಒಂದು ಇತಿಹಾಸ ಪ್ರಸಿದ್ಧ ಗ್ರಾಮವೇ 'ಬನವಾಸಿ'. ಇತಿಹಾಸ ಪ್ರಸಿದ್ಧ ಸ್ಥಳ ಆಗಿದ್ದ ಈ ಬನವಾಸಿಯಲ್ಲಿ ಸ್ತ್ರೀಯರ ಸ್ಥಾನ-ಮಾನ ಏನಿತ್ತು ಎಂಬುದರ ಬಗ್ಗೆ ಒಂದು ಕುತೂಹಲದ ಇಣುಕು ನೋಟ.

ಏಳನೆಯ ಶತಮಾನದಲ್ಲಿ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಪುಲಕೇಶಿ (೬೦೮-೬೪೨) ಎರಡನೇ ಮಗನಾದ ಚಂದ್ರಾದಿತ್ಯನ ಪ್ರಿಯಮಹಿಷಿ ವಿಜಯಮಹಾದೇವಿಯು ಸಾಹಿತ್ಯ ಮತ್ತು ರಾಜ್ಯಾಡಳಿತ ಈ ಎರಡರಲ್ಲೂ ತನ್ನ ಪ್ರತಿಭೆಯನ್ನೂ, ಶಕ್ತಿ-ಸಾಮರ್ಥ್ಯಗಳನ್ನೂ ಪ್ರದರ್ಶಿಸಿದ್ದಳು. ಅವಳ ಮಾವ ಅವಳನ್ನು ಸಾವಂತವಾಡಿಗೆ ಅಧಿಕಾರಿಯಾಗಿ ನಿಯುಕ್ತಿಗೊಳಿಸಿದ್ದು, ಆಕೆ ಬಹು ಬೇಗನೇ ಶಾಂತಿ ಮತ್ತು ಕಾನೂನನ್ನು ಕಾಪಾಡಿದ್ದಳು.

ಬಾದಾಮಿ ಚಾಲುಕ್ಯ ವಿಜಯಾದಿತ್ಯ (೬೯೭-೭೩೩)ನ ಮಾತೆ ವಿನಯವತಿ ರಾಣಿ (೬೬೬-೭೩೪) ವಾತಾಪಿಪುರದಲ್ಲಿ ಪ್ರತಿಷ್ಠಾಪನೆ ಮಾಡಿದ ದೇವತಾ ವಿಗ್ರಹಗಳಿಗೋಸ್ಕರ ಹಲವಾರು ತೆರಿಗೆಗಳ ಮೂಲಕ ರಾಜ್ಯಕ್ಕೆ ಉತ್ಪನ್ನ ದೊರೆಯುವಂತೆ ಏರ್ಪಾಡು ಮಾಡಿದ್ದಳು.

ತನ್ನ ಪತ್ನಿ ಲೋಕಮಹಾದೇವಿಯ ಮನದಲ್ಲಿ ಆಡಳಿತಾಧಿಕಾರಿಯ ಕರ್ತವ್ಯವನ್ನು ನಿರ್ವಹಿಸುವ ಆಶಯವಿರುವುದನ್ನು ಗುರುತಿಸಿದ ಎರಡನೇ ವಿಕ್ರಮಾದಿತ್ಯ (೭೩೩-೭೪೬) ಕಿಸುವೊಳಲು ಪ್ರಾಂತ್ಯದ ಮುಖ್ಯ ಪಟ್ಟಣವಾದ ಪಟ್ಟದಕಲ್ಲಿಗೆ ಆಕೆಯನ್ನು ರಾಜ್ಯಪಾಲೆಯಾಗಿ ನೇಮಿಸಿದ. ಅಲ್ಲದೆ, ಪಲ್ಲವರ ವಿರುದ್ಧ ಯುದ್ಧ ಸಾಗಿದ ಅವಧಿಯಲ್ಲಿ ಬಹಳ ಕಾಲ ರಾಜಧಾನಿಯಿಂದ ದೂರವಿರಬೇಕಾದ ಸಂದರ್ಭಗಳು ಬರುತ್ತಿದ್ದು, ಆಗೆಲ್ಲ ಚಕ್ರವರ್ತಿಯು ತನ್ನ ಸಾಧನೆಯಲ್ಲಿ ನಿರತನಾಗಲು ಅನುವಾಗುವಂತೆ ಲೋಕ ಮಹಾದೇವಿಯೇ ರಾಜ್ಯಭಾರವನ್ನು ನೋಡಿಕೊಳ್ಳುತ್ತಿದ್ದಳು. ಅದರಿಂದ ರಾಜ್ಯದ ಮುಖ್ಯ ವ್ಯವಹಾರಗಳಲ್ಲಿ ಅವಳ ಸಲಹೆ-ಸೂಚನೆಗಳನ್ನು ಪಡೆಯಲಾಗುತ್ತಿತ್ತು.

ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ (ಕ್ರಿ.ಶ. ೮೧೪-೮೮೦)ನು, ಇತರ ಪ್ರಾಂತ್ಯಗಳೊಂದಿಗೆ ಬನವಾಸಿ ಪ್ರಾಂತ್ಯವನ್ನೂ ಆಳಿದ್ದು, ಈತನ ಮಗಳೂ, ಎರೆಯಂಗನ ಪತ್ನಿಯೂ ಆಗಿದ್ದ ದೇವಕನಿಮ್ಮಡಿ ಎಡದೊರೆ ನಾಡನ್ನು ಕ್ರಿ.ಶ. ೮೩೨ರಲ್ಲಿ ಆಳುತ್ತಿದ್ದಳು.

ಕಲ್ಯಾಣ ಚಾಲುಕ್ಯ ಒಂದನೇ ಸೋಮೇಶ್ವರನು (೧೦೪೨-೧೦೬೮) ತನ್ನ ಕುಟುಂಬದ ಸದಸ್ಯರನ್ನು ರಾಜ್ಯದ ಬೇರೆ ಬೇರೆ ಭಾಗಗಳಿಗೆ ರಾಜ್ಯಪಾಲರಾಗಿ ನೇಮಿಸಿಕೊಂಡು ರಾಜ್ಯಾಡಳಿತದ ವ್ಯವಸ್ಥೆ ಮಾಡಿದ್ದಾಗ, ಬನವಾಸಿ ೧೨೦೦೦ಕ್ಕೆ ಚಾವುಂಡರಾಯರಸ (೧೦೪೬-೧೦೫೩)ನ ನಂತರ, ತನ್ನ ಪತ್ನಿ ಮೈಳಲದೇವಿಯನ್ನು ರಾಜ್ಯಪಾಲೆಯಾಗಿ (೧೦೫೩-೫೫ರವರೆಗೆ) ನೇಮಿಸಿರುವ ಬಗ್ಗೆ ೧೦೫೩-೫೪ರ ಶಿಲಾವಳಿಯ ಶಾಸನದಲ್ಲಿ ಉಕ್ತವಾಗಿದೆ. ಈತನ ಇನ್ನೊಬ್ಬ ಪತ್ನಿ ಕೇತಲದೇವಿ ಕ್ರಿ.ಶ. ೧೦೫೪ರಲ್ಲಿ 'ತ್ರಿಭೋಗ್ಯಾಭ್ಯಂತರ ಸಿದ್ಧಿ'ಯನ್ವಯ ಪೊನ್ನವಾಡವನ್ನು ಆಳುತ್ತಿದ್ದುದಾಗಿ, ಹೊನವಾಡದ ಶಾಸನದಿಂದ ತಿಳಿದುಬರುತ್ತದೆ.

**ಶಿಕ್ಷಣ, ಸಾಹಿತ್ಯ ಮತ್ತು ಕಲಾಜ್ಞಾನ** : ಸ್ತ್ರೀಯರಿಗೆ ಶಿಕ್ಷಣ ನೀಡುವುದು ಬಳಕೆಯಲ್ಲಿ ಇತ್ತೆಂದೂ, ರಾಜಕುಮಾರಿಯರಿಗೆ, ಉನ್ನತ ವರ್ಗದ ಸ್ತ್ರೀಯರಿಗೆ, ಆ ಕಾಲಕ್ಕೆ ಅಗತ್ಯವೆನಿಸಿದಂತೆ ಶಿಕ್ಷಣವನ್ನು ಕೊಡಲಾಗುತ್ತಿತ್ತೆಂದೂ ತಿಳಿದುಬರುತ್ತದೆ. ಸಾಮಾನ್ಯವಾಗಿ ಸ್ತ್ರೀಯರ ಬುದ್ಧಿವಂತಿಕೆಯನ್ನು, ವಿದ್ಯೆ, ಗೌರವ-ಮರ್ಯಾದೆಗಳ ಮೌಲ್ಯಮಾಪನವನ್ನು ಅವರು ತಮ್ಮ ಕುಟುಂಬದ ಪುರುಷರನ್ನು ಹಾಗೂ ಕುಟುಂಬವನ್ನು ಸುಖವಾಗಿಡುವ ವಿಧಾನದಲ್ಲಿಯೇ ಅಳೆಯಲಾಗುತ್ತಿತ್ತು ಎಂಬುದನ್ನು ಬನವಾಸಿಯ ಕೆಲವು ರಾಣಿಯರ ಬಿರುದು ಮತ್ತು ವಿಶೇಷಣಗಳನ್ನು ಪರಿಶೀಲಿಸಿದರೆ ಗಮನಕ್ಕೆ ಬರುತ್ತದೆ. ಚಕ್ರವರ್ತಿಯಾದ ಚಾಲುಕ್ಯ ಜಗದೇಕಮಲ್ಲನ ರಾಣಿ ಸುಗ್ಗಲದೇವಿಗೆ 'ಕಲಿಕಾಲ ಸರಸ್ವತಿ' ಎಂಬ ಬಿರುದೂ, ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲ ಸೋಮೇಶ್ವರ ರಾಣಿ ಮೈಳಲದೇವಿಗೆ 'ವಿಳಾಸ ವಿದ್ಯಾಧರಿ' ಎಂದೂ; ಸೋವರಸ ದಂಡನಾಥನ ಪತ್ನಿಗೆ 'ಭಾರತೀ ಕರ್ಣಾವತಂಸೆ' ಎಂದೂ; ಚಾಲುಕ್ಯ ಭುವನೈಕಮಲ್ಲನ ಪತ್ನಿ ಕಂಚಲ ಮಹಾದೇವಿಗೆ 'ಶೃಂಗಾರ ವಿದ್ಯಾಧರಿ ಸಕಳಕಳಾಧರಿ' ಎಂದೂ; ಕಳಚುರ್ಯ ಅಹವಮಲ್ಲನ ರಾಣಿ ಸುಗ್ಗಲದೇವಿಗೆ 'ಅಭಿನವ ಸರಸ್ವತಿ' ಎಂಬ ಬಿರುದೂ; ವಿಕ್ರಮಾದಿತ್ಯನ 'ಪಿರಿಯರಸಿ' ಮೈಳಲದೇವಿಗೆ 'ಕಲಿಕಾಲ ಸರಸ್ವತಿ', 'ಸಕಳ ಕಲಾವತಿ' ಎಂದೂ; ಚಂದಲಾದೇವಿಗೆ 'ನೃತ್ಯ ವಿದ್ಯಾಧರಿ' ಮತ್ತು 'ಕಲಿಕಾಲ ಸರಸ್ವತಿ' ಎಂದೂ; ಮಲಯವತಿ ದೇವಿಗೆ 'ಅಭಿನಯ ಸರಸ್ವತಿ' 'ಮೃದು ಮಧುರವಚನರಚನಾಚತುರಕಳಾಲಾಪೆ'; ಪದ್ಮಲ ದೇವಿಗೆ 'ಅಭಿನವ ಸರಸ್ವತಿ' ಎಂದೂ; ಮಾಂಡಳಿಕ ಬಲ್ಲಿದೇವನರ್ಧಾಂಗಿಗೆ 'ಸಕಳ ಕಳಾಸರಸ್ವತಿ', 'ಗೀತ ವಾದ್ಯ ನೃತ್ಯ ಪ್ರವೀಣೆ' ಎಂದೂ ಬಿರುದುಗಳನ್ನು ಅಥವಾ ಹೆಸರುಗಳನ್ನು ಪಡೆದಿದ್ದರೆಂಬುದನ್ನು ಡಾ. ಚೆನ್ನಕ್ಕ ಎಲಿಗಾರರವರ ''ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ'' ಎಂಬ ಗ್ರಂಥದಲ್ಲಿ ಶಾಸನಗಳ ಆಧಾರದ ಮೇಲೆ ಹೇಳಿದ್ದು ಈ ಮಾತಿಗೆ ಬೆಂಬಲ ನೀಡುತ್ತದೆ. ಕಲಚುರ್ಯ ಸೋವಿದೇವನ ರಾಣಿ ಸೋವಲದೇವಿಯು ಕ್ರಿ. ಶ. ೧೧೭೪ರಲ್ಲಿ ತನ್ನ ಹಾಗೂ ಇತರ ದೇಶಗಳ ಕಲಾ ಪರಿಣತರ ವೇದಿಕೆಯಲ್ಲಿ ಅತ್ಯುತ್ತಮವಾಗಿ ನೃತ್ಯ ಮಾಡಿ ಎಲ್ಲರನ್ನೂ ಅಮಿತ ಸಂತೋಷಪಡಿಸಿದ್ದಳೆಂದು ತಿಳಿದು ಬಂದಿದೆ. ಆದ್ದರಿಂದ ಕದಂಬರ ಕಾಲದಿಂದಲೂ; ಸ್ತ್ರೀಯರ ವಿದ್ವತ್ತು ಮತ್ತು ಪ್ರತಿಭೆಗಳನ್ನು ಮೊನಚಾಗಿಸುವ ವಿದ್ಯೆಗಳಿಗಿಂತ, ಪುರುಷರ ಸುಖ-ಸಂತೋಷಗಳನ್ನು ಹೆಚ್ಚಿಸಲು ಪೂರಕವಾಗುವಂತಹ ನೃತ್ಯ, ಸಂಗೀತ, ಕುಶಲ-ಕಲೆ, ಸೌಂದರ್ಯ, ಶೀಲ-ರಕ್ಷಣೆ ಮುಂತಾದ ಕ್ಷೇತ್ರಗಳಲ್ಲಿಯೇ ಅವಳಿಗೆ ಹೆಚ್ಚು ಪ್ರೋತ್ಸಾಹಿಸಿ, ಪರಿಣಿತರನ್ನಾಗಿ ಮಾಡಲಾಗುತ್ತಿತ್ತೆಂಬುದು ದೃಢಗೊಳ್ಳುತ್ತದೆ.

ವಾಕಾಟಕರ ಎರಡನೇ ಪ್ರವರಸೇನನ ಮಗ ನರೇಂದ್ರಸೇನನ ರಾಣಿಯು ಕುಂತಳದ ಅಜಿತ ಭಟ್ಟಾರಿಕೆ ಎಂದು ಪ್ರಖ್ಯಾತಿ ಪಡೆದಿದ್ದಳು. ಇವಳು ಕದಂಬ ಕಾಕುಸ್ಥವರ್ಮನ ಮಗಳಿರಬಹುದೆಂದೂ, ಕದಂಬ ಸಾರ್ವಭೌಮ (೩೮೫-೪೦೫) ರಘುವರ್ಮನಂತಹ ವಿದ್ವಾಂಸನ (ದೊಡ್ಡಪ್ಪ) ತರಬೇತಿಯಲ್ಲಿ ಬೆಳೆದ ಇವಳು 'ಭಟ್ಟಾರಿಕೆ' ಎನಿಸಿಕೊಳ್ಳುವುದು

---

*೪೩ನೇ ಪುಟದಿಂದ*

ಯಿಂದ ಸಮಾಜಕ್ಕೆ ಲಾಭವೇ ತಾನೇ? ಐನ್‌ಸ್ಟೈನ್‌ನಂತಹ ಮೇಧಾವಿ ವಿಜ್ಞಾನಿಯನ್ನು ಅಥವಾ ಐಶ್ವರ್ಯ ರೈಳಂತಹ ಸುಂದರಿಯನ್ನು ತದ್ರೂಪಿ ತಂತ್ರಜ್ಞಾನದಿಂದ ಪಡೆಯಬಹುದಾದರೆ ನಮಗೆ ಯಾಕೆ ಬೇಡ ಎಂದು ಪ್ರಶ್ನಿಸುತ್ತಾರೆ. ಈ ಮಧ್ಯೆ ತೀವ್ರ ಜಿಜ್ಞಾಸೆಗೊಳಗಾಗಿರುವವರೆಂದರೆ ತದ್ರೂಪಿ ತಂತ್ರಜ್ಞಾನವನ್ನು ವೈದ್ಯಕೀಯವಾಗಿ ಹಾಗೂ ಔಷಧ ತಯಾರಿಕಾ ಉದ್ದೇಶಗಳಿಗೆ ಬಳಸಬೇಕೆನ್ನುವ ವಿಜ್ಞಾನಿಗಳ ಗುಂಪು. ಕ್ಯಾಲಿಫೋರ್ನಿಯಾದ ಜೆರಾನ್ ಆಫ್ ಮೆನ್ಲೊ ಪಾರ್ಕ್ ಸಂಸ್ಥೆಯ ಸಂಶೋಧಕರ ತಂಡ ಮಾನವ ಭ್ರೂಣದ ಸ್ಟೆಮ್ ಸೆಲ್‌ಗಳಿಂದ ಪಡೆದ ನರಕೋಶಗಳನ್ನು ಪ್ಯಾರಾಲಿಸಿಸ್ ಪೀಡಿತ ಇಲಿಗಳಿಗೆ ನಾಟಿ ಮಾಡಿದಾಗ ಅವುಗಳು ನಡೆದಾಡುವ ಶಕ್ತಿಯನ್ನು ಪುನಃ ಗಳಿಸಿಕೊಂಡುದನ್ನು ದಾಖಲಿಸಿದೆ (ಜುಲೈ ೩, ೨೦೦೩- ನ್ಯೂ ಸೈಂಟಿಸ್ಟ್ ನ್ಯೂಸ್‌ಲೆಟರ್). ಸ್ಪೈನಲ್ ಕಾರ್ಡ್‌ಗೆ ಪೆಟ್ಟು ತಗುಲಿ ಆದಂತಹ ತೊಂದರೆಗಳಿಗೆ ಚಿಕಿತ್ಸೆ ನೀಡುವ ಬಗೆಗೆ ಈ ಸಂಶೋಧನೆ ಈಗ ವಿಜ್ಞಾನಿಗಳ ವಲಯಗಳಲ್ಲಿ ತೀವ್ರ ಆಸಕ್ತಿ ಕೆರಳಿಸಿದೆ. ಮಾನವ ತದ್ರೂಪುಗಳ ಬಗೆಗಿನ ವಿವಾದದಿಂದಾಗಿ ಇಂತಹ ಸಂಶೋಧನೆಗಳನ್ನು ಸಮಗ್ರವಾಗಿ ನಿಷೇಧಿಸುವ ಕಾಯ್ದೆ ಜಾರಿಗೆ ಬಂದರೆ ತಮ್ಮ ಸಂಶೋಧನೆಗಳಿಗೆ ಹಿನ್ನಡೆ ಉಂಟಾಗುವ ಅಳುಕು ಅವರದ್ದು. ಬದುಕಿನ ಎಲ್ಲಾ ಕ್ಷೇತ್ರಗಳೂ ವ್ಯಾಪಾರೀಕರಣಗೊಳ್ಳುತ್ತಿರುವಾಗ ಇಂದು ಬಹುರಾಷ್ಟ್ರೀಯ ಕಂಪನಿಗಳಿಂದ ಹಣಕಾಸು ನೆರವು ಪಡೆಯುತ್ತಿರುವ ವೈದ್ಯ ಕ್ಷೇತ್ರವೂ ಇದಕ್ಕೆ ಹೊರತಾಗಿಲ್ಲ. ಹೀಗಾಗಿ ಅವರಲ್ಲಿ ಸಹಜವಾಗಿಯೇ ಆತಂಕದ ಅಲೆ ಎದ್ದಿದೆ.

ಕ್ಲೋನಿಂಗ್ ತಂತ್ರಜ್ಞಾನದಿಂದ ಏನೆಲ್ಲಾ ಅದ್ಭುತಗಳು ಘಟಿಸಬಹುದು ಎಂದು ಹೇಳುತ್ತಾ ಅದರ ಪರವಾಗಿ ಪ್ರತಿಪಾದಿಸುವ ಚಿಂತಕರು ಒಂದು ಅಂಶ ನೆನಪಿಡಬೇಕು. ಅದೆಂದರೆ ನಿಸರ್ಗದಲ್ಲಿ ಜೀವವಿಕಾಸ ಯಾವತ್ತೂ ಜೀವಿಗಳನ್ನು ಉತ್ತಮವಾದುದರೆಡೆಗೆ ಅಭಿವೃದ್ಧಿಪಡಿಸುತ್ತಾ ಸಾಗುತ್ತದೆ. ಅದು ವಿಕಾಸದ ಉದ್ದೇಶ ಕೂಡ. ಐನ್‌ಸ್ಟೈನ್ ಆಗಲೀ ಅಥವಾ ಐಶ್ವರ್ಯ ರೈ ಆಗಲೀ ಕ್ಲೋನಿಂಗ್‌ನಿಂದ ಜನ್ಮ ತಳೆದವರಾಗಿರದೆ ಪ್ರಕೃತಿ ಸಹಜವಾಗಿ ಹೆಣ್ಣು ಗಂಡುಗಳ ಮಿಲನದಿಂದ ಹುಟ್ಟಿದವರು ಎಂಬುದನ್ನು ಅರಿತುಕೊಳ್ಳಬೇಕು. ಅಲ್ಲದೆ ಜಗತ್ತಿನ ಯಾವುದೇ ಶ್ರೇಷ್ಠ ಪ್ರತಿಭೆ ಮತ್ತು ಸಾಮರ್ಥ್ಯ ಜನ್ಮಜನ್ಯವಾಗಿ ಗಳಿಸಿದುದಾಗಿರದೆ ಪರಿಸರದ ವಿವಿಧ ಅಂಶಗಳ ಪ್ರಭಾವವೂ ನಿರ್ಣಾಯಕ ಪಾತ್ರ ವಹಿಸಿರುತ್ತದೆ. ಇಂದಿನ ಶ್ರೇಷ್ಠ ವಿಜ್ಞಾನಿ ಸ್ಟೀಫನ್ ಹಾಕಿಂಗ್‌ರ ಜೀವಕೋಶವನ್ನು ಬಳಸಿಕೊಂಡು ಕ್ಲೋನಿಂಗ್‌ನಿಂದ ಎಲ್ಲಾ ಗುಣಗಳು ಮತ್ತು ಪ್ರತಿಭೆಗಳ ತದ್ರೂಪಿಯಾದ ಮತ್ತೊಬ್ಬ ಸ್ಟೀಫನ್ ಹಾಕಿಂಗ್‌ನನ್ನು ಸೃಷ್ಟಿಸಲು ಈ ಕ್ಲೋನಿಂಗ್ ತಜ್ಞರಿಗೆ ಸಾಧ್ಯವೆ? ಆದ್ದರಿಂದ ನಾವು ಬರೀ ಕಲ್ಪನಾ ಲೋಕದಲ್ಲೇ ವಿಹರಿಸುವುದನ್ನು ಬಿಟ್ಟು ವಾಸ್ತವದತ್ತಲೂ ಕಣ್ಣುಬಿಟ್ಟು ನೋಡುವುದು ಅಗತ್ಯ. ಇಲ್ಲವಾದಲ್ಲಿ ಇಂತಹ ವಿದ್ಯಮಾನಗಳನ್ನು ಬಳಸಿಕೊಂಡು ವೊರಿಲಾನ್ (ರೇಲ್) ನಂತಹವರು ಇಡೀ ವಿಜ್ಞಾನಲೋಕವನ್ನೇ ಅಪಹಾಸ್ಯಕ್ಕೊಳಗಾಗಿಸುವ ವೈಜ್ಞಾನಿಕ ಮೌಢ್ಯಗಳ ಅದ್ಭುತ ಕತೆಗಳನ್ನು ಕಟ್ಟಿ ವಿಜ್ಞಾನಿಗಳ ಸಮುದಾಯವನ್ನೇ ಅಪಹಾಸ್ಯಕ್ಕೆ ಈಡು ಮಾಡಿಯಾರು.

**ಸಿದ್ಧರಾಜು ಕೊತ್ತತ್ತಿ**
ಮಂಡ್ಯ ಜಿಲ್ಲಾ ವಿಜ್ಞಾನ ವೇದಿಕೆ
ಕೊತ್ತತ್ತಿ ಅಂಚೆ - ೫೭೧ ೪೦೨ ಮಂಡ್ಯ ಜಿಲ್ಲೆ

ಸಹಜವೆಂದೂ ಪ್ರಾ|| ಎಲ್. ಟಿ. ಶರ್ಮಾ ಮತ್ತು ಪ್ರೊ|| ಬಿ. ಎಚ್. ಶ್ರೀಧರ್‌ರವರು ಅಭಿಪ್ರಾಯಪಟ್ಟಿದ್ದಾರೆ.

ಇಮ್ಮಡಿ ಪುಲಕೇಶಿಯ ಸೊಸೆ ವಿಜಯ ಮಹಾದೇವಿ ಸಂಸ್ಕೃತ ಪಂಡಿತೆಯಾಗಿದ್ದು, ಉತ್ತಮ ಸಾಹಿತಿಯೂ ಆಗಿದ್ದು 'ಕೌಮುದೀ ಮಹೋತ್ಸವ' ಎಂಬ ಸಂಸ್ಕೃತ ನಾಟಕವನ್ನು ಬರೆದಿದ್ದಳು. ಆಕೆಗೆ ತನ್ನ ಪಾಂಡಿತ್ಯ ಹಾಗೂ ಬರವಣಿಗೆಯ ಆತ್ಮವಿಶ್ವಾಸ ಇತ್ತು. ಅವಳ ಆ ಆತ್ಮವಿಶ್ವಾಸ ಹುಸಿಯೂ ಅಲ್ಲವೆಂಬುದು ಆ ನಂತರದ ಪಂಡಿತರ ವಿಮರ್ಶೆಯಿಂದ ತಿಳಿದುಬರುತ್ತದೆ. ಹತ್ತನೇ ಶತಮಾನದ ಪ್ರತಿಭಾವಂತ ವಿಮರ್ಶಕ ರಾಜಶೇಖರ, ಇವಳು ಸರಸ್ವತಿಗೆ ಸಮಾನಳೆಂದೂ, ಕಾಳಿದಾಸನ ನಂತರ ಬಂದವರ್ಯಾರೂ ಇವಳನ್ನು ಮೀರಿಸಲಾಗಿಲ್ಲವೆಂದೂ ಹೇಳಿರುವ ಹೇಳಿಕೆ ಮತ್ತು ಅನಂತರ ಹನ್ನೊಂದನೇ ಶತಮಾನದ ಭೋಜರಾಜನ ''ಸ್ತ್ರೀಯೂ ಕೂಡ ಉತ್ತಮವಾಗಿ ಸಂಸ್ಕೃತದಲ್ಲಿ ಬರೆಯಬಲ್ಲಳು'' ಎಂದು ಇವಳನ್ನು ಉದ್ದೇಶಿಸಿ ಹೇಳಿದ ಮಾತುಗಳು, ವಿಜಯ ಭಟ್ಟಾರಿಕೆ ನಿಜವಾಗಿ ಒಬ್ಬ ಅತ್ಯುತ್ತಮ ಕವಯತ್ರಿ ಆಗಿದ್ದಳೆಂಬುದನ್ನು ಸಾಬೀತುಪಡಿಸುತ್ತವೆ.

ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತೆ ಸಂಸ್ಕೃತ ಸಾಹಿತ್ಯ, ವಿಶೇಷವಾಗಿ ನಾಟಕ ಸಾಹಿತ್ಯವನ್ನಾಧರಿಸಿ, ಸಾಮಾಜಿಕ ವಿದ್ಯಮಾನಗಳನ್ನು ಪರಿಗಣನೆಗೆ ತೆಗೆದುಕೊಂಡರೆ (ಉದಾ : ದಶರೂಪಕ) ಕಾವ್ಯಕಲೆ ಹಾಗೂ ಸಂಸ್ಕೃತಿಯ ಶಿಕ್ಷಣವು ಕೇವಲ ಉನ್ನತ ವರ್ಗಕ್ಕೆ ಮೀಸಲಾಗಿರಲಿಲ್ಲವೆಂದೂ, ರಾಜರ ಅಂತಃಪುರಗಳಲ್ಲಿನ ಊಳಿಗದ ಸ್ತ್ರೀಯರೂ ಅರಮನೆಯ ಇತರ ಸೇವಕರೂ ಓದು ಬರಹ ಕಲಿತವರಾಗಿದ್ದರೆಂಬುದೂ ಅವರು ಮಹಾಭಾರತಗಳಿಂದಲೂ ಕಥೆಗಳನ್ನು ಉದಾಹರಿಸಿ ಹೇಳಬಲ್ಲವರಾಗಿದ್ದರೆಂದೂ ತಿಳಿಯಲಾಗಿದೆ.

**ದಾನ-ದತ್ತಿಗಳು :** ಶಾತವಾಹನರಂತೆಯೇ ಕದಂಬರ ಕಾಲದಲ್ಲಿ ಮತ್ತು ಆ ನಂತರವೂ ದಾನ, ಧರ್ಮ, ಆತ್ಮ-ಬಲಿದಾನ, ಪೂಜೆ-ಪುರಸ್ಕಾರ ಇತ್ಯಾದಿಗಳು ಇಡೀ ಸಮಾಜ ಒಪ್ಪಿಕೊಂಡಿದ್ದ ಆದರ್ಶ, ಮೌಲ್ಯ ಮತ್ತು ನಂಬಿಕೆಗಳಾಗಿದ್ದವು. ಶಾತವಾಹನರ ಕಾಲದಲ್ಲಿ ಪುನರುಜ್ಜೀವನ ಪಡೆದ ವೈದಿಕ ಧರ್ಮ ಪೂರ್ವ ಕದಂಬರ ಕಾಲದಲ್ಲಿ ಹೆಚ್ಚು ಪ್ರಚಲಿತಗೊಂಡಿತ್ತು. ಬೌದ್ಧ ಜೈನ ಮತ್ತು ಶೈವ ಧರ್ಮಗಳಿಗೂ ಪ್ರೋತ್ಸಾಹವಿದ್ದುದರಿಂದ, ಈ ಮೂರರಲ್ಲಿ ತಮ್ಮ ನಂಬುಗೆಯ ಧರ್ಮವನ್ನು ಸ್ತ್ರೀಯರು ಪರಿಪಾಲಿಸುತ್ತಿದ್ದರು. ಸ್ತ್ರೀಯರೂ ಆಸ್ತಿ, ಸಂಪತ್ತುಗಳನ್ನು ಹೊಂದಿದ್ದರೆಂಬುದನ್ನೂ, ಅವರು ತಮ್ಮ ಆಸ್ತಿ, ಹಣ ಇತ್ಯಾದಿಗಳನ್ನು ತಮ್ಮಿಚ್ಛೆಯಂತೆ ದಾನ ಮಾಡಲು, ಪುರುಷ-ಸಮಾನ ಆರ್ಥಿಕ ಅಧಿಕಾರವನ್ನು ಪಡೆದಿದ್ದರೆಂಬುದನ್ನೂ, ಅವರು ಮಾಡಿರುವ ದಾನ-ದತ್ತಿಗಳಿಂದ ತಿಳಿಯಬಹುದಾಗಿದೆ.




ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನದ ಮುಂದುವರಿಕೆಯಾಗಿ ಕಿದ್ವಾಯಿ ಸ್ಮಾರಕ ಕ್ಯಾನ್ಸರ್ ಆಸ್ಪತ್ರೆಯಲ್ಲಿ ದಿನಾಂಕ ೨೭-೧೦-೨೦೦೩ರಂದು ಆಸ್ಪತ್ರೆಯ ನಿರ್ದೇಶಕರಾದ ಡಾ|| ಪಿ. ಎಸ್. ಪ್ರಭಾಕರನ್‌ರವರು ಪುಸ್ತಕ ಪ್ರದರ್ಶನವನ್ನು ಉದ್ಘಾಟಿಸಿದರು. ವೈದ್ಯಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮತ್ತು ನವಕರ್ನಾಟಕ ಪ್ರಕಾಶನದ ಶ್ರೀ ಆರ್. ಎಸ್. ರಾಜಾರಾಮ್ ಮತ್ತಿತರರು ಚಿತ್ರದಲ್ಲಿದ್ದಾರೆ.

ಗೌತಮಿಪುತ್ರ ಶಾತಕರ್ಣಿಯ ತಾಯಿಯು ಭದ್ರಾಯನೀಯ ಎಂಬ ಬೌದ್ಧ ಪಂಗಡ ಒಂದಕ್ಕೆ ನಾಸಿಕ್‌ನಲ್ಲಿರುವ ಮೂರನೆಯ ಗುಹೆಯನ್ನು ಕೊಟ್ಟಿದ್ದಳು. ಅನೇಕ ಸ್ತ್ರೀಯರು ಸ್ಪರ್ಧೆಯ ಮೇಲೆ ಚೈತ್ರ ವಿಹಾರಗಳಿಗೆ ಹಾಗೂ ಬೌದ್ಧ ಸಂಘಗಳಿಗೆ ದಾನ ಮಾಡಲು ಮುಂದಾಗಿದ್ದರು. ಬನವಾಸಿಯ ಮಧುಕೇಶ್ವರಾಲಯದ ಪ್ರಾಕಾರದೊಳಗಿರುವ ನಾಗರ ಪ್ರತಿಮೆಯ ಮೇಲೆ ಮೂರನೆ ಶತಮಾನದ ಬ್ರಾಹ್ಮೀಲಿಪಿಯ ಪ್ರಾಕೃತ ಭಾಷೆಯ ಶಾಸನವೊಂದಿದ್ದು, ಇದರನ್ವಯ ಹಾರೀತಿಪುತ್ರ ವಿಣ್ಹುಕಡ ಚುಟುಕುಲಾನಂದ ಸಾತಕರ್ಣಿಯ ಕಾಲದಲ್ಲಿ, ಆ ಶತಮಾನದ ಹನ್ನೆರಡನೇ ವರ್ಷದ ಹೇಮಂತ ಕಾಲದ ಏಳನೇ ಪಕ್ಷದ ಒಂದು ಶುಭ ದಿನ ಮಹಾರಾಜನ ಮಗಳೂ, ಮಹಾಭೋಜನ ಪತ್ನಿಯೂ ಆದ ಶಿವಸ್ಕಂದ ನಾಗಶ್ರೀಯು ಯುವರಾಜನೊಂದಿಗೆ (ಇಮ್ಮಡಿ ವಿಣ್ಹುಕಡ ಚುಟುಕುಲಾನಂದ ಸಾತ ಕರ್ಣಿ), ನಾಗ (ಪ್ರತಿಮೆ), ತಟಾಕ ಮತ್ತು ವಿಹಾರಗಳನ್ನು ದಾನ ಮಾಡಿದ ವಿಷಯವನ್ನು ಹೇಳುತ್ತದೆ. ಆ ಕಾಲದ ಅರಸು ಮನೆತನಗಳ ಹೆಂಗಸರು ಹೆಚ್ಚಿನ ಆರ್ಥಿಕ ಸ್ವಾತಂತ್ರ್ಯವನ್ನು ಹೊಂದಿದ್ದರೆಂಬುದೂ, ಅವರಲ್ಲಿ ಅನೇಕರು ತುಂಬಾ ಆಸ್ತಿವಂತರಾಗಿದ್ದರೆಂದೂ, ಅವರು ಚೈತ್ಯಾಗಾರಗಳಿಗೆ ದಾನ ರೂಪದಲ್ಲಿ ಕಟ್ಟಿಸಿ ಕೆತ್ತಿಸಿ ಕೊಟ್ಟಿರುವ ಬೆಲೆಯುಳ್ಳ ಸ್ತಂಭಗಳು, ದ್ವಾರಗಳು ಮತ್ತು ಸ್ತೂಪ ಶಿಲಾಪಟ್ಟಿಕೆಗಳಿಂದ ತಿಳಿದುಬರುತ್ತದೆ.

ವೇಶ್ಯಾಸ್ತ್ರೀಯರ ಬಗ್ಗೆ ಯಾವುದೇ ಕೀಳು ಭಾವನೆ ಇರಲಿಲ್ಲ. ಅವರು ಮಾಡಿದ ದಾನ-ಧರ್ಮಗಳು ಅಂದಿನ ಶಾಸನಗಳಲ್ಲಿ ದಾಖಲುಗೊಂಡಿವೆ. ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಚಕ್ರವರ್ತಿ ವಿಜಯಾದಿತ್ಯನ ವೇಶ್ಯೆ ವಿನಾಪೋಟಿಯು ಮಹಾಕೂಟದ ದೇವಾಲಯಕ್ಕೆ ಒಂದು ಸುವರ್ಣ ಪೀಠ, ಒಂದು ರಜತಛತ್ರ ಮತ್ತು ಎಂಟುನೂರು ಮತ್ತರ ಭೂಮಿಯನ್ನು ದಾನ ಮಾಡಿದ್ದಳು. ದೇವಾಲಯವೊಂದಕ್ಕೆ ನಿಯುಕ್ತಿಗೊಂಡ ಸೂಳೆಯಾಗಿದ್ದ ಗೋವಿಂದಪೊಡ್ಡಿಯ ಮಗಳಾದ ಬಾದಿಪೊಡ್ಡಿಯೂ ದಾನ ನೀಡಿದ್ದಾಳೆ. ಚಲಬ್ಬೆ ಎಂಬ ಇನ್ನೊಬ್ಬ ಸೂಳೆ ವಿಜಯೇಶ್ವರ ದೇವರಿಗೆ ಹರಕೆ ಒಪ್ಪಿಸಲೆಂದು ಸ್ತಂಭಗಳನ್ನು ಮಾಡಿಸಿಕೊಟ್ಟಿದ್ದಳು.

**ಧರ್ಮ :** ಶಾತವಾಹನರ ಕಾಲದಿಂದ ಕಲಚುರ್ಯರ ಕಾಲದ ಆರಂಭದವರೆವಿಗೆ ವೈದಿಕ, ಬೌದ್ಧ ಮತ್ತು ಜೈನ ಧರ್ಮಗಳು ಪ್ರಮುಖ ಮತ ಧರ್ಮಗಳಾಗಿದ್ದವು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಶೈವ ಮತವು ಅನೇಕರನ್ನು ಆಕರ್ಷಿಸಿ ಅವರನ್ನು ಶೈವಾನುಯಾಯಿಗಳಾಗಿ ಪರಿವರ್ತಿಸಿತು. ರಾಜ ಮನೆತನದ ಅನೇಕರು ಈ ಮತವನ್ನು ಅವಲಂಬಿಸಿದರು. ಐದನೇ ವಿಕ್ರಮಾದಿತ್ಯನ ನಂತರ ಪಟ್ಟವನ್ನೇರಿದ ಆತನ ತಮ್ಮ ಎರಡನೇ ಜಯಸಿಂಹ (ಕ್ರಿ. ಶ. ೧೦೧೮-೧೦೪೨)ನ ಪತ್ನಿ ಸುಗ್ಗಲದೇವಿಯು ವೀರಶೈವ ಶರಣ ದೇವರ ದಾಸಿಮಯ್ಯನ ಭಕ್ತೆಯಾಗಿದ್ದು, ತನ್ನ ಪತಿ ಜೈನಮತವನ್ನು ಬಿಟ್ಟು ಶೈವಮತವನ್ನು ಅವಲಂಬಿಸುವ ಹಾಗೆ ಪರಿವರ್ತಿತಗೊಳ್ಳುವಂತೆ ಉತ್ತೇಜಿಸಿದ್ದಳೆಂಬುದನ್ನು ದೇವರ ದಾಸಿಮಯ್ಯನ ಪುರಾಣದಲ್ಲಿ ಹೇಳಲಾಗಿದೆ. ಈ ಸಂಗತಿಯು ಆಕೆಗೆ ಶೈವ ಮತದ ಬಗೆಗಿದ್ದ ಆಕರ್ಷಣೆಯ ವಿಷಯವನ್ನು ಮಾತ್ರವಲ್ಲ, ಪತ್ನಿಯ ಮಾತಿಗೆ ಹಾಗೂ ಅಭಿಪ್ರಾಯಕ್ಕೆ ಆ ಚಕ್ರವರ್ತಿ ಬೆಲೆ ಕೊಡುತ್ತಿದ್ದ ಎಂಬುದನ್ನೂ ಸ್ಪಷ್ಟಪಡಿಸುತ್ತದೆ.

ಆತ್ಮಾರ್ಪಣೆ, ಆಮರಣಾಂತ ಉಪವಾಸದ ಜೈನರ ಸಲ್ಲೇಖನ ವ್ರತಾಚರಣೆ, ಶೂಲ ಬ್ರಹ್ಮ ಮತ್ತು ವೇಳೆ ವಾಳಿ ಮುಂತಾದ ಸ್ವತಃ ಸಾವನ್ನು ಸ್ವಾಗತಿಸುವಂತಹ ಪದ್ಧತಿಗಳು ರೂಢಿಯಲ್ಲಿದ್ದು, ಲಿಂಗ ಭೇದವಿಲ್ಲದೆ ಇವುಗಳನ್ನು ಜನರು ನಿರ್ವಹಿಸುತ್ತಿದ್ದಂತೆ ಕಾಣಬರುತ್ತದೆ. ವೇಳೆ ವಾಳಿ ಎಂದರೆ ತನ್ನ ಒಡೆಯ ಅಥವಾ ಒಡತಿಯೊಡನೆ ಸ್ವರ್ಗಕ್ಕೆ ಹೋಗಲು ಕೈಗೊಳ್ಳುವ ವ್ರತ. ಕದಂಬ ತೈಲಪ ರಾಜನೊಡನೆ ಬೊಪ್ಪಣ ಎಂಬುವವನೂ, ೧೧೮೧-೧೨೦೦ರವರೆಗೆ ಚಕ್ರವರ್ತಿಯಾಗಿ ಬನವಾಸಿಯ ಮೇಲೆ ಪ್ರಭುತ್ವ ಸಾಧಿಸಿದ ನಾಲ್ವಡಿ ಚಾಲುಕ್ಯ ಸೋಮೇಶ್ವರನ ಪತ್ನಿ ಲಚ್ಚಲದೇವಿಯ ಜೊತೆಗೆ ವೇಳೆಕಾರನಾದ ಬೋಕ ಎಂಬುವವನೂ, ಕ್ರಮವಾಗಿ ತಮ್ಮ ರಾಜ ರಾಣಿಯರೊಡನೆ ಮರಣಿಸಲು ಪ್ರತಿಜ್ಞೆ ತೊಟ್ಟು ಸಾವನ್ನು ಸ್ವೀಕರಿಸಿದ್ದರು. ಇಲ್ಲಿಯೂ ಒಬ್ಬ ಮಹಾರಾಣಿಯ ಬಗ್ಗೆಯೂ ರಾಜನೊಬ್ಬನ ಬಗ್ಗೆ ಇರುವಷ್ಟೇ ಗೌರವ, ಭಯ-ಭಕ್ತಿಗಳು ಇತ್ತು ಎಂಬುದಕ್ಕೆ ಒಂದು ಉದಾಹರಣೆಯಾಗಿ ಇದು ಕಾಣಬರುತ್ತದೆ.

**ಸತಿ :** ಹೆಣ್ಣಿಗೆ ಸ್ವತಂತ್ರವಾದ ಸ್ಥಾನ ಇಲ್ಲದಿದ್ದುದರಿಂದ 'ಸತಿ' ಹೋಗುವ ಪದ್ಧತಿಯು ಒಂದು ಧರ್ಮ ಎಂದಾಗಿರುವ ಸಾಧ್ಯತೆ ಇದೆ. ಪತಿಯ ಮೂಲಕವೇ ಸಮಾಜದಲ್ಲಿ ಒಂದು ಗೌರವ ಸ್ಥಾನ-ಮಾನ-ಮರ್ಯಾದೆಗಳು ಆಕೆಗೆ ಲಭ್ಯವಾಗುತ್ತಿದ್ದು, ಅವನ ಮರಣಾನಂತರ ಆರ್ಥಿಕ ಬೆಂಬಲವೂ ಇಲ್ಲದಂತಾಗಿ, ಇತರ ಯಾರದೋ ಆಸರೆಯಲ್ಲಿ ದಿನ ಕಳೆಯುವ ಪರಿಸ್ಥಿತಿ ಬಂದು, ಸಮಾಜವು ಅವರನ್ನು ನಗಣ್ಯರಾಗಿ ಕಾಣುತ್ತಿದ್ದಿರಲೂ ಬಹುದಾದುದರಿಂದಲೇ ಸ್ಥಾನ-ಮಾನ-ಧನ ಯಾವುದೂ ಇಲ್ಲದ ಬದುಕಿಗಿಂತ

ಮರಣವೇ ಲೇಸೆಂಬ ಭಾವನೆಯಿಂದ ಸತಿ ಹೋಗುವುದು ಧರ್ಮವೆಂಬುದಾಗಿ ರೂಢಿಗೆ ಬಂದಿರಲೂಬಹುದು. ಅಂತೂ ಗಂಡನ ಮರಣಾ ನಂತರ ಹೆಂಡತಿ ಅವನೊಂದಿಗೆ ಸತಿ ಹೋಗುವುದು ಧರ್ಮವೆಂದು ಜನ ತಿಳಿದಿದ್ದರು. ಕದಂಬ ರವಿವರ್ಮನ ರಾಣಿ ಅವನೊಂದಿಗೆ ಸಹಗಮನ ಮಾಡಿದ್ದು, ಇದು ಇತಿಹಾಸದಲ್ಲಿ ಕಾಣಸಿಗುವ ಇಂಥ ಒಂದು ಮೊದಲನೇ ಪ್ರಕರಣ. ಜೈನ ಸಾವಂತ ನಲ್ಲಪ್ಪನ ಮಕ್ಕಳಾದ ಅತ್ತಿಮಬ್ಬೆ ಮತ್ತು ಗುಂಡಮಬ್ಬೆಯರನ್ನು ಚಾಲುಕ್ಯ ದೊರೆ ತೈಲಪನ ಪ್ರಭಾವೀ ಮಂತ್ರಿಯಾದ ನಾಗದೇವನಿಗೆ ಕೊಟ್ಟು ಮದುವೆ ಮಾಡಲಾಗಿದ್ದು, ಅವನ ಮರಣದ ನಂತರ ಗುಂಡಮಬ್ಬೆ ಸತಿ ಹೋಗುವುದು ಅನಿವಾರ್ಯ ವೆಂಬಂತೆ ತನ್ನ ಪ್ರಾಣಾರ್ಪಣೆ ಮಾಡಿಕೊಂಡಳು. ಅತ್ತಿಮಬ್ಬೆಯೂ ಸಹ "ಸತಿ ಪೂಜೆಯು ಸದ್ಗತಿಯನ್ನೀಯುವುದು" ಎಂದೇ ನಂಬಿದ್ದರೂ, ತನ್ನ ಮಗನ ಪೋಷಣೆಗಾಗಿ ಸತಿ ಹೋಗದೆ ಉಳಿಯಬೇಕಾಗಿ ಬಂದು ಮಗನಿಗಾಗಿ ಜೀವ ಉಳಿಸಿಕೊಂಡು ದಾನ-ಧರ್ಮಗಳಲ್ಲಿ, ಅಧ್ಯಾತ್ಮದಲ್ಲಿ ತನ್ನನ್ನು ತೊಡಗಿಸಿಕೊಂಡು ಉಳಿದ ಜೀವನವನ್ನು ಕಳೆದಳು.

**ದೇವಸ್ಥಾನಗಳ ನಿರ್ಮಾಣ :** ದೇವರು, ಧರ್ಮ ಮತ್ತು ಕುಟುಂಬವನ್ನೇ ತಮ್ಮ ಬದುಕಿನ ಮುಖ್ಯ ಧ್ಯೇಯವಾಗಿಸಿಕೊಂಡ ಸ್ತ್ರೀಯರು ತಮ್ಮಲ್ಲಿದ್ದ ಆಸ್ತಿ, ಹಣ ಮತ್ತು ಸ್ವಾತಂತ್ರ್ಯಗಳೆಲ್ಲವನ್ನೂ ಧರ್ಮೋದ್ಧಾರಕ್ಕಾಗಿಯೇ ಹೆಚ್ಚು ಉಪಯೋಗಿಸುತ್ತಿದ್ದರು. ಶಾತವಾಹನರ ಕಾಲದಿಂದಲೂ ಬನವಾಸಿಯ ಸ್ತ್ರೀಯರು ದೇವಸ್ಥಾನ, ಬಸದಿ ಮತ್ತು ಬೌದ್ಧ ವಿಹಾರಗಳನ್ನು ಕಟ್ಟಿಸಿದ ಕುರಿತಾಗಿ ಮಾಹಿತಿಗಳು ಸಿಗುತ್ತವೆ. ಶಾತವಾಹನ ರಾಜರುಗಳು ಬೌದ್ಧಮತಕ್ಕೆ ಪ್ರೋತ್ಸಾಹ ಕೊಡುತ್ತಿದ್ದು ಬನವಾಸಿಯ ಇಕ್ಷ್ವಾಕು ಕುಲದ ಮಹಾರಾಜ ವಾಸಿಟ್ಟಿ ಪುತ್ರ ಚಾಂತಮೂಲನ ಸೋದರಿ ಮಹೀಶಾಸಕ ಬೌದ್ಧಮತದ ಮಹೀಶಾಸಕ ಆಚಾರ್ಯರಿಗಾಗಿ ನಾಗಾರ್ಜುನ ಕೊಂಡದಲ್ಲಿ ಸ್ತಂಭ ಮತ್ತು ವಿಹಾರಗಳನ್ನು ಕಟ್ಟಿಸಿದ್ದಳು.

ಬನವಾಸಿಯ ಮಹಾರಾಜ ಮಹಾಭೋಜಿಯ ಮಗಳೂ, ಮಹಾರಥಿಯ ಪತ್ನಿಯೂ, ಖಂಡ ನಾಗಸತಕ (ಸ್ಕಂದನಾ ಶತಕ)ನ ತಾಯಿಯೂ ಮತ್ತು ಮಹಾಭೋಜ ಲಹಿಜಥೇನನ ತಂಗಿಯೂ ಆದ ನಾಗಮೂಲನಿಕೆಯು ಕಾನ್ಹೇರಿಯಲ್ಲಿ ಬೌದ್ಧ ಭಿಕ್ಷುಗಳಿಗಾಗಿ ಒಂದು ಗುಹಾಲಯವನ್ನು ನಿರ್ಮಿಸಿದುದಾಗಿ ಮಹಾಭೋಜನ ಕಾಲದ ಶಾಸನವೊಂದು ತಿಳಿಯಪಡಿಸುತ್ತದೆ. ಚಾಳುಕ್ಯ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಸೋಮನೃಪನ ಕುಮಾರಿಯರು ಒಂದು ಜಿನಾಲಯವನ್ನು ಕಟ್ಟಿಸಿದ ಬಗ್ಗೆ ಶಿಕಾರಿಪುರದ ಒಂದು ಶಾಸನ (ಕ್ರಿ. ಶ. ಸು. ೧೧೦೦) ತಿಳಿಸುತ್ತದೆ. ಚಕ್ರವರ್ತಿ ಚಾಲುಕ್ಯ ವಿನಯಾದಿತ್ಯ (೬೮೦-೬೯೬)ನಿಗೆ ವಿಜಯಾದಿತ್ಯ ಎಂಬ ಮಗನೂ, ಕುಂಕುಮ ಮಹಾದೇವಿ ಎಂಬ ಮಗಳೂ ಇದ್ದು, ಕುಂಕುಮ ಮಹಾದೇವಿ ಪುಲಿಗೆರೆಯಲ್ಲಿ ಆನೆಸಜ್ಜೆ ಬಸದಿಯನ್ನು ನಿರ್ಮಾಣ ಮಾಡಿಸಿದಳು. ಎರಡನೇ ವಿಕ್ರಮಾದಿತ್ಯ (೭೩೩-೭೪೬)ನ ಪತ್ನಿ ಲೋಕ ಮಹಾದೇವಿ ಪಟ್ಟದ ಕಲ್ಲಿನಲ್ಲಿ ಶಿವನ ಹೆಸರಿನಲ್ಲಿ 'ಲೋಕೇಶ್ವರ ದೇವಾಲಯ'ವನ್ನು ಕಟ್ಟಿಸಿದ್ದಾಳೆ. ಅವಳ ಸೋದರಿ ಮತ್ತು ಸವತಿಯೂ ಆದ ತ್ರೈಲೋಕ್ಯ ಮಹಾದೇವಿಯೂ ಸಹ ಅದರ ಸಮೀಪ 'ಶಿವ ದೇವಾಲಯ'ವನ್ನು ಕಟ್ಟಿಸಿ ಅದಕ್ಕೆ ತ್ರೈಲೋಕೇಶ್ವರ ಎಂದು ನಾಮಕರಣ ಮಾಡಿದಳು. ಲೋಕೇಶ್ವರ ದೇವಾಲಯವನ್ನು ಕಟ್ಟಿದ ಸ್ಥಪತಿ 'ಗುಂಡ' ಎಂಬುವವನನ್ನು ಲೋಕ ಮಹಾದೇವಿಯು ಸನ್ಮಾನಿಸಿ ಆತನಿಗೆ 'ತ್ರಿಭುವನಾಚಾರಿ', 'ತೆಂಕಣದಿಶಾಸೂತ್ರಧಾರಿ', 'ಅನಿವಾರಿತಾಚಾರಿ' ಎಂಬ ಬಿರುದುಗಳನ್ನೂ 'ಮೂಮೆ ಪೆರ್ಜರೆಪುಪಟ್ಟ' ನೀಡಿ ಮರ್ಯಾದೆ ಮಾಡಿದ್ದಾಳೆ. ತಮ್ಮ ಪತಿಯು ಪಲ್ಲವರನ್ನು ಗೆದ್ದ ಕುರುಹಾಗಿ ಇವರಿಬ್ಬರೂ ಈ ಎರಡು ದೇವಸ್ಥಾನಗಳನ್ನು ಕಟ್ಟಿಸಿದರು.

ಕಲ್ಯಾಣ ಚಾಲುಕ್ಯ ಚಕ್ರವರ್ತಿಯಾದ ಐದನೇ ವಿಕ್ರಮಾದಿತ್ಯನ ತಂಗಿಯೂ, ಇಮ್ಮಡಿ ಜಯಸಿಂಹನ ಅಕ್ಕನೂ, ಕ್ರಿ. ಶ. ೧೦೬೬ರಲ್ಲಿ ಬನವಾಸಿ ೧೨೦೦೦ ಮಹಾಮಂಡಳೇಶ್ವರನಾಗಿದ್ದ ಕದಂಬ ತೋಯಿಮದೇವನ ತಾಯಿಯೂ ಆಗಿ, ಬನವಾಸಿಯ ಪರಿಸರ-ಪ್ರಭಾವವನ್ನು ಹೊಂದಿದ್ದ ದಾನಕರ್ತೆ ಅಕ್ಕಾದೇವಿಯು ಹಿಂದೂ ಧರ್ಮ-ಪಂಥಗಳಲ್ಲಿ ಸಾಮರಸ್ಯವನ್ನು ತರಲು ಪ್ರಯತ್ನಿಸಿ ತನ್ನ ವಿಶಾಲ ಮನೋಭಾವ, ಅರಿವು ಮತ್ತು ಉನ್ನತ ಆಲೋಚನೆಗಳ ಬಗ್ಗೆ ಪರಿಚಯ ಕೊಟ್ಟಿದ್ದಾಳೆ. ಈಕೆ, 'ಜೈನ, ಬೌದ್ಧ, ಅನಂತ (ವಿಷ್ಣು), ರುದ್ರ – ಈ ಸಂಬಂಧವಾದ ಪ್ರಕ್ರಿಯೆಗಳಲ್ಲಿ ವಿಧಿಸಿರುವ ಪ್ರಕಾರ ವ್ರತಗಳನ್ನು ನಡೆಸುತ್ತಿದ್ದಳು' ಎಂದು ಕ್ರಿ. ಶ. ೧೦೨೨ನೇ ಸಾಲಿನ ಬೇಲೂರು ಶಾಸನದಲ್ಲಿ ವರ್ಣಿಸಲಾಗಿದೆ. ಅಲ್ಲದೆ ಈಕೆ 'ತ್ರೈ ಪುರುಷ' ದೇವಾಲಯವನ್ನೂ ಕಟ್ಟಿಸಿದ್ದಳು.

**ವಿವಾಹ :** ಸಾಮಾನ್ಯವಾಗಿ ಹಿರಿಯರೇ ಮಕ್ಕಳ ಮದುವೆಗಳ ವ್ಯವಸ್ಥೆಯನ್ನು ಮಾಡುತ್ತಿದ್ದರು ಹಾಗೂ ಪ್ರಚಲಿತ ಸಂಪ್ರದಾಯಗಳಿಗನುಸಾರ ವಿವಾಹ ಕಾರ್ಯವನ್ನು ನೆರವೇರಿಸುತ್ತಿದ್ದರು. ಕದಂಬ ಶಾಂತಿವರ್ಮ ಚಕ್ರವರ್ತಿಯ ಮಗ ಮೃಗೇಶವರ್ಮನು ಕೇಕಯ ರಾಜನ ಮಗಳು ಪ್ರಭಾವತಿಯನ್ನೂ, ವಾಕಾಟಕ ನರೇಂದ್ರಸೇನನು ಕಾಕುತ್ಸವರ್ಮನ ಹಿರಿಯ ಮಗಳಾದ ಅಜಿತ ಭಟ್ಟಾರಿಕೆಯನ್ನೂ; ಗಂಗಬೂತುಗನು ರಾಷ್ಟ್ರಕೂಟ ಅಮೋಘವರ್ಷ (೮೧೪-೮೮೦)ನ ಮಗಳು ರೇವಕ ನಿಮ್ಮಡಿಯನ್ನೂ; ಕದಂಬ ಶಾಂತಿವರ್ಮನು (೧೦೭೫-

೧೦೯೪) ಪಾಂಡ್ಯ ರಾಜಕುಮಾರಿ ಸಿರಿಯಾದೇವಿಯನ್ನೂ; ಎರಡನೇ ವಿಕ್ರಮಾದಿತ್ಯ (೭೩೩-೭೪೬)ನು ಕಲಚುರಿ ಮನೆತನದ ರಾಜಕುಮಾರಿ ಲೋಕ ಮಹಾ ದೇವಿಯನ್ನೂ; ಕಲ್ಯಾಣ ಚಾಲುಕ್ಯರ ಮೊದಲನೇ ಅಯ್ಯಣನು ರಾಷ್ಟ್ರಕೂಟರ ಚಕ್ರವರ್ತಿ ಇಮ್ಮಡಿ ಕೃಷ್ಣ (೮೮೦-೯೧೨)ನ ಮಗಳು ಕೃಷ್ಣನಂದನೆಯನ್ನೂ ವಿವಾಹವಾಗಿದ್ದನ್ನು ಗಮನಿಸಿದರೆ ಸ್ವಾಭಾವಿಕವಾಗಿ ಸಮಾನ ವರ್ಗದ ಮನೆತನದಲ್ಲೇ ಮದುವೆಯ ಮೂಲಕದ ನೆಂಟಸ್ತನ ಬೆಳೆಸುತ್ತಿದ್ದರು ಎನ್ನಬಹುದು. ಇದೇ ರೀತಿ, ಕಾಕುಸ್ಥವರ್ಮನು ತನ್ನ ಇನ್ನಿಬ್ಬರು ಹೆಣ್ಣು ಮಕ್ಕಳಿಗೆ ಗುಪ್ತ ಅರಸುಮನೆತನದ ಕುಮಾರ ಗುಪ್ತನಿಗೆ ಹಾಗೂ ಆಳುಪ ಕುಲದ ಪಶುಯಪತಿಗೆ ಮದುವೆ ಮಾಡಿದ್ದನು. ಚಾಲುಕ್ಯ ವಿನಯಾದಿತ್ಯನ ಮಗಳು ಕುಂಕುಮ ಮಹಾದೇವಿಯನ್ನು ಆಳುಪ ಅರಸನೊಬ್ಬನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಸಮಾನ ಅರಸರಲ್ಲಿ ಸಾಮಂತ ಮಾಂಡಲಿಕ, ದಂಡನಾಯಕರ ಮನೆತನಗಳೊಂದಿಗೆ ಸಂಬಂಧ ಮಾಡಲಾಗುತ್ತಿತ್ತು. ತಮ್ಮ ರಾಜ್ಯದ ಸೀಮೆಯ ರಕ್ಷಣೆಗೆ ನೆರವು ನೀಡಬಹುದಾದಂತಹ ಅಥವಾ ಬಾಧಕವಾಗಬಹುದಾದಂತಹ ರಾಜರ ಮಕ್ಕಳೊಂದಿಗೆ ವಿವಾಹದ ಮೂಲಕ ಸಂಬಂಧ ಬೆಳೆಸಿ, ರಾಜ್ಯದ ಸೀಮಾ ಭದ್ರತೆ, ಪ್ರಜಾ ಕ್ಷೇಮ ಸೌಹಾರ್ದತೆಗಳನ್ನು ರಕ್ಷಿಸಿಕೊಳ್ಳುವ ಪರಿಪಾಠವಿತ್ತು. ಚಾಲುಕ್ಯ ಅಕ್ಕಾದೇವಿಗೆ ಸಾಮಂತ ಕದಂಬ ಮಯೂರ ವರ್ಮನೊಂದಿಗೆ ಮದುವೆ ಮಾಡಲಾಗಿತ್ತು. ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಮಗಳು ಮೈಳಲದೇವಿಗೆ ಸಾಮಂತ, ಗೋವಾ ಕದಂಬ ಜಯಕೇಶಿಯೊಂದಿಗೆ ಮದುವೆ ಮಾಡಲಾಗಿದ್ದು ಇದರಲ್ಲಿ ಮಗಳ ಸುಖ-ಸಂತೋಷದ ದೃಷ್ಟಿ ಮಾತ್ರವಲ್ಲ, ಆ ಸಮಯದಲ್ಲಿ ಬೆಳೆಯತೊಡಗಿದ ಹೊಯ್ಸಳ ವಿಷ್ಣುವರ್ಧನನಿಂದ, ತನ್ನ ರಾಜ್ಯದ ಗಡಿಭಾಗಗಳನ್ನು, ಪ್ರಜೆಗಳ ಶಾಂತಿ-ಸಮಾಧಾನಗಳನ್ನು ಕಾಪಾಡಿಕೊಳ್ಳುವ ಉದ್ದೇಶವೂ ಇತ್ತು. ಇಮ್ಮಡಿ ತೈಲನ ನಂತರ ಚಕ್ರವರ್ತಿಯ ಪಟ್ಟಕ್ಕೇರಿ ಬಂದ ಅವನ ಮಗ 'ಇರಿವ ಬೆಡಂಗ' ಬಿರುದಿನ ಸತ್ಯಾಶ್ರಯ (೯೯೭-೧೦೦೮)ನ ಮಗಳೊಬ್ಬಳನ್ನು, ಇರಿವ ನೊಳಂಬಾಧಿರಾಜನೆಂಬ ಮಾಂಡಳಿಕ ರಾಜನಿಗೆ ಮದುವೆ ಮಾಡಿ ಕೊಟ್ಟಿದ್ದು, ಈತ ಹಲವಾರು ವಿಭಾಗಗಳ ಅಧಿಪತಿಯಾಗಿದ್ದ. ಆರನೆಯ ವಿಕ್ರಮಾದಿತ್ಯ ವಿಭಿನ್ನ ವರ್ಗದ ಹದಿನಾರು ರಾಜಕುವರಿಯರನ್ನು ವಿವಾಹವಾಗಿ ತನ್ನ ವಿಸ್ತಾರ ರಾಜ್ಯವನ್ನು ಭದ್ರಗೊಳಿಸಿಕೊಂಡಿದ್ದ.

ಹಿರಿಯರಿಂದ ವ್ಯವಸ್ಥಿತವಾದ ಮದುವೆಗಳಲ್ಲದೆ ಪ್ರೇಮ ವಿವಾಹ, ಸ್ವಯಂವರ ಮತ್ತು ರಾಕ್ಷಸ ವಿವಾಹಗಳೂ ನಡೆಯುವುದು ಸಹಜವೇ ಆಗಿದ್ದು ಇಂತಹ ಒಂದೆರಡು ಮದುವೆಗಳ ಸಂಗತಿಗಳೂ ದಾಖಲೆಗೆ ಸಿಗುತ್ತವೆ. ಶಿಲಾಹಾರ ಮನೆತನದ ಚಂದಲಾ ದೇವಿಯು ಸ್ವಯಂವರ ಪದ್ಧತಿಯ ಮೂಲಕವೇ ಆರನೇ ವಿಕ್ರಮಾದಿತ್ಯನನ್ನು ವಿವಾಹವಾಗಿದ್ದಳು ಎಂಬ ಅಂಶವನ್ನು ಕವಿ ಬಿಲ್ಹಣನ 'ವಿಕ್ರಮಾಂಕ ಚರಿತ'ದಲ್ಲಿ ವಿವರಿಸಲಾಗಿದೆ. ಸ್ವಯಂವರದ ವಾರ್ತೆ ಪಡೆದ ವಿಕ್ರಮ ಸ್ವಯಂವರದ ಮಂಟಪಕ್ಕೆ ಬಂದು ಕುಳಿತಾಗ ಚಂದಲಾದೇವಿ ಇತರ ರಾಜಪುತ್ರರನ್ನು ತಿರಸ್ಕರಿಸಿ ವಿಕ್ರಮಾದಿತ್ಯನನ್ನು ಮೆಚ್ಚಿ




ಹಾರ ಹಾಕಿದ್ದಳು. ಇದೇ ರೀತಿ ಇನ್ನೊಂದು ಪ್ರಕರಣ ನವಸಾರಿ ಶಾಸನದಲ್ಲಿದೆ. ''ಚಾಲುಕ್ಯ ವಂಶ ಜಲಧೇಃ ಸ್ವಯಮೇವ ಲಕ್ಷ್ಮೀರ್ಯಂ ಶಂಖ ಚಕ್ರ ಕರ ಲಾಂಛನ ಮಾಜಗಾಮ'', ಎಂಬ ಶಾಸನದ ಹೇಳಿಕೆಯನ್ನು ವಿದ್ವಾಂಸರೊಬ್ಬರು, ''ಚಾಲುಕ್ಯ ವಂಶ ಜಲಧಿಯಿಂದು ದ್ಭವಿಸಿದ ಆ ಲಕ್ಷ್ಮೀ ನಾಮಕ ರಾಜಕುಮಾರಿಯು ಶಂಖ ಚಕ್ರ ಕರ ಲಾಂಛನನಾದ ದಂತಿದುರ್ಗನನ್ನು ಸ್ವಯಂವರಿಸಿದಳು'' ಎಂದು ಅರ್ಥೈಸಿದ್ದಾರೆ. ಅಂದರೆ, ತಮಗೆ ಅನುರೂಪನಾದವನನ್ನು ಆಯ್ಕೆ ಮಾಡಿಕೊಳ್ಳಲು ಉನ್ನತ ವರ್ಗದ ಹೆಣ್ಣು ಮಕ್ಕಳಿಗೆ ಸ್ವಾತಂತ್ರ್ಯವಿತ್ತು ಎಂಬುದಕ್ಕೆ ಈ ಎರಡು ಪ್ರಕರಣಗಳು ನಿದರ್ಶನಗಳಾಗುತ್ತವೆ.

ಮೊದಲನೇ ಅಮೋಘವರ್ಷ (ಕ್ರಿ.ಶ. ೮೧೪-೮೮೦)ನ ಸಂಜಾನ ತಾಮ್ರ ಶಾಸನದಲ್ಲಿ ''ಇಂದ್ರ ರಜಸ್ತ್ತೋ ಗೃಹ್ಣಾತ್ ಯಶ್ಚಾಲುಕ್ಯ ನೃಪಾತ್ಮಜಾಂ ರಾಕ್ಷಸೇನ ವಿವಾಹೇನ ರಣೇ ಖೇಟಕಮಂಡಲೇ'', ಎಂಬ ಉಲ್ಲೇಖವಿದ್ದು ಇದರ ಪ್ರಕಾರ ಇಂದ್ರ ರಾಜನೆಂಬವ ಖೇಟಕ ಮಂಡಲದ ಯುದ್ಧದಲ್ಲಿ ಚಾಲುಕ್ಯ ರಾಜಕುವರಿಯನ್ನು ಅಪಹರಿಸಿ ತಂದು ರಾಕ್ಷಸ ವಿವಾಹ ಮಾಡಿಕೊಂಡಿದ್ದನೆಂದೂ, ಅಪರೂಪಕ್ಕಾದರೂ ಇಂಥ ವಿವಾಹಗಳು ನಡೆಯುತ್ತಿದ್ದವೆಂದೂ ತಿಳಿಯುತ್ತದೆ.

ವಿವಾಹವಾದ ನಂತರ ಹೆಣ್ಣಿನ ತವರಿನವರು, ಮಗಳು-ಅಳಿಯನಿಗೆ ಬಿಟ್ಟುಕೊಟ್ಟ ಬಳುವಳಿಗಳ ಬಗ್ಗೆ ಕೆಲವು ಶಾಸನಗಳಲ್ಲಿ ಉಲ್ಲೇಖವಿದ್ದು, ವರ-ದಕ್ಷಿಣೆಯನ್ನು ಭಿನ್ನ ಹೆಸರಿನಲ್ಲಿ ಕೊಡುವ ಪದ್ಧತಿ ಇದ್ದಿರಬಹುದಾಗಿದೆ.

**ಬಹುಪತ್ನಿತ್ವ ಮತ್ತು ಹೆಣ್ಣಿನ ಬಳಕೆ :** ಅಧಿಕಾರ, ಸ್ವಾತಂತ್ರ್ಯಗಳೇನೇ ಇದ್ದರೂ, ಅನ್ನದಾನ, ಭೂದಾನ, ಬಂಗಾರ ದಾನ, ವಸ್ತ್ರ ದಾನ ಇತ್ಯಾದಿ ದಶದಾನಗಳಲ್ಲಿ ಕನ್ಯಾದಾನವೂ ಒಂದಾಗಿದ್ದು, ಹೆಣ್ಣನ್ನೂ ಕೂಡ ಇತರ ವಸ್ತುಗಳಂತೆ ಮತ್ತು ಒಂದು ಆಸ್ತಿಯಂತೆ ಪರಿಗಣಿಸಲಾಗುತ್ತಿತ್ತೆಂಬುದೂ ಸತ್ಯ. ಆದ್ದರಿಂದಲೇ ಹೆಚ್ಚು ಭೂಮಿ ಮತ್ತು ರಾಜ್ಯಗಳ ಒಡೆಯನಾದವನಿಗೆ ಹೇಗೆ ಮನ್ನಣೆ ಇತ್ತೋ ಹಾಗೆಯೇ, ಹೆಚ್ಚು ಪತ್ನಿಯರನ್ನು ಹೊಂದಿ, ಆರ್ಥಿಕವಾಗಿ ಉತ್ತಮ ಜೀವನ ನಿರ್ವಹಿಸುತ್ತಿದ್ದ ಪುರುಷನಿಗೂ ಆರ್ಥಿಕ ಅಂತಸ್ತಿನ ಅಳತೆಗೋಲಾಗಿ ಹೆಚ್ಚು ಮನ್ನಣೆ ನೀಡಲಾಗುತ್ತಿತ್ತು. ಹೆಚ್ಚು ಸಂಖ್ಯೆಯ ಕುಟುಂಬಗಳನ್ನು ನಿರ್ವಹಿಸುವ ಶಕ್ತಿ ಸಹಜವಾಗಿಯೇ ರಾಜ್ಯದ ದೊರೆಗೆ ಹೆಚ್ಚಾಗಿರುವ ಕಾರಣ, ಬಹುಪತ್ನಿಯರನ್ನು ಹೊಂದಿದ ಪ್ರಕರಣಗಳೂ ಅರಸರಲ್ಲೇ ಹೆಚ್ಚಾಗಿ ಕಾಣಸಿಗುತ್ತವೆ.

**ಆಭರಣ ಮತ್ತು ಉಡುಪುಗಳು :** ಶಾತವಾಹನರ ಕಾಲದಿಂದ ಸು. ೧೦೦೦ದವರೆಗೆ, ಜನರು ಅತ್ಯಲ್ಪ ಉಡುಪುಗಳನ್ನೂ, ಹೆಚ್ಚಿನ ಆಭರಣಗಳನ್ನೂ ಧರಿಸುತ್ತಿದ್ದರು.

**ಶಕ್ತಿಯಾಗಿ ಸ್ತ್ರೀ :** ವಾಸ್ತವದಲ್ಲಿ ಸ್ತ್ರೀಯರ ಸ್ಥಿತಿ-ಗತಿಗಳು ಏನೇ ಇರಲಿ, ಪೂಜಿಸುವ ಕ್ಷೇತ್ರದಲ್ಲಿ, ತಮ್ಮ ಸಕಲ ಇಷ್ಟಾರ್ಥ ಸಿದ್ಧಿ-ಸಾಧನೆಗಳಿಗೆ ಹಲವು ಅರಸರು ಮೊರೆ ಹೋಗುತ್ತಿದ್ದುದು ಸ್ತ್ರೀ-ಶಕ್ತಿಗೇ. ಬನವಾಸಿಯಲ್ಲಿ ಆಳಿದ ಕದಂಬ ಚಕ್ರವರ್ತಿಗಳು ಆಶ್ರಯಿಸಿದ್ದು 'ಅಂಬೆ'ಯನ್ನು, 'ಉಚ್ಚಂಗಮ್ಮ' ಅಥವಾ 'ಉತ್ಸವಾಂಬೆ'ಯನ್ನು. ಮೃಗೇಶ ವರ್ಮನು ಅಂಬಾದೇವಿಯ ಆಶ್ರಿತನೆಂಬುದನ್ನು ಅವನ ತಾಮ್ರ ಪಟದ 'ಆಶ್ರಿತಾಂಬಾನಾಂ' ಎಂಬ ಹೇಳಿಕೆಯಿಂದಲೂ, ಕದಂಬರ ಹಲವು ಶಾಸನಗಳಲ್ಲಿ 'ಉಚ್ಚಂಗಿ ಗಿರಿನಾಥ, ಉಚ್ಚಂಗಿ ಪುರವರಾಧೀಶ' ಎಂಬ ಬಿರುದುಗಳ ಉಲ್ಲೇಖದಿಂದಲೂ ಹೇಳಬಹುದಾಗಿದೆ. ಉಚ್ಚಂಗಮ್ಮನ ದೇವಾಲಯಗಳಿರುವ ಚಂದ್ರಗುತ್ತಿ ಮತ್ತು ಉಚ್ಚಂಗಿ ದುರ್ಗವೂ ಕದಂಬ ರಾಜ್ಯದ ಮುಖ್ಯ ಪಟ್ಟಣಗಳು. ಉಚ್ಚಂಗಿ ದುರ್ಗ ಅವರ ಮೂರು ಪ್ರಮುಖ ರಾಜಧಾನಿಗಳಲ್ಲಿ ಒಂದು.

ಮಹಿಳೆಯರು ತುಂಬ ಪ್ರಗತಿ ಸಾಧಿಸಿದ್ದರು ಮತ್ತು ಅವರು ಪುರುಷನಿಗೆ ಸಮಸಮವಾದ ಸ್ಥಾನಮಾನಗಳನ್ನು ಹೊಂದಿದ್ದರು ಎನ್ನಬೇಕಾದರೆ ಆ ಸಮಾಜದ ಕೆಳ ದರ್ಜೆಯ ವರೆಗಿನ ಮಹಿಳೆಯರನ್ನೂ ಗಮನದಲ್ಲಿಟ್ಟುಕೊಂಡು ಹೇಳಬೇಕಾಗಿರುವುದರಿಂದ, ಎರಡನೇ ಶತಮಾನದಿಂದ ಹನ್ನೆರಡನೇ ಶತಮಾನದವರೆಗಿನ ದೀರ್ಘ ಅವಧಿಯಲ್ಲಿ ಇದ್ದ ಲಕ್ಷಗಟ್ಟಲೆ ಸ್ತ್ರೀಯರಲ್ಲಿ ಸಿಗುವ ಕೇವಲ ಬೆರಳೆಣಿಕೆಯಷ್ಟೇ ಮಹಿಳೆಯರನ್ನು ನಿದರ್ಶನಗಳಾಗಿ ನಿಲ್ಲಿಸಿ ಈ ಮಾತನ್ನು ಹೇಳಲಾಗುವುದಿಲ್ಲ. ದೀರ್ಘ ಎನ್ನುವಷ್ಟು ಕಾಲ ರಾಜ್ಯವಾಳಿದ ಒಬ್ಬ ಅಕ್ಕಾದೇವಿ ಅಥವಾ ಲೋಕಮಹಾದೇವಿ, ಒಂದೆರಡು ವರ್ಷಗಳ ಕಾಲ ರಾಜ್ಯ ಪಾಲೆಯಾದ ಮೈಳಲದೇವಿ, ಒಬ್ಬ ವಿಜಯ ಭಟ್ಟಾರಿಕೆ ಇವರುಗಳು ಕೇವಲ ಒಂದೆರಡು ಉದಾಹರಣೆಗಳಾಗಿರಬಹುದೇ ವಿನಃ ಸಂಪೂರ್ಣ ಬನವಾಸಿ ಇತಿಹಾಸದ ಎಲ್ಲ ಮಹಿಳಾ ಸಮೂಹದ ಪ್ರತಿಬಿಂಬಗಳು ಎಂದೇನೂ ಹೇಳಲಾಗುವುದಿಲ್ಲ. ಆದಾಗ್ಯೂ ಈ ನಿದರ್ಶನಗಳನ್ನೇ ಅವಲಂಬಿಸಿ ಮಹಿಳೆಯರು ಮಾಡಿರುವ ದಾನ-ದತ್ತಿ-ಧರ್ಮದ ಕೆಲಸಗಳನ್ನೂ ಪರಿಗಣನೆಗೆ ತೆಗೆದುಕೊಂಡರೆ, ಆರನೇ ಶತಮಾನದಿಂದ ಮುಂದಕ್ಕೆ ಮಹಿಳೆಯು, ಆರ್ಥಿಕ, ರಾಜಕೀಯ ಮತ್ತು ನಾಗರಿಕ ಸ್ವಾತಂತ್ರ್ಯವನ್ನು ಹೊಂದಿದ್ದು ಅವರ ಸ್ಥಾನಮಾನಗಳು ಅಷ್ಟೊಂದು ನಿರಾಶಾದಾಯಕವಾಗಿರಲಿಲ್ಲ ಎಂದು ಭಾವಿಸಬಹುದು.

**ಕೆ. ಎಂ. ವಿಜಯಲಕ್ಷ್ಮಿ**
ನಂ. ೫೯, ೪೦ನೇ ಅಡ್ಡರಸ್ತೆ, ೬ನೇ ಮೇನ್, ೫ನೇ ಬ್ಲಾಕ್
ಜಯನಗರ, ಬೆಂಗಳೂರು - ೫೬೦ ೦೪೧



# ಹೃದಯಕ್ಕೆ ತಟ್ಟುವ ಅಂಕಣ ಬರಹ

'**ಬೊ**ಗಸೆಯಲ್ಲಿ ಮಳೆ' ಎನ್ನುವುದೇ ಒಂದು ಕಾವ್ಯ ಪ್ರತಿಮೆ. ಮಳೆ ಜೀವನ ಪ್ರೀತಿಯ ಸಂಕೇತ. ಇಂದಿನ ಗದ್ದಲದ ಅವಸರದ ಬದುಕಿನಲ್ಲಿ ಜೀವನ ಪ್ರೀತಿಯನ್ನು ಮಾನವೀಯ ತುಡಿತವನ್ನು ಮಣ್ಣಿನಲ್ಲಿ ಎಲ್ಲೆಲ್ಲೊ ಹುಗಿದುಬಿದ್ದ ಕಾಳನ್ನು ಕೋಳಿ ಹುಡುಕಿ ಹುಡುಕಿ ಆರಿಸಿ ತೆಗೆಯುವಂತೆ ಕಂಡುಕೊಳ್ಳಬೇಕಾಗಿದೆ. ಅಂಥ ಕಾಳನ್ನು ಆರಿಸಿ ಹಿಡಿದ ಬೊಗಸೆ ಜಯಂತ ಕಾಯ್ಕಿಣಿಯವರ ಅಂಕಣ ಬರಹ, 'ಬೊಗಸೆಯಲ್ಲಿ ಮಳೆ.'

೧೯೯೭ರಿಂದ ೧೯೯೯ರ ತನಕದ ಎರಡು ವರ್ಷಗಳಲ್ಲಿ 'ಹಾಯ್ ಬೆಂಗಳೂರು' ಪತ್ರಿಕೆಗೆ ಬರೆದ ಅಂಕಣ ಇವು. ಅಂಕಣ ಬರಹಕ್ಕೂ ನಿತ್ಯದ ಬದುಕೇ ಸ್ಫೂರ್ತಿ, ಸಾಮಗ್ರಿ. ಆದರೆ ಉಳಿದೆಷ್ಟೋ ಅಂಕಣಗಳು (ನಮ್ಮ ಹಿರಿಯ ಅಂಕಣಕಾರರದ್ದೂ ಕೂಡ) ತಮ್ಮ ಮಂಡನಾ ಕ್ರಮ ಮತ್ತು ಇತರ ಸಾಹಿತ್ಯಿಕ ಗುಣದಿಂದ ತಾಳಿಕೆ ಬರುವಂಥವು. ಆದರೆ ಜಯಂತರದ್ದು ಅದರ ಕಾವ್ಯಗುಣದಿಂದಲೂ, ವಸ್ತುವಿನ ಆಪ್ತತೆಯಿಂದಲೂ ಬಹುಕಾಲ ಬಹುಶಃ ಈಗಿನ ವ್ಯವಸ್ಥೆ ಬದಲಾಗುವವರೆಗೂ ಆಮೇಲೆ ಹಿಂದಿನ ದಾಖಲೆ ಯಾಗಿಯೂ ಇರುವಂಥವು. ಎಲ್ಲವೂ ಚಿಕ್ಕ ಬರಹ. ಒಂದೂವರೆಯಿಂದ ಎರಡು ಪುಟಕ್ಕೆ ಮುಕ್ತಾಯ ಹೊಂದುವಂಥವು. ಇಂಥ ಅಂಕಣದಲ್ಲಿ ಪ್ರತಿಯೊಂದು ವಾಕ್ಯವನ್ನೂ, ಬಹಳ ಸಾರಿ ಪ್ರತಿಯೊಂದು ಪದವನ್ನೂ ಇಷ್ಟು ಶ್ರದ್ಧೆಯಿಂದ ಗಮನಿಸಿ ಬರೆದ ಗದ್ಯ ಅಪರೂಪವೆ.




**ಅಭಿನವ ಪ್ರಕಾಶನ, ಪುಟ : 304, ಬೆಲೆ : ರೂ. 100**

ಪುಸ್ತಕದ ಮೊದಲ ಅಂಕಣ 'ಜಾಗರದ ಜೀವಗಳಿಗೆ' ಎನ್ನುವುದರಲ್ಲಿ ಹಗಲು ಮುಗಿದು ರಾತ್ರಿ ಕೌಂಚಿಕೊಂಡಾಗ ನಾಳಿನ ಹಗಲಿಗಾಗಿ ಹೊಟೆಲ್, ಮನೆ ಮೊದಲಾದವುಗಳಲ್ಲಿ ನಡೆಯುವ ಚಟುವಟಿಕೆ - ಜಾಗರಣೆಯ ಬಗ್ಗೆ ಬರೆಯುತ್ತ ಮುಂಜಾನೆ ಕೆಲಸಕ್ಕೆ ಹೋಗಬೇಕಾದ ಕಾರ್ಮಿಕನೊಬ್ಬ ದಾಡಿ ಮಾಡಿಕೊಳ್ಳುವಾಗಿನ ಒಂದು ವಾಕ್ಯ ಹೀಗಿದೆ: ''ಅವನು ಆಕಳಿಸಿದಷ್ಟೂ ಅವನ ದಾಡಿಗೆ ಅನುಕೂಲವಾಗಿದೆ''. ಸರಿಯಾಗಿ ಆಹಾರವೇ ಇಲ್ಲದ ಹೊಂಡಬಿದ್ದ ಕೆನ್ನೆಯನ್ನು ಹಾಗೇ ಕೂದಲು ತೆಗೆಯಲು ಆಗುತ್ತಿಲ್ಲ, ಆಕಳಿಕೆ ಮೂಡಿದರೆ ಕೆನ್ನೆಯ ಹೊಂಡ ಹರಡಿಕೊಂಡು ಚರ್ಮ ಸಪಾಟಾಗಿ ಕೂದಲನ್ನು ಒರಸಲು ಬ್ಲೇಡಿಗೆ ಅನುಕೂಲವಾಗುತ್ತದೆ. ಈ ಒಂದು ವಾಕ್ಯದಿಂದ ಕಾರ್ಮಿಕನ ದಾರುಣತೆಯನ್ನು ಚಿತ್ರಿಸುವ ನೈಪುಣ್ಯ ಕವಿತೆಗೇ ಮಾತ್ರ ಯಾಕೆ ಮೀಸಲಾಗಿರಬೇಕು, ಅಲ್ಲವೇ ?

ಬಟವಾಡೆಯಾಗದೇ ಮರಳಿದ ಪತ್ರಗಳು ಮರಣದಂಡನೆ ಆದವರಂತೆ ಪ್ರಧಾನ ಅಂಚೆ ಕಚೇರಿಯಲ್ಲಿ ಕೂತಿವೆ. ಇಲ್ಲಿಯ ಉಪಮಾನದ ಹೊಸತನ ಎಷ್ಟು ಸೊಗಸು ! ಹಾಗೆಯೇ ಗಾಯ ನೋವುಗಳ ತಪಶೀಲು ನಡೆಸುತ್ತ ಇಡೀ ಒಂದು ಹಗಲು ಬಾಗಿಲಲ್ಲಿ ರದ್ದಿಯಾಗುತ್ತ ಬಿದ್ದುಕೊಂಡಿದೆ. ''ಬಾಲವನದ ಕೊಂಬೆಯಲ್ಲಿ'' ಬರಹ ಒಮ್ಮೆ ಗೌರೀಶ ಕಾಯ್ಕಿಣಿ ಅವರು ಮಣಿಪಾಲಿನ ಆಸ್ಪತ್ರೆಯಲ್ಲಿ ಶುಶ್ರೂಷೆ ಹೊಂದುತ್ತಿದ್ದಾಗ ಅವರನ್ನು ಕಾಣಲು ಬಂದ ಶಿವರಾಮ ಕಾರಂತರ ಭೆಟ್ಟಿಗೆ ಸಂಬಂಧಿಸಿದ್ದು. ''ಇಡೀ ಆಸ್ಪತ್ರೆಯ ಮಂಕು ಹೊಡೆದೋಡಿಸುವಷ್ಟು ತೇಜಸ್ವಿಯಾದ ವ್ಯಕ್ತಿ ಪುಟ್ಟ ಊರುಗೋಲೂರಿ ಇಳಿಯುತ್ತದೆ. ಇದು ಕಾರಂತಜ್ಜ. ತೊಂಬತ್ತಾರು ಶ್ರಾವಣಗಳಿಂದ ಹಸಿರಾದ ತೋರಣದಂಥ ಜೀವ.'' ಇಲ್ಲಿ ನೋಡಿ, ಅದು ತೊಂಬತ್ತಾರು ವಸಂತ ಕಂಡದ್ದಲ್ಲ: ಶ್ರಾವಣವನ್ನು ಕಂಡದ್ದು. 'ಶ್ರಾವಣ' ಎನ್ನುವ ಪದವೇ ಜೀವಶಕ್ತಿಗೆ, ಶ್ಯಾಮಲಕ್ಕೆ, ಹಕ್ಕಿಗಳ ಕಲರವಕ್ಕೆ ಆರೋಗ್ಯಪೂರ್ಣ ವಾತಾವರಣಕ್ಕೆ ಬಿಸಿಲು-ಮೋಡಗಳ ನೆರಳಾಟಕ್ಕೆ ಹೆಸರಾದುದಲ್ಲವೇ ? ಕಾರಂತರನ್ನು ಬಲ್ಲವರಿಗೆ ಗೊತ್ತು ಅವರ ವ್ಯಕ್ತಿತ್ವಕ್ಕೆ ಎಷ್ಟೊಂದು ಔಚಿತ್ಯಪೂರ್ಣವಾದವು ಈ ವಾಕ್ಯಗಳೆಂದು. ಇಂಥವನ್ನು ಅನೇಕವನ್ನು ಆರಿಸಿ ಕೊಡಬಹುದು. ಆದರೆ ಹಾಗೆ ಮಾಡುತ್ತ ಹೋದರೆ ಬರಹದ ಒಂದು ಭಾಗವನ್ನು ಮಾತ್ರ ಹೇಳಿ ಮುಖ್ಯವಾದುದನ್ನು ಮರೆತಂತಾದೀತು.

೯೧ ಬರಹಗಳಲ್ಲಿ ಮುಖ್ಯವಾದುವನ್ನು ಮಾತ್ರ ಗುರುತಿಸಿಕೊಳ್ಳುವ ಎಂದು ಓದಿ ಆಗುತ್ತಿದ್ದಂತೆ ಪೆನ್ನಿನಿಂದ ಗುರುತು ಮಾಡುತ್ತ ಹೋದೆ. ಆದರೆ ಅರ್ಧ ಪುಸ್ತಕ ಮುಗಿದ ಮೇಲೆ ತಿರುಗಿ ನೋಡಿದರೆ ನಾನು ಗುರುತಿಸದೇ ಬಿಟ್ಟದ್ದು ಯಾವುದೂ ಇಲ್ಲ! ಆದ್ದರಿಂದ ಈ ಕ್ರಮ ಬೇಡವೆಂದು ಸುಮ್ಮನೆ ಓದಬೇಕಾಯಿತು.

ಇದಕ್ಕೆ ಕಾರಣವೇನು ಎಂದು ನಿಂತು ನೋಡಿದರೆ ಜಯಂತ ಗ್ರಹಿಸುವ ಬದುಕಿನ ವಿಶಿಷ್ಟತೆಯೇ ಕಾರಣ, ಎನ್ನುವುದು ಮನದಟ್ಟಾಗುತ್ತದೆ. ಅವರ 'ನೀಲಿ ಶಾಯಿ' ಕವನ ಸಂಕಲನದ ಇಡೀ ಮನುಕುಲಕ್ಕೆ ಸಾಕಾಗುವಷ್ಟು ಬೆಚ್ಚಗನ್ನು ಹರಡುವ ಟ್ರೇನು ಪ್ರವಾಸದಲ್ಲಿನ ಮುದುಕ, ದಿನದ ಕರ್ತವ್ಯ ಮುಗಿದೊಡನೆ ಗ್ಯಾರೇಜದಲ್ಲಿ ಬಸ್ಸು ನಿಲ್ಲಿಸಿ ತನ್ನ ಸ್ವಂತ ಸೈಕಲ್ ಹತ್ತಿ ತನ್ನ ಪುಟ್ಟ ಮಗುವನ್ನು ಸವಾರಿ ಮಾಡಿಸಿ ಬರುವ ಡ್ರೈವರ್ ಚೆನ್ನ, ಮಾನವರ ಪ್ರೀತಿಯನ್ನು ಹಾರೈಸಿ ಜೀವತಳೆಯುವ ಬೆವಗ್ ಮೊಲ ಎಂಬವೇ ಮುಂತಾದ ವಸ್ತುವೇ ಇಲ್ಲಿ ಶ್ವಾಸೋಚ್ಛ್ವಾಸ ಮಾಡುತ್ತಿದೆ.

'ಒಂಟೆ ಮಕ್ಕಳು'ದಲ್ಲಿ ವಿದೇಶಗಳಿಂದ ಬಡಮಕ್ಕಳನ್ನು ಮಾರಾಟಕ್ಕೆ ಕೊಂಡು ಅರಬಸ್ತಾನಕ್ಕೆ ಒಯ್ದು ಅಲ್ಲಿ ಒಂಟೆ ರೇಸಿನಲ್ಲಿ ಒಂಟೆಗೆ ಓಡಲು ಪ್ರೇರಣೆ ಕೊಡಲು ಉಪಯೋಗಿಸುವುದಕ್ಕೆ ಸಂಬಂಧಿಸಿದ ವರ್ಣನೆ ಇದೆ. ಈ ಆರರಿಂದ ಎಂಟರ ಒಳಗಿನ ಪುಟ್ಟ ಮಕ್ಕಳನ್ನು ಒಂಟೆಯ ಹೊಟ್ಟೆಗೆ ಬಿಗಿಯುತ್ತಾರೆ. ಒಂಟೆ ಓಡಿದಂತೆ ಮಕ್ಕಳು ಹೆದರಿ ಕೂಗುತ್ತಾರೆ. ಕೂಗಿನ ಸದ್ದಿಗೆ ಒಂಟೆ ಇನ್ನೂ ಓಡುತ್ತದೆ. ಇಂಥಾ ಸ್ಪರ್ಧೆಯಲ್ಲಿ ಕೆಲವರು ಬದುಕುತ್ತಾರೆ, ಕೆಲವರು ಸಾಯುತ್ತಾರೆ.

'ಹಾಲ್ಟಿಂಗ್ ಬಸ್ಸಿನ ದೀಪಾವಳಿ' ಒಂದು ಅಪೂರ್ವವಾದ ಬರಹ. ರವೀಂದ್ರನಾಥ ಟಾಗೋರರ 'ಕಾಬೂಲಿವಾಲ'ನ ಹೃದ್ಯತೆಯನ್ನು, ಮಾನವೀಯ ಗುಣವನ್ನು ನೆನಪಿಗೆ ತರುವ ಬರಹ. ದೀಪಾವಳಿ ದಿನ ಬೇರೆಬೇರೆ ಕಡೆಯಿಂದ ಬಂದು ರಾತ್ರಿ ಹಾಲ್ಟ್ ಮಾಡುವ ಬಸ್ಸಿನ ಕಂಡಕ್ಟರ್ ಮತ್ತು ಡ್ರೈವರರು ಆಚರಿಸುವ, ಅದೇ ಹೊತ್ತಿಗೆ ಮನೆಯಲ್ಲಿ ಬಿಟ್ಟುಬಂದ ತಮ್ಮ ಮಕ್ಕಳ ನೆನಪಿನಲ್ಲಿ ಮಾಡುವ ದೀಪಾವಳಿಯ ಚಿತ್ರಣ. ನಿಶ್ಚೇಷ್ಟಿತರಂತಿರುವ ಡ್ರೈವರ್, ಕಂಡಕ್ಟರುಗಳಲ್ಲಿ ಪ್ರೀತಿಯ ಬಯಕೆಗೆ ಜಯಂತ ತಮ್ಮ ಕಲ್ಪನೆಯ – ಬಹುಶಃ ಅದು ವಾಸ್ತವವೇ ಇರಬಹುದು – ಸ್ಪರ್ಶದಿಂದ ಅಮೃತತ್ವ ದಯಪಾಲಿಸಿದ್ದಾರೆ.

'ಕತ್ತಲ ಸಮುದ್ರದಲ್ಲಿ ಹೊಳೆವ ಮೊಂಬತ್ತಿಗಳು' ನರ್ಸು (ದಾದಿಯರು)ಗಳ ಬಗ್ಗೆ ಬರೆದ ಒಂದು ಬರಹ. ಈ ಹೆಸರೇ ಎಷ್ಟೊಂದು ಧ್ವನಿಪೂರ್ಣವಾಗಿದೆ !

''ಸುರಕ್ಷಿತವಾಗಿ ಹೊಳೆ ದಾಟಿಸಿದ ನಾವಿಕನನ್ನು, ಊರು ತಲುಪಿಸಿದ ಚಾಲಕನನ್ನು ಮರೆತೇಬಿಡುತ್ತೇವಲ್ಲ, ಇದೇ ರೀತಿ ಜನತೆಯ ಉದಾಸೀನ ಉಪೇಕ್ಷೆಗಳ ವಿಸ್ಮೃತಿಗೆ ಸಂದು ಹೋಗುವ ನತದೃಷ್ಟ ಜೀವವೊಂದಿದೆ. ಇದಕ್ಕೆ ನರ್ಸ ಅಥವಾ ದಾಯಿ ಎಂದು ಹೆಸರು.

''ಬೆಳಕಿನ ಕುಡಿಗಳಂತೆ ಕತ್ತಲೊಂದಿಗೆ ಸದಾ ಹೋರಾಡುತ್ತಿರುವ, ಹೇಳಹೆಸರಿಲ್ಲದೆ ತೆರೆಮರೆಯಲ್ಲಿದ್ದುಕೊಂಡೇ ರೋಗದ ನರಕ ರೂಪದಲ್ಲಿರುವ ಜಗವನ್ನು ಸಂಜೀವಿನಿ ಕಡ್ಡಿಗಳಂತಿರುವ ತಮ್ಮ ಪುಟ್ಟ ಅಕ್ಷೋಹಿಣಿ ಕೈಗಳಿಂದ ಹಸನು ಮಾಡುತ್ತಿರುವ ಈ ಸಕಲ ಅಕ್ಕತಂಗಿಯರಿಗೆ ಶರಣು.''

'ಚುರುಗುಡುವ ಬೆಳದಿಂಗಳು-ಅರುಣಾ ಶಾನಭಾಗ' ಎಂಬುದು ಕೆಇಎಂ ಆಸ್ಪತ್ರೆಯಲ್ಲಿ ಸ್ಟಾಫ್ ನರ್ಸ ಆಗಿದ್ದ ಅರುಣಾ ಶಾನಭಾಗ ಎಂಬ ಸಾತ್ವಿಕ ವ್ಯಕ್ತಿಯ ಮೇಲೆ ದುಷ್ಟಶಕ್ತಿಯೊಂದು ಸೇಡುಗೊಂಡು ಅತ್ಯಾಚಾರ ಮಾಡಿದ ಕರುಳು ಮಿಡಿಯುವ ಘಟನೆಯದು. ತನ್ನ ನಿಯತ್ತಿನ ಕೆಲಸಕ್ಕೆ ಹೆಸರಾದ ಅರುಣ, ತನ್ನ ಒಳ್ಳೆತನದ್ದಾಗೇ ಜೀವಕ್ಕೆ ಎರವಾಗಬೇಕಾಯಿತು.

**ಡಾ|| ಆರ್. ವಿ. ಭಂಡಾರಿ**

ಇದು ಇಂದಿನ ಸಮಾಜದಲ್ಲಿ ಒಳ್ಳೆತನದ ಮೇಲೆ ಕೆಡುಕಿನ ದಾಳಿಯ ಸಂಕೇತವಾಗಿದೆ.

'ರೋಡ್‌ಬ್ರಿಜ್ ಒಂದು ಮಾಯಾ ಸುರಂಗ' ಎಂದರೆ ಮುಂಬೈ ಉಪನಗರದಲ್ಲಿ ಪೂರ್ವ ಮತ್ತು ಪಶ್ಚಿಮ ಮಾತುಂಗವನ್ನು ಜೋಡಿಸುವ ಝಡ್ (Z) ಆಕಾರದಲ್ಲಿರುವ ಇಕ್ಕಟ್ಟಾದ ಒಂದು ಸೇತುವೆ. ಈ ಬ್ರಿಜ್ ಕೆಳಗಡೆ ರೇಲ್ವೆಯ ನೂರಾರು ಹಳಿಗಳು ಕೂಡುವ ಜಂಕ್ಷನ್ ಇದೆ. ಇದರ ಕುರಿತು ಭಯಾನಕವಾದ ಅನೇಕ ಕತೆಗಳಿವೆ. ನಿಜವಾಗಿಯೂ ಇದರಲ್ಲಿ ಒಬ್ಬರೇ ನಡೆದು ಹೋಗುವುದು ಭಯಾನಕವೇ; ಅದರಲ್ಲೂ ಕತ್ತಲೆಯ ಹೊತ್ತು. ಹೀಗಿನ ಬ್ರಿಜ್ಜಿನ ನೈಜ ವರ್ಣನೆ ಬರುತ್ತಿದ್ದಂತೆ ಇದು ಹೊರಗಿನಿಂದ ಮುಂಬೈಗೆ ಗುಳೆ ಹೋದವರ ಬದುಕಿನ ಪ್ರತಿಮೆಯಾಗಿ ಪರಿವರ್ತನೆಗೊಳ್ಳುವ ಪವಾಡವೊಂದು ನಡೆದುಹೋಗುತ್ತದೆ.

"ಝಡ್ ಬ್ರಿಜ್ ಈಗೊಂದು ಯಕ್ಷಲೋಕದ ಕಿಂಡಿಯಂತೆ ಕಾಯುತ್ತಿದೆ. ಈ ಕಡೆಯಿಂದ ಹೊಕ್ಕವರು ಆಕಡೆ ಬೇರೇನೋ ಆಗಿ ಹೊರಬರುತ್ತಿದ್ದಾರೆ. ಈ ಕಡೆ ಹೊಕ್ಕ ಮಕ್ಕಳು ಆ ಕಡೆ ಗಡ್ಡ ಹಣ್ಣಾದವರಾಗಿ ಹೊರಬಿದ್ದಿದ್ದಾರೆ. ನಡುವಯಸ್ಸು ದಾಟಿದೆ. ಮದುವೆ ಆಗಿಲ್ಲ. ಮಕ್ಕಳಾಗಿ ಹೊಕ್ಕಾಗ ಅವರ ಕೈಯಲ್ಲಿ ಬಣ್ಣಬಣ್ಣದ ಬಲೂನು ಹಿಡಿದಿದ್ದರು. ಈಗಲೂ ಹೊರಬಿದ್ದಾಗ ಬಲೂನುಗಳಿವೆ. ಅವೇ ಬಣ್ಣದ ಬಲೂನುಗಳು. ಆದರೆ ಈಗ ಅದನ್ನು ಮಾರುತ್ತಿದ್ದಾರೆ. ಬಚ್ಚೊ, ಬಾ, ತಗೋ ಎಂದು ಕರೆಯುತ್ತಿದ್ದಾರೆ. ಝಡ್ ಬ್ರಿಜ್ಜಿನ ಲೋಹದ ಪಂಜರದಲ್ಲಿ ಸಾಲಾಗಿ ಜನ ನಡೆಯುತ್ತಿದ್ದಾರೆ."

'ಹಳದಿ ಬೆಳಕಿನಲ್ಲೊಂದು ಉದ್ಭವಮೂರ್ತಿ' ಒಂದು ಪುಟ್ಟ ಕವನ, ಪುಟ್ಟ ಕತೆಯಂತಿದೆ. ಫುಟ್‌ಪಾತಿನ ಮೇಲೆ ಜೀವಿಸುವ ಹುಡುಗಿಯೊಬ್ಬಳು ಅಂತಹದೆ ಹತ್ತಾರು ಸೋದರರಂತಿರುವ ಗಂಡುಮಕ್ಕಳೊಡನೆ ಬೆಳೆಯುತ್ತಾಳೆ. ಹಾಗೆ ದೊಡ್ಡವಳಾಗುತ್ತಾಳೆ. "ಎಲ್ಲರನ್ನು ಕಾಡುವ ಸಂಗತಿ ಒಂದೇ: ಅಚ್ಚಳಿಯದೇ ಉಳಿದ ಅವಳ ಎಂದಿನ ಮುಗ್ಧ ಹುಡುಗಾಟಿಕೆ. ಪ್ರಪಂಚದ ಅತ್ಯಂತ ಪ್ರಾಚೀನ ವ್ಯವಸಾಯಕ್ಕೆಂದೇ ಈ ಬೀದಿಯಲ್ಲಿ ಉದ್ಭವಿಸಿದಂತಿದ್ದ ಈ ಪುಟ್ಟ ಜೀವದ ಕಣ್ಣಲ್ಲಿ ಕುಂದದ ಅಮಾಯಕ ಹೊಳಪು". ಅವಳು ಈಗ ಕಾಮಕ್ಕೆ ಮುಕ್ತವಾಗಿದ್ದಾಳೆ. ಸರಿ, ಲೇಖಕರು ಇಂಥ ಬದುಕನ್ನು ಸುಸಂಸ್ಕೃತರೆನ್ನಿಸುವವರ ಪೋಷಿತ ಬದುಕಿನೊಡನೆ ದ್ವಂದ್ವಾತ್ಮಕವಾಗಿ ಹೋಲಿಸುತ್ತಾರೇನೂ ಹೌದು. ಆದರೆ ತನ್ಮಯತೆ ಈ ಬೀದಿ ಹುಡುಗಿಯ ಬದುಕನ್ನು ಮೆಚ್ಚಿಸುವ ಕಡೆಗೇ ಇದೆ. ಇದು ವಿವರಣೆಯ ತನ್ನ ಜಾಣ್ಮೆಗೆ ತಾನೇ ತನ್ಮಯನಾದ ಅಪಾಯ. ಹಾಗೆಯೇ 'ಲೇಖಕನ ಅಜ್ಞಾತ ವಾಸ' "ವ್ಯಕ್ತಿಗತ ದಾಹ ಮತ್ತು ಮನುಕುಲದ ಮೋಹ ಎರಡು ಒಂದಾಗುವ ಸೋಜಿಗವೇ ಸಾಹಿತ್ಯ. ಅದು ಪ್ರೇಮದಷ್ಟೇ ಖಾಸಗಿಯಾದ ಅನಾಮಿಕ ಕೃಷಿ" ಎನ್ನುತ್ತದೆ. ಈ ನಂಬಿಕೆಯಲ್ಲಿ ತುಸುವೇ ತೋಲ ತಪ್ಪಿದರೆ ವ್ಯಕ್ತಿವಾದಿಯಾಗಿಬಿಡುವ, ಅರಾಜಕವಾಗಿಬಿಡುವ ಭಯವಿದೆ ಇಲ್ಲಿ. ಹೀಗೆ ನನಗೆ ಆತಂಕವನ್ನುಂಟುಮಾಡಿದ್ದು ಈ ಎರಡು ಬರಹ ಮಾತ್ರ.

ಇಲ್ಲಿಯವರೆಗಿನ ಉದಾಹರಣೆಗಳೇ ಸಾಕು ಜಯಂತರ ಗ್ರಹಿಕೆಯ ಕೇಂದ್ರ ಅಂತಿಮ ಮನುಷ್ಯ, ಅಂಚಿನ ಮನುಷ್ಯ ಎಂದು ತಿಳಿಯಲು. ಒಂದು ಬಗೆಯಲ್ಲಿ ನಿರ್ಲಕ್ಷಿತರ, ಸೋತವರ ಬದುಕನ್ನು ನೇವರಿಸಹೊರಟಹಾಗೆ. ಅವರು 'ಪರಿಸರದ ಮೊದಲ ಸಸಿ ಎದೆಯಲ್ಲಿ' ಅನ್ನುತ್ತಾರೆ. ಇದು ಪರಿಸರ ಚಳವಳಿಯ ಕುರಿತು ಬರೆದ ಅಂಕಣ. ಪರಿಸರ ಸಂರಕ್ಷಿಸುವವರು ಮೊದಲು ಸಸಿ ನೆಡಬೇಕಾದುದು ತಮ್ಮ ತಮ್ಮ ಎದೆಯಲ್ಲಿ ಅನ್ನುತ್ತಾರವರು. "ಅಪರಿಚಿತ ಅಜ್ಜಿಯೊಬ್ಬಳಿಗೆ ಬ್ಯಾಂಕಿನಲ್ಲಿ ಸ್ಲಿಪ್ ತುಂಬಿಕೊಡುತ್ತೀರಿ. ಒಬ್ಬ ಕುರುಡನನ್ನು ರಸ್ತೆ ದಾಟಿಸುತ್ತೀರಿ. ಅಥವಾ ಬಸ್ಸಿನಲ್ಲಿ ಯಾರದೋ ಮಗುವನ್ನು ತೊಡೆಯ ಮೇಲೆ ಕೂಡಿಸಿಕೊಳ್ಳುತ್ತೀರಿ. ಕ್ಲೀಷೆಯಾದ ಸಂಗತಿಗಳು. ಹೌದು, ಆದರೆ ಅದು ಕೊಡುವ ಅನಿರ್ವಚನೀಯ ಸುಖ, ಸಮಾಧಾನ ಅದ್ಯಾವ ಲೋಕದ್ದು. ನಮ್ಮ ಆತ್ಮಕೇಂದ್ರಿತ ಸುಭದ್ರ settled ಸೋಪ್ ಬಾಕ್ಸಿನ ಗಡಿಯನ್ನು ಮುರಿದು ನೋಡಿ. ಕೊಳಕು ಪ್ಲಾಸ್ಟಿಕ್ ತುಂಬಿದ, ಕಲುಷಿತ ಪರಿಸರದ ಸ್ಥಾವರದ ನರಕದಲ್ಲೂ ಮೆಲುವಾದ ಸಂತಸದ, ಬಿಗುಮಾನವಿಲ್ಲದ ಸಲಿಲ ಜಂಗಮ ಸ್ಪರ್ಶವೊಂದು ಅನುಭವಕ್ಕೆ ಬರುತ್ತದೆ. ಪರಿಸರ ಸಂರಕ್ಷಣೆಯ ಮೊದಲ ಸಸಿಯನ್ನು ಸ್ವಂತದ ಎದೆಯಲ್ಲಿ ನೆಡೋಣ."

ಇದು ಜಯಂತರ ಜೀವನ ದೃಷ್ಟಿ. ಇಂಥ ಬರಹ 'ಅಂಕಣ'ವಾಗಿದೆಯೆಂದು ಮಾಸುವುದುಂಟೆ? ಈ ಎಲ್ಲ ಅಂಕಣ ಬರಹಗಳೂ "ಅಮೃತಬಳ್ಳಿ ಕಷಾಯ"ವನ್ನು ಕುಡಿದ ಕುಡಿಗಳಾಗಿವೆ.

**ಡಾ|| ಆರ್. ವಿ. ಭಂಡಾರಿ**
ಕೆರೆಕೋಣ, ಅರೆಅಂಗಡಿ - ೫೮೧ ೪೩೦
ಹೊನ್ನಾವರ ತಾ| ಉ.ಕ.

# ಮನುಷ್ಯರಾಗುವುದಿಲ್ಲ

ಮಾತಾಡಬೇಕೆನ್ನುತ್ತೇವೆ
ಗೌರಿಶಂಕರದಷ್ಟು ಎತ್ತರ
ನೇತು ಬಿದ್ದ ಭ್ರಷ್ಟ ಮನಸ್ಸಿಗೆ
ಇಲ್ಲ ಉತ್ತರ!

ತೊಳೆಯಬೇಕೆನ್ನುತ್ತೇವೆ
ಬ್ರಹ್ಮಾಂಡ - ಜಗತ್ತಿನ ಪಾಪ
ನಮ್ಮ ಮೆನಿಫೆಸ್ಟೊದಲ್ಲಿ
ಹೊಳೆಯುವುದೇ ಇಲ್ಲ
ತೊಳೆಯಲು
ನಮ್ಮ ಮನೆಯ ಬಚ್ಚಲದ ಪಾಚು!



ಮೌಲ್ಯಗಳ ಬಗ್ಗೆ
ದೇಶ ಕಟ್ಟುವ ಕೌಶಲ್ಯದ ಬಗ್ಗೆ
ಮನುಷ್ಯ ಸಂಬಂಧಗಳ (ಹುಸಿ)
ಸೇತುವೆ ಕಟ್ಟ ಬಯಸುತ್ತೇವೆ
ಅಷ್ಟೇ ಕೆಟ್ಟ ಮನಸ್ಸಿನಿಂದ
ಸುರಂಗ ಮದ್ದಿಟ್ಟು ಸಿಡಿಸುತ್ತೇವೆ.

ಸ್ವಾಮಿಗಳಾಗುತ್ತೇವೆ
ಋಷಿಗಳಾಗುತ್ತೇವೆ
ತತ್ವಜ್ಞಾನಿಗಳಾಗುತ್ತೇವೆ
ಧರ್ಮಗುರುಗಳಾಗುತ್ತೇವೆ
ಚಕ್ರವರ್ತಿಗಳಾಗುತ್ತೇವೆ
ಆದರೆ ಮನುಷ್ಯರೇ ಆಗುವುದಿಲ್ಲ.

ಗವಿಸಿದ್ಧ ಎನ್. ಬಳ್ಳಾರಿ
ಜವಾಹರ್ ಬೀದಿ, ಕೊಪ್ಪಳ

# ಅಂತೆಂಬರ ಗಂಡ

## ಸ್ಥೂಲ ನೋಟ

ಸಂಸರ 'ವಿಗಡ ವಿಕ್ರಮರಾಯ' ನವೋದಯ ಪೂರ್ವದ ಸಾಹಿತ್ಯಿಕ ಧೋರಣೆ, ಆಶಯದ ಹಿನ್ನೆಲೆಯಲ್ಲಿ ಹಾಗೂ ಸಂಸರಿಗೆ ರಣಧೀರನ ಮೇಲಿದ್ದ ಪ್ರೀತಿಯ ಹಿನ್ನೆಲೆಯಲ್ಲಿ ಮತ್ತು ರಾಜನ ಬಗ್ಗೆ ಜನಗಳಿಗಿದ್ದ ಆದರ್ಶದ ಕಲ್ಪನೆ, ರಾಜದ್ರೋಹಿಯ ಬಗ್ಗೆ ಆಕ್ರೋಶ, ಯುವಶಕ್ತಿಯ ಮಹತ್ವ ಮುಂತಾದ ಅಂಶಗಳ ದೃಷ್ಟಿಯಲ್ಲಿ ಗಮನಾರ್ಹ ರಚನೆ. ಅಂತೆಯೇ ಲಿಂಗದೇವರು ಹಳೆಮನೆ ರಚಿಸಿರುವ ''ಅಂತೆಂಬರ ಗಂಡ'' ನಾಟಕದಲ್ಲಿ (ಇತಿಹಾಸದ) ಸಂಸರ ಇದೇ ವಸ್ತುವನ್ನು 'ವರ್ತಮಾನ'ದ ನೆಲೆಗಟ್ಟಿಗೊಳಪಡಿಸಿ ನಿರೂಪಿಸಿರುವುದನ್ನು ಕಾಣಬಹುದು. ಈ ನಾಟಕದ ಮೊದಲ ದೃಶ್ಯದಲ್ಲೇ ಇತಿಹಾಸ ಹಾಗೂ ವರ್ತಮಾನಗಳ ಮುಖಾಮುಖಿ ಕಂಡುಬರುತ್ತದೆ. ಉದಾಹರಣೆಗೆ, ರಣಧೀರ ಎರಡೂ ಕೈಗಳನ್ನು ಮೇಲೆತ್ತಿ ''ನಾನು ರಣಧೀರ !'' ಎನ್ನುತ್ತಾನೆ. ಆಗ ಅಲ್ಲಿಗೆ ಬಂದ ನಾಲ್ಕು ಜನ ವ್ಯಕ್ತಿಗಳು : ನೋಡಿದೀವಿ ಬಿಡಪ್ಪ ಎನ್ನಲು, ರಣಧೀರ : ಎಲ್ಲಿ ಎಲ್ಲಿ ನೋಡಿದೀರಿ ? ಎಂದಾಗ, ಯಾವ್ದೋ ದರಿದ್ರ ಥೇಟರಿನಲ್ಲಿ ನೋಡಿದೀವಿ ಎನ್ನುತ್ತಾರೆ. ಆಗ ರಣಧೀರ : ನಾನು ಭೂತ, ನಾನು ಇತಿಹಾಸ,.... ವರ್ತಮಾನ ನೋಡೋಕೆ ಬಂದಿದೀನಿ. ಭೂತಕ್ಕೂ ವರ್ತಮಾನಕ್ಕೂ ಇರೋ ವ್ಯತ್ಯಾಸ ತಿಳಿಸೋಕೆ ಬಂದಿದೀನಿ. ಕಾಣದೇ ಇರೋದನ್ನ ಕಾಣಿಸೋಕೆ, ಮುಚ್ಚಿ ಹೋಗಿರೋದನ್ನ ಬಿಚ್ಚಿ ತೋರಿಸೋಕೆ ಬಂದಿದೀನಿ ಎನ್ನುತ್ತಾನೆ. ಈ ಸಂಭಾಷಣೆ ಬದಲಾದ ಹೊಸಕಾಲದ ವಿದ್ಯಮಾನಗಳನ್ನು ತಿಳಿಸುತ್ತದೆ. ರಾಜಪ್ರಭುತ್ವದಲ್ಲಿ 'ರಾಜ' ಬರುತ್ತಿದ್ದನೆಂದರೆ ಜನತೆಯಲ್ಲಿ ಎಲ್ಲಿಲ್ಲದ ಸಡಗರ, ಗೌರವ. ಪ್ರಜಾಪ್ರಭುತ್ವದಲ್ಲಿ ರಾಜ ನಾದವನು ತನ್ನನ್ನು ತಾನೇ ಪರಿಚಯಿಸಿಕೊಳ್ಳುವುದೂ, ಅವನನ್ನು ಥೇಟರಿನಲ್ಲಿ ಈಗಾಗಲೇ ನೋಡಿರುವುದಾಗಿ ಹೇಳುವುದೂ, ಮುಂತಾದ್ದನ್ನು ಗಮನಿಸಬಹುದು.

ನಂತರದ ಸಂಭಾಷಣೆಯಲ್ಲಿ ರಣಧೀರ, ''ನೀವು ಮೂರ್ಖರಾಗಿರೋದ್ರಿಂದಲೇ ನಾವು ಅಂತು ಇಂತೆಂಬ ಬಿರುದುಗಳ ಗಂಡರಾಗಿರೋದು'' ಎನ್ನಲು, ವ್ಯಕ್ತಿ: ನೋಡು, ನೀನು ರಣಧೀರನೇ ಆಗಿರು, ಅಂತಃಪುರದ ಧೀರನೇ ಆಗಿರು. ಆದರೆ ನಮ್ಮ ಮೇಲೆ ರೇಗಬೇಡ. ವ್ಯಕ್ತಿ ೩ : ನಾವು ಬೇಕಾದ್ರೆ ಯಾರನ್ನು ಬೇಕಾದ್ರೂ ನಾಯಕನ್ನ ಮಾಡಬಹುದು. ವ್ಯಕ್ತಿ ೪ : ... ಯಾರನ್ನ ಬೇಕಾದ್ರೂ ನಾಯೀನೂ ಮಾಡಬಲ್ಲೆವು.... ಎಂಬ ಮಾತುಗಳಲ್ಲಿ ರಾಜ ಪ್ರಭುತ್ವ ಮತ್ತು ಪ್ರಜಾಪ್ರಭುತ್ವಗಳ ಮುಖಾಮುಖಿ ಇದೆ. ಇದನ್ನೇ ಇತಿಹಾಸ ಮತ್ತು ವರ್ತಮಾನಗಳ ಮುಖಾಮುಖಿ ಎನ್ನಬಹುದು. ಹಿಂದೆ ರಾಜನೇ ಅಂತಿಮ ನಿರ್ಧಾರಕನಾದರೆ ಈಗಿನ ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ನಿರ್ಧಾರಕರು ಎಂಬ ಪ್ರಜ್ಞೆ ಇಲ್ಲಿನ ಪ್ರಜೆಗಳಲ್ಲಿ ಕಂಡುಬರುತ್ತದೆ. ಅರಮನೆಯ ಸಂಗತಿಗಳು ಬೆಳಕಿಗೇ ಬರದೆ ಹೋಗುತ್ತಿದ್ದ ಸಂದರ್ಭ ವಿದ್ದರೆ, ಈಗ ಟಿ.ವಿ. ವರ್ತಮಾನ ಪತ್ರಿಕೆಗಳಿಂದ ಪ್ರಜೆಗಳಿಗೆ ಪ್ರಭುತ್ವದ ಆಗುಹೋಗುಗಳು ಗೊತ್ತಾಗುತ್ತವೆ.

ಇಲ್ಲಿ ''ಇತಿಹಾಸ-ವರ್ತಮಾನ, ಆದರ್ಶ-ವಿಕೃತ, ದಂತಕತೆ-ವಾಸ್ತವತೆ, ಬೆಳಕು-ಕತ್ತಲೆ, ಸತ್ಯ-ಮಿಥ್ಯ ಮುಂತಾದ ವಿರುದ್ಧ ಗತಿಗಳನ್ನು ಬಿಡಿಬಿಡಿ ವ್ಯಕ್ತಿಗಳ ಸ್ವಭಾವದಲ್ಲಿ ನಿರೂಪಿಸಿದರೆ ಸಮಗ್ರವಾದ ವ್ಯಕ್ತಿತ್ವ ಸಾಧ್ಯವಾಗದು. ಹಾಗಾಗಿ ಒಂದು ದೇಹ ಎರಡು ತಲೆಯ (ವಿರುದ್ಧ ದಿಕ್ಕಿಗೆ ತಿರುಗಿರುವ) 'ಗಂಡಭೇರುಂಡ'ದ ಪ್ರತಿಮೆಯನ್ನು ಅದಕ್ಕಾಗೇ ಬಳಸಿಕೊಂಡಿರುವುದು ಗಮನಾರ್ಹ.'' ''....ಗಂಡಭೇರುಂಡ ಹಾಡುತಿದೆ...'' ಎಂಬ ಹಾಡಿನಲ್ಲೇ ನಾಟಕಕಾರರ ಉದ್ದೇಶವನ್ನು ಗುರುತಿಸ ಬಹುದು. ಒಂದು ದೃಶ್ಯ ಇತಿಹಾಸಕ್ಕೆ ಕರೆದೊಯ್ದರೆ, ಮತ್ತೊಂದು ದೃಶ್ಯ ವರ್ತಮಾನದ ಚಿತ್ರಣವನ್ನು ಕೊಡುವುದು ಈ ನೆಲೆಯಲ್ಲೇ.

ಸಂಸರ ನಾಟಕದಲ್ಲಿ ಬರುವ ಗರಡಿ, ಗರಡಿಯ ಗೆಳೆಯರು-ಅವರ ಪ್ರೀತಿ-ವಿಶ್ವಾಸ, ರಣಧೀರನ ಪ್ರತಿಭೆ ಮುಂತಾದ ಸಂಗತಿಗಳು ಈ ನಾಟಕದಲ್ಲೂ ಇವೆ. ಈ ಯುವ ಪಡೆ ರಣಧೀರ ಮೈಸೂರ ಅರಸನಾಗಲು ಅತ್ಯಂತ ಕಾಳಜಿಯಿಂದ ಪ್ರಯತ್ನಿಸುತ್ತದೆ. ಸ್ವಂತ ತಂದೆಗಿಂತ ಹೆಚ್ಚಾಗಿ ವಿಶ್ವೇಶ್ವರ ಶಾಸ್ತ್ರಿ (ನಿರೀಶನ ತಂದೆ) ರಣಧೀರನಿಗೆ ಗರಡಿ ಅಖಾಡಾ ಬಿಟ್ಟು ಹೊರಗೆ ಜಿಗಿಯಲು ಪ್ರೇರೇಪಿಸುವುದು, ತಿರುಚನಾಪಳ್ಳಿಗೆ ಹೋಗಿ ನಿರಾಯಾಸವಾಗಿ ಜಟ್ಟಿಯನ್ನು ಕೊಂದು, ಯಾರಿಗೂ ಸಿಗದಂತೆ ಹಿಂದಿರುಗಿ ಬರುವಾಗ ರಣಧೀರನಿಗೆ ಗೊತ್ತಾಗದ ಹಾಗೆ ಗುಪ್ತವೇಷದಲ್ಲಿ ಅವನ ರಕ್ಷಣೆಗೆ ತಮ್ಮ ಮಗ ನಿರೀಶ ಮೊದಲಾದವರನ್ನು ತೊಡಗಿಸಿದ್ದು, ನಂತರ ಮೈಸೂರ ಒಡೆಯನನ್ನಾಗಿ ಮಾಡಲು ತಂತ್ರ ರೂಪಿಸಿದ್ದು, ವಿಕ್ರಮನನ್ನು 'ದಳವಾಯಿ' ಪದವಿಗೆ ಒಪ್ಪಿಸುವಲ್ಲಿ... ಮುಂತಾದ ಅನೇಕ ಸಂದರ್ಭಗಳಲ್ಲಿ ಕೇವಲ ಮಹೀಷೂರ ರಾಜ್ಯಕ್ಕೆ ಅಲ್ಲ ಇಡೀ ಲೋಕಕ್ಕೆ ರಣಧೀರನ ಇರುವನ್ನು ಸಾರಲು ಪ್ರಯತ್ನಿಸಿದ್ದು, ಮುಂದೆ ರಾಜನಾದ ಮೇಲೂ ಹಲವು ತೀರ್ಮಾನ ತೆಗೆದುಕೊಳ್ಳುವಲ್ಲಿ ಆಪ್ತಸಲಹೆ ನೀಡುವಾಗ.... ನಿಸ್ವಾರ್ಥದಿಂದ, ರಾಜಮನೆತನದ ಹುಡುಗ ಕೇವಲ ಗರಡಿಮಲ್ಲನಾಗಿ ಉಳಿಯಲು ಬಿಡದೇ ಸಿಂಹಾಸನಾಧೀಶ ನಾಗಲು ಹಂತಹಂತವಾಗಿ ಪ್ರಯತ್ನಿಸುತ್ತಾರೆ.

ರಣಧೀರ ರಾಜನಾಗುವ ಸಂದರ್ಭದಲ್ಲಿ ವಿಕ್ರಮನ ಕೊಲೆಯಾಗುತ್ತದೆ. ವಿಕ್ರಮನ ಕೊಲೆಯ ಯೋಜನೆಯನ್ನು ಶಾಸ್ತ್ರಿ ಹಾಕಿದ್ದರೂ, ಕೊಲೆಮಾಡುವವರು ಮಾತ್ರ ಸಾಮಾನ್ಯರು. ಆದರೆ ರಣಧೀರ ತನ್ನ ಸಿಂಹಾಸನಾ ರೋಹಣವಾಗುವ ಸಂದರ್ಭಕ್ಕೆ ಸರಿಯಾಗಿ ಕೊಲೆಗಾರರ (ಚೆನ್ನ-ರಂಗ) ತಲೆಗೆ ನೇಣು ಬೀಳಲಿ ಎಂದು ಆಜ್ಞಾಪಿಸು ತ್ತಾನೆ. ಅಂತೂ ರಣಧೀರನು ಮೈಸೂರರಸನಾಗಲು ಇದ್ದ ದೊಡ್ಡ ಕಂಟಕ ವಿಕ್ರಮನ ಕೊಲೆಯಿಂದ ಮುಗಿಯುತ್ತದೆ.

ಮುಂದೆ ರಣಧೀರ ರಾಜನಾದ ಮೇಲೂ ಅವನ ಗರಡಿ ಗೆಳೆಯರು, ಅದರಲ್ಲೂ ನಿರೀಶ – ಅವನ ತಂದೆ ಶಾಸ್ತ್ರಿ ಮೊದಲಾದವರೆಲ್ಲಾ ಅತ್ಯಂತ ಪ್ರಾಮಾಣಿಕವಾಗಿ, ರಾಜ್ಯದ ವಾರ್ತೆಗಳನ್ನು ಶತ್ರುಗಳ ವಿಷಯ, ಗೌಡಾಳಿತದ ಬಗ್ಗೆ – ಎರಡು ರೀತಿಯ ಅಧಿಕಾರವನ್ನು ಗೌಡರಿಗೆ ಕೊಟ್ಟರೆ ಅವರ ನಿಯಂತ್ರಣ ಕಷ್ಟ ಎಂದೂ, ಗೌಡರ ಅಧಿಕಾರವನ್ನು ಕಿತ್ತುಕೊಂಡು ಕೇವಲ ಕಂದಾಯ ವಸೂಲಿಗೆ ಮಾತ್ರ ನೇಮಿಸಬೇಕೆನ್ನುವುದಾಗಲೀ, ಹೊಸ ದಳವಾಯಿಯನ್ನಾರಿಸುವುದು, ಗರಡಿಯ ಗುಂಪಲ್ಲಿ (ಮಲ್ಲ ಹನುಮ, ಬಸವ ಮಲ್ಲ) ಕೆಲವರನ್ನು ಪ್ರಭುಗಳ ಮೈಗಾವಲಿನವರಾಗಿ ನೇಮಿಸಿ, ಸತ್ಕನನ್ನು ನಾಡಿನ ಗೌಡರ ನಡವಳಿಕೆಗಳ ಬಗ್ಗೆ ವರದಿ ತರಲು ನೇಮಿಸುವಾಗ... ಮುಂತಾದ ಅನೇಕ ಸಂದರ್ಭಗಳಲ್ಲಿ ನಿಷ್ಠೆಯ ಕಾರ್ಯ ನಿರ್ವಹಿಸುತ್ತಾರೆ.

ಆದರೆ ಇವರ ಬಗ್ಗೆ ಸ್ವಲ್ಪಮಟ್ಟಿಗೆ ಸಂಶಯ ಬರುವುದು ಮನ್ನಮ ಮೊದಲಾದ ಗೌಡರನ್ನು ಎದುರಿಸುವ ಸಂದರ್ಭದಲ್ಲಿ; ಇದ್ದಕ್ಕಿದ್ದಾಗೆ ನಿರೀಶನ ನೇತೃತ್ವದ ಸೈನ್ಯ ಹಳ್ಳಿಗಳಿಗೆ ನುಗ್ಗಿ ಗೌಡರ ಅಧಿಕಾರ ಮೊಟಕುಗೊಳಿಸಿ-ಗೌಡರ ಆಸ್ತಿಪಾಸ್ತಿಗಳನ್ನು ರಾಜ್ಯಕ್ಕೆ ಸಮರ್ಪಿಸಲು ಒತ್ತಾಯಿಸುವುದು, ನಿರೀಶ ಗೌಡರ ಜೊತೆ ಮಾತನಾಡುವಾಗ ರಾಜರನ್ನು ಸಮರ್ಥಿಸಿಕೊಳ್ಳಲು ಸ್ವಲ್ಪ ಒರಟಾದ ಭಾಷೆಯನ್ನು ಬಳಸುತ್ತಾನೆ. ಆದರೆ ಅವನ ಸೈನ್ಯ

ಸಂಸರ 'ವಿಗಡ ವಿಕ್ರಮರಾಯ' ನವೋದಯ ಪೂರ್ವದ ಸಾಹಿತ್ಯಿಕ ಧೋರಣೆ, ಆಶಯದ ಹಿನ್ನೆಲೆಯಲ್ಲಿ ಹಾಗೂ ಸಂಸರಿಗೆ ರಣಧೀರನ ಮೇಲಿದ್ದ ಪ್ರೀತಿಯ ಹಿನ್ನೆಲೆಯಲ್ಲಿ ಮತ್ತು ರಾಜನ ಬಗ್ಗೆ ಜನಗಳಿಗಿದ್ದ ಆದರ್ಶದ ಕಲ್ಪನೆ, ರಾಜದ್ರೋಹಿಯ ಬಗ್ಗೆ ಆಕ್ರೋಶ, ಯುವಶಕ್ತಿಯ ಮಹತ್ವ ಮುಂತಾದ ಅಂಶಗಳ ದೃಷ್ಟಿಯಲ್ಲಿ ಗಮನಾರ್ಹ ರಚನೆ. ಅಂತೆಯೇ ಲಿಂಗದೇವರು ಹಳೇಮನೆ ರಚಿಸಿರುವ ''ಅಂತೆಂಬರ ಗಂಡ'' ನಾಟಕದಲ್ಲಿ (ಇತಿಹಾಸದ) ಸಂಸರ ಇದೇ ವಸ್ತುವನ್ನು 'ವರ್ತಮಾನ'ದ ನೆಲೆಗಟ್ಟಿಗೊಳಪಡಿಸಿ ನಿರೂಪಿಸಿರುವುದನ್ನು ಕಾಣಬಹುದು.

ಎನ್. ಗೀತಾ

ಊರೊಳಗೆ ನುಗ್ಗಿ ಹೆಣ್ಣು ಮಕ್ಕಳನ್ನು ಬೆದರಿಸುವುದು... ಮೊದಲಾದ 'ದಬ್ಬಾಳಿಕೆ' ನಡೆಸುವ ಸಂದರ್ಭ-ಅಧಿಕಾರ ಬಂದ ಮೇಲಿನ ಒರಟು ವರ್ತನೆ ಆಶ್ಚರ್ಯ ಹುಟ್ಟಿಸುತ್ತದೆ.

ಜನಪರವಾದ ಸರ್ಕಾರಕ್ಕೆ ಬೆಂಬಲ ನೀಡಿದ ಜನತೆ ಇದ್ದಕ್ಕಿದ್ದಂತೆ ಆಡಳಿತಾರೂಢರ ಜನವಿರೋಧೀ ನೀತಿ ಕಂಡು ಬೇಸತ್ತ ಹಾಗೇ ಇಲ್ಲೂ ಸಹ ಜನರು ಆಶ್ಚರ್ಯಾಘಾತಕ್ಕೊಳಗಾಗುತ್ತಾರೆ. ಒಳ್ಳೆಯ ಆಡಳಿತ ನಿರೀಕ್ಷಿಸಿ, ಬೆಂಬಲಿಸಿದ ಜನತೆ ಅದೇ ರಾಜನ (ಕಡೆಯವರ) ಅಸಿಂಧು, ಅಸಂವಿಧಾನಾತ್ಮಕ ಶಾಸನವನ್ನು ವಿರೋಧಿಸಲು ಒಂದಾಗುತ್ತಾರೆ. ಜನಮನದಲ್ಲಿ ತಮ್ಮ ನಾಡು-ನುಡಿ, ಆಡಳಿತ ಮುಂತಾದರ ಬಗ್ಗೆ ಆಲೋಚಿಸುವಂತೆ ಮಾಡಲು ಮಾಧ್ಯಮಗಳು ಅತ್ಯುತ್ತಮ ಸಾಧನಗಳು. ಆದ್ದರಿಂದ ಇಲ್ಲಿ ಜನರನ್ನು ಸಂಘಟಿಸಿ ಮಾತನಾಡುವ ವ್ಯಕ್ತಿ ತುಂಗರಾಯನನ್ನು (ವಿಕ್ರಮನ ಅನುಯಾಯಿ) ಆವಾಹಿಸಿಕೊಂಡು (ಬಹುಶಃ ಈ ಕಾಲದಲ್ಲಿ ಸತ್ತ ನಾಯಕನ ಬಗ್ಗೆ 'ಸಿಂಪಥಿ'ಗಾಗಿ ಈ ರೀತಿ ಮಾಡುವ ಹಾಗೆ) ಸ್ವತಃ ಆಕಾಶವಾಣಿಯೆಂದೊ, ದೂರದರ್ಶನವೆಂದೊ ಭಾವಿಸಿ ಆಲಿಸಬೇಕೆನ್ನುತ್ತಾನೆ. ಹಾಗೇ ಈ ರಾಜನ ಆಡಳಿತದ ಅವ್ಯವಹಾರ, ಭ್ರಷ್ಟತೆಯನ್ನು ಬಯಲಿಗೆಳೆದು, ಸೈನಿಕರು ಮಾಡಿದ ದೌರ್ಜನ್ಯ ನಿರೀಶನಿಗೆ ಗೊತ್ತಿರಲಿಲ್ಲೆಂದೂ, ಗೊತ್ತಾದ ಮೇಲೆ ಸೈನಿಕರ ವರ್ತನೆ ಹಿಡಿಸಿಲ್ಲವೆಂದೂ, ರಾಜರ ಮತ್ತು ಗೌಡಾಧಿಪತಿಗಳ ನಡುವೆ ಸಂಧಾನಕ್ಕೆ ರಾಜ ಪ್ರತಿನಿಧಿಯಾಗಿ ನಿರೀಶ ಪ್ರಯತ್ನಿಸುತ್ತಾನೆಂದೂ ತಿಳಿಸುತ್ತಾನೆ.

ಮುಂದೆ ರಣಧೀರನ ನಿಜವಾದ ಬಣ್ಣ ಬಯಲಾಗುವುದು ನಿರೀಶನ ಮಧ್ಯಸ್ಥಿಕೆಯಿಂದ ಏರ್ಪಟ್ಟ ಗೌಡರ ಹಾಗೂ ರಾಜನ ಸಭೆಯಲ್ಲಿ. ನಿರೀಶನನ್ನು ಬೇಕಂತಲೇ ಬಾಯ್ಮುಚ್ಚಿಸುವ ರಣಧೀರನ ವರ್ತನೆಯಿಂದ ನಿರೀಶನ ಹಾಗೇ ಓದುಗರೂ ಪೆಚ್ಚಾಗುತ್ತಾರೆ. ನಂತರ ಗೌಡರು ತಮ್ಮ ಸಮಸ್ಯೆಗಳನ್ನು ಹೇಳಿಕೊಂಡು ಪ್ರಭುಗಳ ಹೊಸ ಶಾಸನ ಅತ್ಯಂತ ಅಮಾನವೀಯ ಎಂಬುದನ್ನು ಮನವರಿಕೆ ಮಾಡಿದಾಗ, 'ಈ ಶಾಸನದ ನಿಜವಾದ ರೂವಾರಿ ನಿರೀಶ' ಎಂದು ಹೇಳಿ ಎಲ್ಲರೂ ತತ್ತರಿಸುವಂತೆ ಮಾಡುತ್ತಾನೆ. ಈ ಸಮಯದಲ್ಲೇ ನಿರೀಶ ರಣಧೀರನ ವ್ಯವಸ್ಥಿತ ಸಂಚಿಗೆ ಬಲಿಯಾಗುವ 'ಹರಕೆಯ ಕುರಿ'ಯಾಗುತ್ತಾನೆ. ಬಹುಶಃ ನಿರೀಶನಿಗೆ ಗೊತ್ತಿಲ್ಲದೇ ಅವನ ಉಳಿದ ಗೆಳೆಯರೂ ಈ ಮೋಸದ ಸಂಚಿನ ರೂವಾರಿಗಳೇ ಆಗಿರುತ್ತಾರೆ. ರಣಧೀರನ ಮೈ ಮಾಲಿಷ್ ಮಾಡುವ ಇವರು ಅವನ ಮನಸ್ಸನ್ನು ಮಾಲಿಷ್ ಮಾಡಿದ ಪರಿಣಾಮದಿಂದ, ಗೌಡರ ಎದುರಲ್ಲಿ ನಿರೀಶನೇ 'ರಾಜದ್ರೋಹಿ'ಯಾಗಿ ಕಾಣುತ್ತಾನೆ.

ಮುಂದೆ ಗೌಡರೆಲ್ಲಾ ಹೋದ ಮೇಲೆ, ನಿರೀಶನೊಬ್ಬನನ್ನೇ ಇರುವಂತೆ ಹೇಳಿ ರಣಧೀರನು ''....... ಇಂಥ ರಾಜಕಾರಣ ನನಗೆ ಹೇಗೆ ಪ್ರಾಪ್ತವಾಯಿತೆಂದರೆ, ನಿನ್ನ ತಂದೆ ಶಾಸ್ತ್ರಿಗಳ ಅಖಾಡದಲ್ಲಿ ಕಲಿತದ್ದು.... ನನ್ನನ್ನು ಯಾಕೆ ಬಲಿಕೊಡಬೇಕಿತ್ತೆಂದು ತಾನೆ ? ಗೌಡಾಧಿಪತಿಗಳ ಜತೆ ಸೇರಿಕೊಂಡು ನೀನು ಜನನಾಯಕನಾಗುವುದನ್ನು ಯಾವ ರಾಜ ತಾನೇ ಸಹಿಸಿಯಾನು ? ನಿನ್ನ ಪ್ರತಿಯೊಂದು ಚಟುವಟಿಕೆಯೂ ಬೇಹಿನವರ ಮೂಲಕ ನನಗೆ ತಿಳಿದಿದೆ. ಎತ್ತರಕ್ಕೆ ಬೆಳೆಯಬೇಕೆನಿಸಿದವನಿಗೆ ತನ್ನ ಸ್ಥಾನಮಾನದ ಮಿತಿ ತಿಳಿದಿರಬೇಕು.... ನೆನಪಿರಲಿ ನಿನ್ನ ಹಿಂದೆ ನನ್ನ ಬೇಹಿನವರಿರುತ್ತಾರೆ'' ಎನ್ನುತ್ತಾನೆ.

ನಿರೀಶನ ಬಗ್ಗೆ ರಣಧೀರ ಇಷ್ಟೊಂದು ಕಠೋರನಾಗಲು ಕಾರಣ ನಿರೀಶನ ಗೆಳೆಯರೇ; ರಾಜನಿಗೆ ಅವನು ಆಪ್ತನಾಗಿರುವುದನ್ನು ಕಂಡು ಸಹಿಸದೇ ನಿರೀಶನ ವಿರುದ್ಧ ಚಾಡಿ ಹೇಳುವುದು ಮತ್ತು ನಿರೀಶ-ರಣಧೀರರ ಮಧ್ಯೆ ಒಡಕುಂಟಾಗಿರುವುದನ್ನರಿತ ಶೆಂದಲೈಮಲ್ಲ 'ದೊಡ್ಡಿ'ಯ ಕೊಲೆ ಮಾಡಿ ಸಿಕ್ಕಿಹಾಕಿಕೊಂಡಾಗ ಸಹ ಈ ಸಂಚಿಗೆ ನಿರೀಶನೇ ಕಾರಣ ಎಂದು ಹೇಳುವುದು ಇರಬಹುದು. ಸಂಸರ ರಣಧೀರ ವಿಕ್ರಮನ ಓಲೆಯನ್ನು ಓದಿಯೇ ಅದರ ಹಿಂದಿನ ಮನೋಭಾವವನ್ನರಿತು ಅತ್ಯಂತ ಮುತ್ಸದ್ದಿಯಂತೆ ವರ್ತಿಸಿದರೆ, ಇಲ್ಲಿನ ರಣಧೀರ ಹಿತ್ತಾಳೆ ಕಿವಿಯವನಂತೆ ಕಾಣುತ್ತಾನೆ. ನಿರೀಶ ಯಾವುದೇ ಕಾರಣಕ್ಕೂ ರಣಧೀರನ ಸಿಂಹಾಸನವನ್ನು ಕಬಳಿಸಲು ಸಾಧ್ಯವಿಲ್ಲ. ಅವರಿಬ್ಬರೂ ಜೀವದ ಗೆಳೆಯರು. ಆದರೂ 'ರಣಧೀರ' ನಿರೀಶನ ಆದರ್ಶವನ್ನು ಸಹಿಸದೇ, ಹೊಟ್ಟೆಕಿಚ್ಚು ಪ್ರದರ್ಶಿಸುವುದು ಕುತೂಹಲಕಾರಿ ಸಂಗತಿ.

ನಂತರ ನಿರೀಶನನ್ನು ರಣಧೀರನ ಕಡೆಯವರು ಕತ್ತಿಯ ಮೊನೆಯಿಂದ ಚುಚ್ಚಿಕೊಂಡೇ ಕರೆತಂದು ನಿಲ್ಲಿಸಿದಾಗ, ನಿರೀಶ ತಾನು ನಿರಪರಾಧಿ, ತನ್ನ ವಿರುದ್ಧ ಯಾರೋ ಚಾಡಿ ಹೇಳಿದ್ದಾರೆಂದೂ, ರಾಜನ ಪರವಾಗಿ ರಾಜರ ಒಳ್ಳೆಯದಕ್ಕೆ ದುಡಿದಿದ್ದೇನೆಂದು ಹೇಳಿದರೂ ಕೇಳದ ರಣಧೀರ ''ಕೊಂಗ ಭಯೋತ್ಪಾದಕರ ಜತೆ ಸೇರಿ ರಾಜದ್ರೋಹ, ಮಿತ್ರದ್ರೋಹ ಮಾಡಿದ ನೀನು'' ಉಳಿಯಬಾರದೆನ್ನುತ್ತಾನೆ. ಆಗ ನಿರೀಶ ನನ್ನನ್ನು ನಂಬಿ ಎಂದರೆ, ''ನಂಬಿಕೆಯಾಚೆ ನಡೆಯುವುದನ್ನು ನಾನು ಕಲಿತಿದ್ದೇನೆ ನಿರೀಶ. ನನಗೀಗ ನಿನ್ನಪ್ಪ ಶಾಸ್ತ್ರಿಯ ಅವಶ್ಯಕತೆ ಇಲ್ಲ, ಅವರ ಮಗ ನಿರೀಶನ ಅವಶ್ಯಕತೆಯೂ ಇಲ್ಲ'' ಎನ್ನುತ್ತಾನೆ. ಮತ್ತು ''.... ವಿಕ್ರಮರಾಯ, ವಿಶ್ವನಾಥಶಾಸ್ತ್ರಿ, ಚೆನ್ನ, ರಂಗ, ದೊಡ್ಡಿ, ಈಗ ನೀನು ಇವರೆಲ್ಲಾ ನಾನೇರಿದ ಮೆಟ್ಟಿಲಿನ ಬೆನ್ನಲಗಳೇ'' ಎಂದೂ ಹೇಳುತ್ತಾನೆ. ಆಗ ನಿರೀಶ ''ಬೇಡ ನರಸಾ, ನಾವಿಬ್ಬರೂ ಆದರ್ಶಗಳ ಬೆನ್ನೇರಿ ಬಂದವರು. ನಾನಂತೂ ಇನ್ನೂ ಆದರ್ಶದ ಗುಂಗಿನಲ್ಲಿರುವವನು. ಜನ ಮೆಚ್ಚುವ, ಜಗ ಮೆಚ್ಚುವ ರಾಜ್ಯವೊಂದನ್ನು ಕಟ್ಟೋಣ. ಇನ್ನೂ ಕಾಲ ಮಿಂಚಿಲ್ಲ'' ಎಂದರೆ, ತನ್ನ ಭಟರನ್ನು ಕರೆದು ನಿರೀಶನನ್ನು ಬಂಧಿಸಿ ತನ್ನ ಶಯ್ಯಾಗೃಹದ ಕೆಳಗಿರುವ ನೆಲಮಾಳಿಗೆಯಲ್ಲಿ ಬಂಧಿಸಿಡಲು ಹೇಳುತ್ತಾನೆ. 'ಅವನು (ನಿರೀಶ) ಆದರ್ಶದ ಪ್ರಲಾಪನೆ ಮಾಡುತ್ತಲೇ ಒಂದು ದಿನ ಸಾಯಲಿ' ಎನ್ನುತ್ತಾನೆ.

ಇತಿಹಾಸದ ರಾಜ ರಣಧೀರನನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಈ ನಾಟಕವನ್ನು ಓದಿದರೆ 'ರಣಧೀರ' ನಿರೀಶನ ಬಗ್ಗೆ ಅನಗತ್ಯವಾಗಿ ಕಠೋರನಾಗುತ್ತಾನೆನಿಸುತ್ತದೆ. ಆದರೆ ವರ್ತಮಾನದ ರಾಜಕಾರಣಿಯಾಗಿ ರಣಧೀರನನ್ನು ಅವಲೋಕಿಸಿದರೆ, ಇಂಥ ಘಟನೆಗಳು ಈಗಿನ 'ರಾಜನೀತಿ' ಎಂಬಂತೆ ತೋರುತ್ತದೆ. ಅದಕ್ಕಾಗಿ ಇಲ್ಲಿನ ರಣಧೀರ ಗರಡಿ ಮಲ್ಲನಾಗಿ ಗೆಳೆಯರನ್ನು ಪ್ರೀತಿಯಿಂದ ಕಾಣುತ್ತಿದ್ದವನು ಅದೇ ಗೆಳೆಯರ ಸಹಕಾರದಿಂದ ಅಧಿಕಾರ ಪಡೆದ ನಂತರ ಮೊದಲಿಗಿಂತ ತೀರಾ ವ್ಯತಿರಿಕ್ತವಾಗಿ ಬದಲಾಗುವುದು ಹೇಗೆ ? ಏಕೆ ? ನಿರೀಶನನ್ನು ಬಲಿಕೊಡುವ ಅಗತ್ಯವಾದರೂ ಏನಿತ್ತು? ಮುಂತಾದ ಪ್ರಶ್ನೆಗಳು ಏಳುವುದು ಸಹಜ.

ಈ ಹಿನ್ನೆಲೆಯಲ್ಲಿ ನಾಟಕದ 'ಗಂಡಭೇರುಂಡ'ದ ಪ್ರತಿಮೆ ಅರ್ಥಪೂರ್ಣ. ಒಂದು ದೇಹ-ಎರಡು ತಲೆ (ವಿರುದ್ಧ ದಿಕ್ಕಿನ ತಲೆಗಳು). ವ್ಯಕ್ತಿಯೊಬ್ಬನಲ್ಲೇ ವಿಭಿನ್ನ ಸ್ವಭಾವಗಳು ಇದ್ದು; ಅವು ಸಂದರ್ಭ, ಪರಿಸ್ಥಿತಿ, ಅಧಿಕಾರ ಮುಂತಾದವುಗಳ ಹಿನ್ನೆಲೆಯಲ್ಲಿ ಕೆಲವರು ಬದಲಾಗಬಹುದು, ಕೆಲವರು ಬದಲಾಗದೇ ಇರಬಹುದು ಎಂಬುದನ್ನು ಸೂಚಿಸುತ್ತದೆ. ನಿರೀಶನಂಥವರು ಹಾಗೇ ಇದ್ದರೆ, ರಣಧೀರನಂಥವರು ಬದಲಾಗುತ್ತಾರೆ. ಮೊದಲು ಇವರಿಬ್ಬರಲ್ಲೂ 'ಆದರ್ಶ' ಇದ್ದರೂ, ನಿರೀಶನ ಆದರ್ಶ ಗಟ್ಟಿಯಾದುದು. ರಣಧೀರನದು ಮೇಲ್ತೋರಿಕೆಯದಾಗಿ – ಅಧಿಕಾರ ದಾಹ, ಸ್ವಾರ್ಥ ಒಳಗೊಳಗೇ ಇದ್ದುದು ತಿಳಿಯುತ್ತದೆ. ಹಾಗೇ ಒಂದು ದೇಹ-ಎರಡು ತಲೆ-ರಣಧೀರ ಒಬ್ಬನೇ ಆದರೂ ಇತಿಹಾಸ-ವರ್ತಮಾನದ

ಹಿನ್ನೆಲೆಯಿಂದ ನೋಡಿದಾಗ ಬೇರೆಬೇರೆ ಸ್ವಭಾವದ ಅನಾವರಣವಾಗುತ್ತದೆ. ನಿರೀಶ-ರಣಧೀರರ ಸ್ನೇಹದ ದೃಷ್ಟಿಯಿಂದ ನೋಡಿದರೆ, ಆದರ್ಶ-ಪ್ರಕರ್ಷ ಕಂಡುಬರುತ್ತದೆ.

ರಾಜಪ್ರಭುತ್ವದಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲದ ಸಂದರ್ಭದಲ್ಲಿ, ರಾಜನ ಏಳ್ಗೆಗೆ ಶ್ರಮಿಸಿದವರು ಮುಖ್ಯವಾಗುವುದೇ ಇಲ್ಲ. ಆದರೆ ರಾಜನ ಗುಣ, ನಡತೆ, ಶೌರ್ಯ ಇವು ಆದರ್ಶದ ಮಟ್ಟಕ್ಕೇರಿ ಕವಿಗಳೂ, ನಾಟಕಕಾರರೂ ಸಹ ರಾಜನೊಬ್ಬನನ್ನು 'ವೈಭವೀಕರಿಸಿ' ಚಿತ್ರಿಸುತ್ತಿದ್ದುದೇ ಹೆಚ್ಚು. ಆದರೆ ಈಗ ಹಾಗಿಲ್ಲ. ಪ್ರಜಾಪ್ರಭುತ್ವದಲ್ಲಿ ಪಾರದರ್ಶಕ ಚಿಂತನೆಗೆ ಅವಕಾಶವಿದೆ. ವ್ಯಕ್ತಿಗಳನ್ನು ಚಿಂತನೆಗೆ ಹಚ್ಚುವ ಮಾಧ್ಯಮಗಳಿವೆ. ಅಧಿಕಾರ, ಆಡಳಿತ ಮುಂತಾದವನ್ನು ಕುರಿತು ಆಲೋಚಿಸಲು, ಅಭಿವ್ಯಕ್ತಿಸಲು, ಬಂಡೇಳಲು ಅವಕಾಶವಿದೆ. ಅದಕ್ಕೆ ಸಂಸರಿಗೆ ರಣಧೀರ ಆದರ್ಶ ದೊರೆಯಾಗಿ ಕಂಡರೆ, ಹಳೆಮನೆಯವರಿಗೆ 'ಆದರ್ಶದ' ಹಿಂದಿನ ಶ್ರಮಿಕರು ಮುಖ್ಯರಾಗುತ್ತಾರೆ. ಹಾಗಂತ ಬಂಡೆದ್ದವರಿಗೆ, ನ್ಯಾಯ ಯುತವಾಗಿ ನಡೆದವರಿಗೇ 'ನ್ಯಾಯ' ಸಿಕ್ಕುತ್ತದೆಂದಲ್ಲ. ಆದರ್ಶ, ಒಳಿತಿನ ತುಡಿತ ಇರುವವರಿಗೇ ನ್ಯಾಯ ಸಿಗಬೇಕೆಂಬ ಆಶಯ ಇದ್ದರೂ, ಈ ಕಾಲದಲ್ಲಿ ನಿರೀಕ್ಷೆ ಹುಸಿಯಾಗುವ ಸಂಭವವೇ ಹೆಚ್ಚು. ಆದ್ದರಿಂದಲೇ ಕಡೆಯಲ್ಲಿ ನಿರೀಶ ಬಂಧನಕ್ಕೊಳಗಾಗುವುದು. ದೈಹಿಕವಾಗಿ ಕೊಲ್ಲಲ್ಪಡದಿದ್ದರೂ, ಮಾನಸಿಕವಾಗಿ ಕೊಲೆಯಾಗುವುದು. (ವಿಗಡ) ವಿಕ್ರಮರಾಯನ ಕ್ರೌರ್ಯ ನೇರವಾಗೇ ಗೊತ್ತಾಗಿ, ಚೆನ್ನ-ರಂಗರಂಥ ಸಾಮಾನ್ಯರಿಂದಲೇ ಕೊಲೆಗೀಡಾಗುತ್ತಾನೆ. ನಿರೀಶನಂಥವರು ಶಿಕ್ಷೆಗೆ ಒಳಗಾಗುತ್ತಾರೆ. ಆದರೆ ರಣಧೀರನಂಥವರು ಮೇಲ್ನೋಟಕ್ಕೆ ಆದರ್ಶಪಾಲಕರಂತೆ ಕಂಡರೂ ಒಳಗೊಳಗೇ ಸ್ವಾರ್ಥದ ಸಂಚು ನಡೆಸುತ್ತಾರೆ, ಅದೂ ಯಾರಿಗೂ ಗೊತ್ತಾಗದ ಹಾಗೆ. ಇಂಥವರೇ ಅಪಾಯಕಾರಿ. ಆದರೂ ಅವರಿಗೆ ವಂದಿಮಾಗಧರಿದ್ದು, ಬಿರುದು ಬಾವಲಿಗಳನ್ನು ಕೊಟ್ಟು 'ಜನನಾಯಕ'ರನ್ನಾಗಿಸುವುದು, 'ಅಂತೆಂಬರ ಗಂಡ'ರನ್ನಾಗಿಸುವುದೂ ಸಹ ವಾಸ್ತವ ಸತ್ಯ. ಅದಕ್ಕೆ ಈ ನಾಟಕದಲ್ಲಿ ಮೊದಲನೇ ದೃಶ್ಯದಲ್ಲಿ ಬರುವ ರಣಧೀರನ ಬಿರುದಾವಳಿ (ಅಂತು ಇಂತೆಂಬರ ಗಂಡ, ಮೊನೆಗಾರ, ರಾಜಕಂದರ್ಪ, ಸುಗುಣ ಗಂಭೀರ, ಶೂರ, ಮಲೆವರ ಗಂಡ, ಅಭಯ ಪ್ರತಾಪಾಧೀಶ್ವರ, ಸಂಗೀತಲೋಲ, ಸಾಹಿತ್ಯ ರತ್ನಾಕರ, ಕಾಮಿನೀ ಚುಂಬಿತ...,)ಗೂ, ಕೊನೆಯ ದೃಶ್ಯದಲ್ಲಿ ಬರುವ ಬಿರುದು (ಕರ್ನಾಟಕ ವಿಧಾನಸೌಧಾಧೀಶ್ವರ, ದೀನ ದಲಿತರ ಹರಿಕಾರ, ಕನ್ನಡಿಗರ ಮನಚೋರ, ಕಲಾಸಾಹಿತ್ಯ ಸಮ್ಮೇಳನಗಳ ಉದ್ಘಾಟಕ, ವಂದಿಮಾಗಧರ ಕಣ್ಮಣಿ, ಬಂಧು ಭಗಿನಿಯರ ಸೇವಾನಿರತ, ಬಿನ್ನವತ್ತಳೆಯ ಸನ್ಮಿತ್ರ, ನಾಯಕರ ನಾಯಕ)ಗಳಿಗೂ ವ್ಯತ್ಯಾಸವೇನಿಲ್ಲ. ಕಾಲ ಮಾತ್ರ ಬೇರೆ ಅಷ್ಟೇ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಪಾತ್ರ ಎಂದರೆ, ದೊಡ್ಡಿಯದು. ಅಮಾಯಕಳಾದ ಅವಳು ತನ್ನ ಸೌಂದರ್ಯದಿಂದ ರಣಧೀರನನ್ನು ಸೆಳೆದು ತಮಗೆ ಬಲಿ ಕೊಡಬೇಕೆಂದು ಕುರುವಿಯನ್ ನಿಯೋಜಿಸಿದ ಹೆಣ್ಣು. ಮೊದಲು ಆ ಪ್ರಯತ್ನ ಮಾಡಿದರೂ, ರಣಧೀರನನ್ನು ಮನಸಾರೆ ಪ್ರೀತಿಸಿದ ಪರಿಣಾಮವಾಗಿ ತನ್ನ ಕಡೆಯವರಿಂದಲೇ ಹತ್ಯೆಗೊಳಗಾಗುತ್ತಾಳೆ. ''ವ್ಯಕ್ತಿಗತ ಮಹತ್ವಾಕಾಂಕ್ಷೆ ಎರಡು ರೂಪದಲ್ಲಿ ಪರಿಣಮಿಸುವುದನ್ನು ನರಸ ಹಾಗೂ ದೊಡ್ಡಿಯಲ್ಲಿ ಕಾಣಬಹುದು. ದೊರೆಯಾಗಿ ಮೆರೆಯಬಯಸುವ ಬಯಕೆಯ ರಣಧೀರ ದೊಡ್ಡಿಯನ್ನು ತನ್ನವಳನ್ನಾಗಿಸಿಕೊಳ್ಳುತ್ತಾನೆ. ಅವನಿಗೆ ಮೈಸೂರರಸಿಯರ ಸಮಾನ ಪಟ್ಟವನ್ನು ದೊಡ್ಡಿಗೆ ನೀಡುವಂತಹ ಎದೆಗಾರಿಕೆ ಇಲ್ಲ. ಹಾಗೆ ಮಾಡಿಬಿಟ್ಟಿದ್ದರೆ, ಅವನ ದೊರೆತನಕ್ಕೆ ಎಲ್ಲಿ ಒಂದು ಕಳಂಕ ಬಂದುಬಿಟ್ಟೀತೂ ಎಂಬ ಹೆದರಿಕೆ ಅವನನ್ನು ಕಾಡಿಸಿರಬೇಕು. ಆದರೆ ಅವಳ ಹೆಸರಿನಲ್ಲಿ ಒಂದು ನಾಲೆಯನ್ನು ಕಟ್ಟಿಸುವ ದೊಡ್ಡತನವನ್ನು ಅವನು ಪ್ರಕಟಿಸುತ್ತಾನೆ. ಬಹುಶಃ ಇದೂ ಅವನು ಕಟ್ಟಿಕೊಳ್ಳಲು ಬಯಸುತ್ತಿರುವ ಪ್ರಭಾವಳಿಯಲ್ಲಿನ ಒಂದು ತಂತ್ರ ಆಗಿರಬಹುದು. ದೊಡ್ಡಿ ಮೈಸೂರು ಒಡೆಯರನ್ನು ತನ್ನವರನ್ನಾಗಿಸಿಕೊಳ್ಳಬೇಕೆಂಬ ಆಸೆ ಹೊತ್ತಿದ್ದವಳು. ಅದು ಸಾಕಾರಗೊಂಡ ಮೇಲೆ ಅವಳು ಅದನ್ನು ದುರುಪಯೋಗಪಡಿಸಿಕೊಳ್ಳುವ ಯಾವ ತಂತ್ರವನ್ನೂ ಯೋಜಿಸುವುದಿಲ್ಲ. ಅವಳ ಕೊನೆಯ ಆಸೆ ಪಟ್ಟದರಸಿಯಾಗಿ ಇತಿಹಾಸದಲ್ಲಿ ಉಳಿಯುವುದಕ್ಕಿಂತ, ಬಡವಳಾಗಿ ಜನರ ಬಾಳಿಗೆ ದಾರಿಯಾಗಲೆಂದು ಕಟ್ಟಿಸಿದ ನಾಲೆಯ ಮೂಲಕ ಇತಿಹಾಸದಲ್ಲಿ ಉಳಿಯಬಯಸಿದ್ದು. ರಾಜರ ಇತಿಹಾಸ ನರಸರಂಥವರಿಂದ ಬೆಳೆದರೆ, ಸಾಮಾಜಿಕ ಇತಿಹಾಸ ದೊಡ್ಡಿಯಂಥವರಿಂದ ಪ್ರಗತಿಶೀಲವಾಗುತ್ತದೆ. ನಾಟಕಕಾರರು ರಣಧೀರನ ಕಥೆಯನ್ನು ಹೇಳುತ್ತಿದ್ದಾರೆಂದು ಮೇಲುನೋಟಕ್ಕೆ ಅನಿಸಿದರೂ ಅವರ ಒಲವು ದೊಡ್ಡಿ, ಮನ್ನಮಗೌಡರಂತಹವರ ಕಡೆಗಿದೆ ಎಂಬುದೇ ಹೆಚ್ಚು ವಾಸ್ತವವಾದುದು,'' ಎಂಬ ಎಚ್. ಎಸ್. ಉಮೇಶ್ (ಹಿನ್ನುಡಿ. ಅಂತೆಂಬರ ಗಂಡ – ಪು. ೧೯೯) ಅವರ ನುಡಿಗಳು ಪ್ರಸ್ತುತವೆನಿಸುತ್ತವೆ.

ಹೀಗೆ ಈ ನಾಟಕದಲ್ಲಿ ಬರುವ ವ್ಯಕ್ತಿಗಳು (೧,೨,೩...) ಚೆನ್ನ, ರಂಗರಂಥ ಪಾತ್ರಗಳು, ತುಂಗರಾಯ, ಮಲ್ಲ, ಸತ್ಯ, ಬಸವಮಲ್ಲ, ಮುಂತಾದವರು, ದೊಡ್ಡಿ, ಕುರುವಿಯನ್, ಶೆಂದಲೈ ಮಲ್ಲ, ಶಾಸ್ತ್ರಿ ಮೊದಲಾದವರು, ನರಸನ ವಿನಯ, ನಯವಂಚನೆಗೆ ಬಲಿಯಾದ ಮನ್ನುಗೌಡ ಹೆಂಗೂ ಅವನ ಅನುಯಾಯಿಗಳು, ನರಸನ ದರ್ಪ, ಅಹಂಕಾರ ಹಾಗೂ ಕ್ರೌರ್ಯಕ್ಕೆ ಬಲಿಯಾಗುವ ನಿರೀಶ ಮೊದಲಾದ ಪಾತ್ರಗಳೂ ಸಹ ನಾಟಕದ ವಿಶ್ಲೇಷಣೆಗೆ ಪ್ರಮುಖ ಪಾತ್ರಗಳೇ ಆಗುತ್ತವೆ.

ಭಿನ್ನ ಕಾಲವನ್ನು ಒಂದು ಚೌಕಟ್ಟಿನೊಳಗೆ ನಿರೂಪಿಸುವಾಗ ಸಹಜವಾಗೇ ಸಂದಿಗ್ಧತೆಗೊಳಗಾಗಬೇಕಾಗುತ್ತದೆ. ಅದನ್ನು ಸ್ಪಷ್ಟಪಡಿಸಲು ನಾಟಕಕಾರ ಗಂಡಭೇರುಂಡ, ಕೆಲವು ಪಾತ್ರಗಳ ಸ್ವಗತ, ವರ್ತಮಾನದ ವ್ಯಕ್ತಿಗಳು ಕೇಳುವ ಪ್ರಶ್ನೆಗಳಿಗೆ ಉತ್ತರಿಸುವ ಕ್ರಮ, ಆಗಾಗ ಬರುವ ಹಾಡುಗಳು ಮುಂತಾದ ತಂತ್ರವನ್ನು ಬಳಸಿಕೊಂಡಿದ್ದಾರೆ. 'ವಿಗಡ ವಿಕ್ರಮರಾಯ'ರ ಭಾಷೆ ನವೋದಯ ಪೂರ್ವದ ಆಡುಭಾಷೆಯಲ್ಲಿದೆ; 'ಅಂತೆಂಬರ ಗಂಡ' ನಾಟಕದ ಭಾಷೆ ಸರಳವಾಗಿದ್ದು, ದೊಡ್ಡಿ-ರಣಧೀರರ ಸಂಭಾಷಣೆಯ ಸಂದರ್ಭದಲ್ಲಿ ರೊಮ್ಯಾಂಟಿಕ್ ಶೈಲಿ ಬಳಸಿರುವುದನ್ನು ಕಾಣಬಹುದು; ಹಾಗೆ ನೋಡಿದರೆ ತೀರಾ ಪಾರದರ್ಶಕ ಮತ್ತು ವಾಚ್ಯವೆಂದೂ ಹೇಳಬಹುದು.

ಎನ್. ಗೀತಾ
ಹಿ.ಶ್ರೇ. ಕನ್ನಡ ಉಪನ್ಯಾಸಕಿ, ಸರ್. ಎಂ. ವಿ. ಸ. ಕಲಾ ಮತ್ತು
ವಾಣಿಜ್ಯ ಕಾಲೇಜು, ಭದ್ರಾವತಿ - ೫೭೭ ೩೦೩




೧೯.೧೦.೨೦೦೩ರಂದು ಬೆಂಗಳೂರಿನಲ್ಲಿ ನಯನ ಸಭಾಂಗಣದಲ್ಲಿ ನಡೆದ ಸಮಾರಂಭದಲ್ಲಿ 'ಹೊಸತು' ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಅವರು ರಚಿಸಿರುವ 'ಯೋಗಪ್ರವೇಶ' ಕೃತಿ ಬಿಡುಗಡೆ ಸಮಾರಂಭ ನಡೆಯಿತು. ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರು ಕೃತಿ ಬಿಡುಗಡೆ ಮಾಡಿದರು.

ಚಿತ್ರದಲ್ಲಿ ಎಡದಿಂದ ಬಲಕ್ಕೆ: ಪ್ರೊ|| ಡಿ. ಕೆ. ಶ್ಯಾಮಸುಂದರರಾವ್ (ಕೃತಿ ಪರಿಚಯ), ಡಾ|| ಜಿ. ರಾಮಕೃಷ್ಣ, ಸ್ವಾಮೀಜಿ, ಡಾ|| ಜಿ. ಆರ್. ಅಭಿನಂದನಾ ಸಮಿತಿಯ ಅಧ್ಯಕ್ಷರಾದ ಡಾ|| ಕೆ. ಜಿ. ಶ್ರೀನಿವಾಸಮೂರ್ತಿ ಮತ್ತು ನವಕರ್ನಾಟಕ ಪ್ರಕಾಶನದ ಶ್ರೀ ಆರ್. ಎಸ್. ರಾಜಾರಾಮ್.

# ಏಕೀಕರಣಪೂರ್ವ ಕರ್ನಾಟಕದಲ್ಲಿ ನಗರ ವ್ಯವಸ್ಥೆ

## ನಗರೀಕರಣದ ವಿವಿಧ ಹಂತಗಳು ಹಾಗೂ ನಗರ ಕೇಂದ್ರಗಳ ಸ್ಥಿತ್ಯಂತರ

ನಗರ ಕೇಂದ್ರಗಳು ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ಅಸ್ತಿತ್ವಕ್ಕೆ ಬಂದ ಬಗೆ, ಅವುಗಳು ನಿರ್ವಹಿಸುತ್ತಿದ್ದ ಕೆಲಸಕಾರ್ಯಗಳು, ನಗರ ಕೇಂದ್ರಗಳ ಅವನತಿ, ಹೊಸ ನಗರಗಳ ನಿರ್ಮಾಣ ಮುಂತಾದುವು ನಗರ ಚರಿತ್ರೆ ಅಧ್ಯಯನದಲ್ಲಿ ಬಹುಮುಖ್ಯವಾದ ವಿಚಾರಗಳು. ಕರ್ನಾಟಕದ ಚರಿತ್ರೆ ಅಧ್ಯಯನ ನಡೆಸುವಾಗ ವಿವಿಧ ಸ್ವರೂಪದ ನಗರ ಕೇಂದ್ರಗಳು ಅಸ್ತಿತ್ವದಲ್ಲಿದ್ದದ್ದು ಕಂಡುಬರುತ್ತದೆ. ಅವುಗಳಲ್ಲಿ ಮುಖ್ಯವಾದುವು ಆಡಳಿತಾತ್ಮಕ ಅಥವಾ ರಾಜಧಾನಿ ಪಟ್ಟಣಗಳು, ಧಾರ್ಮಿಕ ಪಟ್ಟಣಗಳು ಮತ್ತು ವ್ಯಾಪಾರ-ವಾಣಿಜ್ಯ ಕೇಂದ್ರಿತ ಪಟ್ಟಣಗಳು. ಇವೆಲ್ಲವೂ ಆಯಾ ಚಾರಿತ್ರಿಕ ಸಂದರ್ಭಕ್ಕನುಗುಣವಾಗಿ ತಮ್ಮ ಸ್ವರೂಪದಲ್ಲಿ ಬದಲಾವಣೆಗಳನ್ನು ಹಾಗೂ ಹಲವಾರು ರೀತಿಯ ಏರಿಳಿತಗಳನ್ನು ಕಂಡಂತವು. ರಾಜಧಾನಿ ಪಟ್ಟಣಗಳು ಕಂಡಷ್ಟು ಏರಿಳಿತಗಳನ್ನು ಇತರ ಸ್ವರೂಪದ ನಗರ ಕೇಂದ್ರಗಳು ಕಂಡಿಲ್ಲ. ರಾಜಧಾನಿ ಪಟ್ಟಣಗಳ ಅಳಿವು-ಉಳಿವು ಆಯಾ ಅರಸು ಮನೆತನದ ಅಳಿವು-ಉಳಿವನ್ನು ಅವಲಂಬಿಸಿಕೊಂಡಿರುತ್ತಿತ್ತು. ಅರಸು ಮನೆತನಗಳ ಅವನತಿಯ ಬಳಿಕ ಅವುಗಳ ರಾಜಕೀಯ ಕೇಂದ್ರಗಳಾಗಿದ್ದ ಪ್ರದೇಶಗಳು ರಾಜಧಾನಿ ಪಟ್ಟವನ್ನು ಕಳೆದುಕೊಂಡು ಧಾರ್ಮಿಕ ಕೇಂದ್ರಗಳಾಗಿ ಇಲ್ಲವೇ ಹಲವಾರು ಸ್ಮಾರಕಗಳಿರುವ ಒಂದು ಪ್ರದೇಶವಾಗಿ ಮಾರ್ಪಟ್ಟವು. ಕೆಲವು ರಾಜಧಾನಿ ಪಟ್ಟಣಗಳು ಸಂಪೂರ್ಣವಾಗಿ ಅವನತಿಯನ್ನು ಹೊಂದಿದರೆ, ಇನ್ನು ಕೆಲವು ಸಾಮಂತ ಅರಸರ ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿ ಗುರುತಿಸಿಕೊಂಡುವು.

**ಭಾರತದ ಪ್ರಥಮ ನಗರೀಕರಣಕ್ಕೆ ಸಂಬಂಧಿಸಿದಂತೆ ಇರುವ ಮುಖ್ಯ ಪ್ರಶ್ನೆಯೆಂದರೆ ಅದರ ಪ್ರಭಾವ ಭಾರತದಾದ್ಯಂತ ಇತ್ತೇ ಎನ್ನುವುದು. ಭಾರತ ಕಂಡ ಪ್ರಥಮ ನಗರೀಕರಣದಲ್ಲಿ ಕರ್ನಾಟಕ ಒಳಗೊಂಡಿರಲಿಲ್ಲ ಎನ್ನುವುದು ಇಲ್ಲಿ ಪ್ರಮುಖವೆನಿಸುತ್ತದೆ. ಸಿಂಧೂ ನಾಗರಿಕತೆಯ ಯಾವ ಪ್ರಭಾವವೂ ಕರ್ನಾಟಕದ ನಗರೀಕರಣ ಪ್ರಕ್ರಿಯೆಯಲ್ಲಿ ಕಂಡುಬರುವುದಿಲ್ಲ. ಹೀಗಾಗಿ ಪ್ರಥಮ ನಗರೀಕರಣದ ವ್ಯಾಪ್ತಿ ಉತ್ತರ ಭಾರತಕ್ಕಷ್ಟೇ ಸೀಮಿತಗೊಂಡಿತ್ತು. ಕರ್ನಾಟಕವು ಭಾರತದ ಅವಿಭಾಜ್ಯ ಅಂಗ ಎಂದ ಮಾತ್ರಕ್ಕೆ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಏಕರೂಪದ್ದು ಎಂದಲ್ಲ. ಅದು ಆಯಾ ಪ್ರದೇಶ ಮತ್ತು ಸಂದರ್ಭಗಳಿಗೆ ಅನುಗುಣವಾಗಿ ಇರುವಂಥದ್ದು.**

ಅರಮನೆ ಕೇಂದ್ರಿತ ಪಟ್ಟಣಗಳಿಗಿಂತ ವ್ಯಾಪಾರ ಕೇಂದ್ರಿತ ಪಟ್ಟಣಗಳು ಭಿನ್ನವಾಗಿ ಕಂಡುಬರುತ್ತವೆ. ಬಂದರು ಪಟ್ಟಣಗಳು ಪ್ರಾಚೀನ ಸಂದರ್ಭದಿಂದ ಬ್ರಿಟಿಷರ ಆಳ್ವಿಕೆಯವರೆಗೆ ಹಾಗೂ ಅಲ್ಲಿಂದ ನಂತರವೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ವ್ಯಾಪಾರದ ಹಿನ್ನೆಲೆಯಿಂದ ಮಾತ್ರ. ಬಂದರು ಪಟ್ಟಣಗಳಲ್ಲಿ ಮಹತ್ವದ ಪಾತ್ರವನ್ನು ವಹಿಸುವವರು ವರ್ತಕರು. ಕರ್ನಾಟಕ ಕರಾವಳಿಯ ಬಹುತೇಕ ಎಲ್ಲ ಬಂದರು ಪಟ್ಟಣಗಳಲ್ಲಿಯೂ ವಿವಿಧ ಪ್ರದೇಶ-ಜಾತಿ-ಧರ್ಮಗಳಿಗೆ ಸಂಬಂಧಿಸಿದ ವರ್ತಕರು ವಾಸವಾಗಿದ್ದರು. ಉದಾಹರಣೆಗೆ, ಕರ್ನಾಟಕ ಕರಾವಳಿಯ ಪ್ರಮುಖ ಬಂದರು ಪಟ್ಟಣವಾದ ಮಂಗಳೂರಿನಲ್ಲಿ ಅರೇಬಿಯನ್ನರು, ಪರ್ಷಿಯನ್ನರು, ಸ್ಥಳೀಯ ಮುಸ್ಲಿಮರು, ಕ್ರಿಶ್ಚಿಯನ್ನರು, ಕೊಂಕಣಿಗಳು, ಗುಜರಾತಿಗಳು, ಮಲಯಾಳಿಗಳು ಮುಂತಾದವರು ವಾಸವಾಗಿದ್ದರು. ಈ ವರ್ತಕ ಸಮುದಾಯಗಳು ಪಟ್ಟಣ ವ್ಯಾಪ್ತಿಯ ವಿವಿಧ ಪ್ರದೇಶಗಳಲ್ಲಿ ವಾಸಮಾಡುತ್ತಿದ್ದರು ಹಾಗೂ ಆ ಮೂಲಕ ನಗರೀಕರಣ ಪ್ರಕ್ರಿಯೆ ಚುರುಕುಗೊಳ್ಳುವಂತೆ ಮಾಡಿದರು. ಪ್ರತಿಯೊಂದು ಜಾತಿ/ಧರ್ಮವೂ ತನ್ನದೇ ಆದ ಪ್ರತ್ಯೇಕ ಸ್ಥಳವನ್ನು ಆಯ್ಕೆಮಾಡಿಕೊಂಡು ಅಲ್ಲಿ ವಸತಿ ಕಟ್ಟಡಗಳು, ಧಾರ್ಮಿಕ ಕಟ್ಟಡಗಳು ಹಾಗೂ ವ್ಯಾಪಾರಕ್ಕೆ ಸಂಬಂಧಿಸಿದ ಕಟ್ಟಡಗಳನ್ನು ನಿರ್ಮಿಸುತ್ತಿದ್ದುವು. ಈ ಪ್ರಕ್ರಿಯೆ ಬಂದರು ಪಟ್ಟಣಗಳ ವ್ಯವಸ್ಥಿತ ಬೆಳವಣಿಗೆಗೆ ಹಾಗೂ ವರ್ತಕ ಸಮುದಾಯಗಳ ಆರ್ಥಿಕಾಭಿವೃದ್ಧಿಗೆ ಪೂರಕವಾಯಿತು. ವ್ಯಾಪಾರ ಕೇಂದ್ರಗಳು ಹಲವಾರು ಸಂದರ್ಭಗಳಲ್ಲಿ ಸಂಕಷ್ಟಕ್ಕೀಡಾಗುತ್ತಿದ್ದುದೂ ಉಂಟು. ಇದಕ್ಕೆ ಮೂಲ ಕಾರಣ ಆಂತರಿಕ ಮತ್ತು ಬಾಹ್ಯ ಶಕ್ತಿಗಳ ವ್ಯಾಪಾರದಲ್ಲಿ ಏಕಸ್ವಾಮ್ಯವನ್ನು ಹೊಂದುವ ಧೋರಣೆಗಳು.

ಮೋಹನಕೃಷ್ಣ ರೈ ಕೆ.

ದೇವಾಲಯಗಳು, ಬಸದಿಗಳು, ಚರ್ಚ್‌ಗಳು ಮತ್ತು ಮಸೀದಿಗಳು ಇರುವ ಹಾಗೂ ಧಾರ್ಮಿಕ ಚಟುವಟಿಕೆಗಳು ಪ್ರಧಾನವಾಗಿರುವ ಪಟ್ಟಣಗಳು ಧಾರ್ಮಿಕ ಹಿನ್ನೆಲೆಯಿಂದ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡುವು. ಧಾರ್ಮಿಕ ಕ್ಷೇತ್ರದಲ್ಲಾಗುತ್ತಿದ್ದ ಪಲ್ಲಟಗಳು ಮತ್ತು ರಾಜಕೀಯ ಬದಲಾವಣೆಗಳು ಈ ಸ್ವರೂಪದ ಪಟ್ಟಣಗಳನ್ನು ಅನೇಕ ರೀತಿಯ ಸ್ಥಿತ್ಯಂತರಗಳಿಗೆ ಒಳಪಡಿಸುತ್ತಿದ್ದುವು. ನಗರ ಕೇಂದ್ರಗಳಲ್ಲಿ ಒಂದು ಪ್ರಧಾನ ಚಟುವಟಿಕೆಯಿದ್ದರೆ, ಇನ್ನು ಹತ್ತು ಹಲವು ಬಗೆಯ ಚಟುವಟಿಕೆಗಳು ಇರುತ್ತಿದ್ದುವು. ಉದಾಹರಣೆಗೆ, ಹಂಪಿಯು ರಾಜಧಾನಿ ಪಟ್ಟಣವಾಗಿದ್ದರೂ, ಧಾರ್ಮಿಕ, ಶೈಕ್ಷಣಿಕ ಹಾಗೂ ವ್ಯಾಪಾರ ಚಟುವಟಿಕೆಗಳೂ ಅಲ್ಲಿ ನಡೆಯುತ್ತಿದ್ದುವು. ಒಂದು ಸಂದರ್ಭದಲ್ಲಿ ಪ್ರಧಾನವಾಗಿದ್ದ ಚಟುವಟಿಕೆ ಇನ್ನೊಂದು ಸಂದರ್ಭದಲ್ಲಿ ಅಧೀನವಾಗುವ, ಅದೇ ರೀತಿ ಅಧೀನವಾಗಿದ್ದದ್ದು ಪ್ರಧಾನವಾಗುವ ಪ್ರಕ್ರಿಯೆಗಳು ನಿರಂತರ ನಡೆಯುತ್ತಿದ್ದುವು. ನಗರ ಕೇಂದ್ರಗಳು ಆಯಾ ಸಂದರ್ಭದ ರಾಜಕೀಯ ಬದಲಾವಣೆಗಳು, ಆರ್ಥಿಕ ರೂಪಾಂತರಗಳು ಮತ್ತು ಧಾರ್ಮಿಕ ಪಲ್ಲಟಗಳ ನೇರ ಪ್ರಭಾವಕ್ಕೆ ಒಳಗಾಗುತ್ತಿದ್ದುವು. ನಗರ ಕೇಂದ್ರಗಳ ಹುಟ್ಟು, ಅಭಿವೃದ್ಧಿ ಹಾಗೂ ಅವನತಿ ಈ ಅಂಶಗಳಿಂದಲೇ ನಿರ್ಧರಿಸಲ್ಪಡುತ್ತಿತ್ತು.

ನಗರ ವ್ಯವಸ್ಥೆಯ ಕುರಿತು ಅಧ್ಯಯನ ನಡೆಸುವಾಗ ನಗರೀಕರಣದ ವಿವಿಧ ಹಂತಗಳು ಕಂಡುಬರುತ್ತವೆ. ಪ್ರಾಚೀನ ಕಾಲದಿಂದ ಆಧುನಿಕ ಸಂದರ್ಭದವರೆಗೆ ನಗರ ವ್ಯವಸ್ಥೆ ಏಕರೂಪದ್ದಾಗಿ ರೂಪುಗೊಂಡಿದ್ದಲ್ಲ. ಕೃಷಿ ಪ್ರಧಾನವಾದ ಭಾರತದಲ್ಲಿ ಪೇಟೆ-ಪಟ್ಟಣಗಳು ಕಾಣಿಸಿಕೊಂಡಿದ್ದೇ ಕೃಷಿಯು ಪ್ರಧಾನ ಚಟುವಟಿಕೆಯಾಗಿ ರೂಪುಗೊಂಡ ಮೇಲೆ ಹಾಗೂ ಕೃಷಿ ಕ್ಷೇತ್ರದಲ್ಲಿ ಹೆಚ್ಚುವರಿ ಉತ್ಪಾದನೆ ಕಾಣಿಸಿಕೊಂಡ ಮೇಲೆ. ಭಾರತದ ನಗರ ವ್ಯವಸ್ಥೆಯ ಕುರಿತಂತೆ ನಗರ ಚರಿತ್ರೆಕಾರರು ನಗರೀಕರಣದ ವಿವಿಧ ಹಂತಗಳನ್ನು ಗುರುತಿಸಿದ್ದಾರೆ. ಉತ್ತರ ಭಾರತ ಕೇಂದ್ರಿತ ಅಧ್ಯಯನಗಳ ಸಂಖ್ಯೆಯೇ ಹೆಚ್ಚಿನದು, ದಕ್ಷಿಣ ಭಾರತ, ಅದರಲ್ಲೂ ಕರ್ನಾಟಕ, ಅಡಿಟಿಪ್ಪಣಿಗಳಿಗಷ್ಟೇ ಸೀಮಿತಗೊಂಡಿತು. ಆದರೆ ಕರ್ನಾಟಕದಲ್ಲಿ ಮೌರ್ಯ ಯುಗದಿಂದಲೇ ಪೇಟೆ-ಪಟ್ಟಣಗಳ ಕುರಿತು ಮಾಹಿತಿ ಸಿಗುತ್ತದೆ. ಭಾರತದ ಸಂದರ್ಭದಲ್ಲಿ ಸಿಂಧೂ ನದಿ ನಾಗರಿಕತೆಯ ಅವಧಿಯನ್ನು ಪ್ರಥಮ ನಗರೀಕರಣ ಎಂಬುದಾಗಿ ಕರೆಯಲಾಗಿದೆ. ಸಿಂಧೂ ನದಿ ನಾಗರಿಕತೆ ಕೃಷಿ ಕೇಂದ್ರಿತವೇ ಅಥವಾ ನಗರ ಕೇಂದ್ರಿತವೇ ಎನ್ನುವುದು ವಿದ್ವಾಂಸರ ವಲಯದಲ್ಲಿ ಇನ್ನೂ ಚರ್ಚೆಯಲ್ಲಿರುವ ವಿಚಾರ. ಸಿಂಧೂ ನದಿ ನಾಗರಿಕತೆಯ ಸಂದರ್ಭದಲ್ಲಿ ನಗರಗಳಿದ್ದುವು ಎನ್ನುವ ಅಂಶ ಉತ್ಖನನಗಳಿಂದ ಸಾಬೀತಾಗಿದೆ. ಸಿಂಧೂ ಸಂಸ್ಕೃತಿಯ ಸಂದರ್ಭದ ಪ್ರಮುಖ ಆರು ನಗರಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ, ಹರಪ್ಪಾ, ಮೊಹೆಂಜೊದಾರೋ, ಚನ್ಹುದಾರೋ, ಲೋಥಾಲ್, ಕಾಲಿಬಂಗನ್ ಮತ್ತು ಬನವಾಲಿ.

ಭಾರತದ ಪ್ರಥಮ ನಗರೀಕರಣಕ್ಕೆ ಸಂಬಂಧಿಸಿದಂತೆ ಇರುವ ಮುಖ್ಯ ಪ್ರಶ್ನೆಯೆಂದರೆ ಅದರ ಪ್ರಭಾವ ಭಾರತದಾದ್ಯಂತ ಇತ್ತೇ ಎನ್ನುವುದು. ಭಾರತ ಕಂಡ ಪ್ರಥಮ ನಗರೀಕರಣದಲ್ಲಿ ಕರ್ನಾಟಕ ಒಳಗೊಂಡಿರಲಿಲ್ಲ ಎನ್ನುವುದು ಇಲ್ಲಿ ಪ್ರಮುಖವೆನಿಸುತ್ತದೆ. ಸಿಂಧೂ ನಾಗರಿಕತೆಯ ಯಾವ ಪ್ರಭಾವವೂ ಕರ್ನಾಟಕದ ನಗರೀಕರಣ ಪ್ರಕ್ರಿಯೆಯಲ್ಲಿ ಕಂಡುಬರುವುದಿಲ್ಲ. ಹೀಗಾಗಿ ಪ್ರಥಮ ನಗರೀಕರಣದ ವ್ಯಾಪ್ತಿ ಉತ್ತರ ಭಾರತಕ್ಕಷ್ಟೇ ಸೀಮಿತಗೊಂಡಿತ್ತು. ಕರ್ನಾಟಕವು ಭಾರತದ ಅವಿಭಾಜ್ಯ ಅಂಗ ಎಂದ ಮಾತ್ರಕ್ಕೆ




# ಆತ್ಮ ಪರಮಾತ್ಮ

ಮನುಷ್ಯ ಯೋಚಿಸಲು ತೊಡಗಿದಂದಿನಿಂದಲೂ ದೇವರು, ಆತ್ಮ, ಇತ್ಯಾದಿಗಳನ್ನು ಕುರಿತು ಚಿಂತಿಸುತ್ತಲೇ ಬಂದಿದ್ದಾನೆ. ಆತ್ಮದ ಕಲ್ಪನೆಯನ್ನು ಆಧರಿಸಿ ಮೋಕ್ಷ, ಸ್ವರ್ಗ-ನರಕಗಳ ಕಲ್ಪನೆಗಳೂ ಹುಟ್ಟಿಬಂದಿವೆ. ಹಲವು ಆಧುನಿಕ ವಿಜ್ಞಾನಿಗಳೇ ಪೂರ್ವಜನ್ಮ ರಾಹುಕಾಲ ಕುರಿತು ವಿಚಿತ್ರ ನಂಬಿಕೆ ಹೊಂದಿರುತ್ತಾರೆ. ಆದರೆ ಪ್ರತ್ಯಕ್ಷವಾಗಿ ದೃಢಪಡಿಸಲಾರರು. ಲೌಕಿಕ ಜಗತ್ತಿನ ಅವಶ್ಯಕತೆಗಳಾದ ಹಸು, ಪಕ್ಷಿ, ಪ್ರಾಣಿಗಳು, ಧನ, ಧಾನ್ಯಗಳು ನಮ್ಮ ಸುತ್ತ ಕೈಗೆಟಕುವಂತಿವೆ. ಆದರೆ ಪಾರಮಾರ್ಥ ಜಗತ್ತಿನ ಈ ಆತ್ಮ ಪರಮಾತ್ಮಗಳು ಎಲ್ಲಿವೆ ? ಮನುಷ್ಯ ಅಥವಾ ಯಾವುದೇ ಜೀವಿ ಈ ಭೂಮಿಯ ಮೇಲೆ ಬದುಕಿರುವ ತನಕ ಚಲನಶೀಲವಾಗಿ ಕ್ರಿಯಾಶೀಲವಾಗಿರುತ್ತದೆ. ಮರಣ ಹೊಂದಿದ ಕ್ಷಣದಿಂದ ಜಡವಾಗುತ್ತದೆ. ರೂಪಾಂತರಗೊಂಡು ಪ್ರಕೃತಿಯಲ್ಲಿ ಒಂದಾಗುತ್ತದೆ. ಬದುಕಿರುವವರೆಗೆ ಕ್ರಿಯಾಶೀಲವಾಗಿದ್ದ ಚೈತನ್ಯ ಮರಣದ ನಂತರ ಎಲ್ಲಿ ಹೋಯಿತು ? ಅದು ಈ ವಿಶ್ವದಲ್ಲಿಯೇ ಲೀನವಾಗಿರುವ ಸತ್ಯ ನಮ್ಮ ಮುಂದಿದೆ. ಯೋಗದ ಪರಮಾವಧಿಯನ್ನು ಬೋಧಿಸಿದ ಜೈನ ದಾರ್ಶನಿಕರೂ ಕೇವಲ ಬದುಕುವುದಕ್ಕಾಗಿಯಾದರೂ ಆಹಾರ, ನೀರು ಸ್ವೀಕರಿಸಲೇಬೇಕಾಗಿತ್ತು. ಎಲ್ಲ ಜೀವಿಗಳಿಗೂ ಚೈತನ್ಯ ಒದಗಿಬರುವುದು ಆಹಾರದಿಂದಲೇ. ಆಹಾರಕ್ಕೆ ಮೂಲ ಈ ಭೂಮಿ. ಮರಣಹೊಂದಿದ ದೇಹವು ಜಡವಾಗಿ ಪ್ರಕೃತಿಯೊಂದಿಗೆ ಲೀನವಾಗುತ್ತದೆ. ಹಾಗಾದರೆ ನಮ್ಮ ಕಲ್ಪನೆಯ ಆತ್ಮ ಎಲ್ಲಿ ಹೋಯಿತು ?

ಮರಣದಿಂದ ಮುಂದೇನು ? ಭೂತವೋ, ಪ್ರೇತವೋ, ಪರಲೋಕವೋ, ಪುನರ್ಜನ್ಮವೋ, ಅದೇನೋ ತಿರುಗಿ ಬಂದವರಿಲ್ಲ, ವರದಿ ತಂದವರಿಲ್ಲ ಧರೆಯ ಬಾಳ್ಗಿದರಿನೇಂ ? ಮಂಕುತಿಮ್ಮ – ಎಂದಿದ್ದಾರೆ ಡಿ.ವಿ.ಜಿ. ನಮ್ಮ ಭವಿಷ್ಯ ನಿಂತಿರುವುದು ನಮ್ಮ ಈ ಕ್ಷಣದ ವರ್ತಮಾನದಲ್ಲೇ. ಆದ್ದರಿಂದ ನಾವು ಈ ಕ್ಷಣದಲ್ಲಿ ಕಾರ್ಯಪ್ರವೃತ್ತರಾಗಿ, ಜೀವನ ಸಾರ್ಥಕಪಡಿಸಿಕೊಳ್ಳಬೇಕು. ನಮ್ಮ ಸುಂದರ ಭವಿಷ್ಯ ಎಲ್ಲಿಯೋ ಸ್ವರ್ಗದಲ್ಲಿ ಇಲ್ಲ. ಅದು ಈಗ ಇಲ್ಲಿಯೇ ನಾವು ಮಾಡುವ ಕ್ರಿಯೆಯಲ್ಲಿದೆ. ಈ ಕ್ರಿಯೆ ಒಳ್ಳೆಯ ಫಲ ಕೊಡಬೇಕಾದರೆ, ನಮ್ಮ ಮನಸ್ಸು, ಶರೀರ ಹಾಗೂ ಮಾತುಗಳು ಪರಿಶುದ್ಧವಾಗಿರಬೇಕು.

ಜಗತ್ತಿನ ಎಲ್ಲ ದೇಶ, ಕಾಲಗಳಲ್ಲೂ, ಧರ್ಮ, ಸಂಸ್ಕೃತಿ ಪರಂಪರೆಗಳ ಸಂದರ್ಭಗಳಲ್ಲೂ ಒಂದಿಲ್ಲೊಂದು ವಿಧದ ಶೋಷಣೆ, ಸಮಾಜವನ್ನು ದುರ್ಬಲಗೊಳಿಸುವ ಹುನ್ನಾರ ನಡೆದಿರುತ್ತದೆ. ಸ್ತ್ರೀ ಶೋಷಣೆಯ ಅತ್ಯಂತ ಕರಾಳ, ಕ್ರೂರ ರೂಪಗಳು ಜನಜೀವನವನ್ನು ಅಸ್ತವ್ಯಸ್ತಗೊಳಿಸುತ್ತಲೇ ಇರುತ್ತವೆ. ಆಳುವ ವರ್ಗವೂ ಶೋಷಣೆಗೆ ಕಾರಣವಾಗಿರುವುದನ್ನು ಚರಿತ್ರೆಯಿಂದ ತಿಳಿಯಬಹುದು. ಕಾಲಕಾಲಕ್ಕೆ ಶೋಷಣೆ, ಕ್ರೌರ್ಯದ ವಿರುದ್ಧ ಬುದ್ಧ, ಬಸವ, ಮಹಾವೀರ ಮೊದಲಾಗಿ ಅನೇಕ ಮಹಾನುಭಾವರು ಸುಧಾರಣೆ ತರಲು ತಮ್ಮ ಚಿಂತನೆಗಳ ಮೂಲಕ ಯತ್ನಿಸಿದ್ದಾರೆ. ಜಗತ್ತೇ ಬೆರಗುಗೊಳ್ಳುವಂತಹ ತತ್ವವನ್ನು ಬೋಧಿಸಿದ ಸನಾತನ ವೈದಿಕ ಧರ್ಮ, ಆಚರಣೆಯಲ್ಲಿ ಭೇದಭಾವಗಳನ್ನು ಬಿತ್ತಿ ಸಮಾಜವನ್ನು ತುಂಡು ಮಾಡುವುದರಲ್ಲಿ ಮುಂದಾದದ್ದು ವಿಪರ್ಯಾಸ.

ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಜಾತಿ, ವರ್ಗ, ವರ್ಣವ್ಯವಸ್ಥೆಗಳು ಇಂದಿಗೂ ಪ್ರಮುಖವಾಗಿರುವುದು ನಮ್ಮ ಕಾಲಘಟ್ಟದ ಒಂದು ವಿಪರ್ಯಾಸ. ಪ್ರಾಚೀನ ಕಾಲದಿಂದಲೂ ಮನುಷ್ಯರಲ್ಲಿನ ಮೇಲು ಕೀಳು ವರ್ಗ ಸಂಘರ್ಷಗಳ ವಿರುದ್ಧ ಹಲವಾರು ಸಂತರು, ಶರಣರು, ದಾರ್ಶನಿಕರು ಪರಿವರ್ತನೆಗಾಗಿ ಪ್ರಯತ್ನಿಸಿದ್ದಾರೆ. ಭಾರತ ಒಂದು ದೇಶ, ನಾವೆಲ್ಲರೂ ಒಂದು ಎಂಬ ರಾಷ್ಟ್ರೀಯ ಪ್ರಜ್ಞೆಯನ್ನು ಬಿತ್ತುವ ಕಾರ್ಯ ಯಶಸ್ವಿಯಾಗಿಲ್ಲ. ಶತಶತಮಾನಗಳಿಂದ ಶೋಷಣೆಗೆ ಗುರಿಯಾಗಿರುವ ಜನರಿಗೆ ಅವಕಾಶ ಕಲ್ಪಿಸುವುದಕ್ಕಾಗಿ ಸ್ವಾತಂತ್ರ್ಯಾನಂತರ ಹಲವಾರು ಕಾನೂನು ಗಳನ್ನು ಜಾರಿಗೊಳಿಸಲಾಗಿದೆ. ನಮ್ಮ ಸಂವಿಧಾನವೂ ಈ ದಿಸೆಯಲ್ಲಿ ಹಿಂದೆ ಬೀಳದೆ ಜಾತಿವಾರು ಮೀಸಲಾತಿಯನ್ನು ಒಪ್ಪಿಕೊಂಡಿದೆ. ಹಿಂದುಳಿದವರಿಗಾಗಿ ವಿಶೇಷ ಸವಲತ್ತು ಗಳನ್ನು ಘೋಷಿಸಿದೆ. ಆದರೂ ಸಂವಿಧಾನದ ಪ್ರಕಾರ ಎಲ್ಲರೂ ಸಮಾನರು ಎಂಬ ಮಾತು ಸ್ವಾತಂತ್ರ್ಯ ಪಡೆದು ೫೫ ವರ್ಷಗಳ ನಂತರವೂ ಕ್ಲೀಷೆಯಾಗಿ ಕಂಡುಬರುತ್ತಿದೆ. ಇದಕ್ಕೆ ಕಾರಣ ಏನು ? ಪರಿಹಾರ ಏನು ? ಮೀಸಲಾತಿಯ ಸವಲತ್ತುಗಳನ್ನು ಪಡೆದು ಆರ್ಥಿಕವಾಗಿ ಮೇಲೆ ಬಂದವರ ಮಕ್ಕಳು, ಮರಿಮಕ್ಕಳಿಗೂ ಮೀಸಲಾತಿ ಸೌಲಭ್ಯಗಳು ಮುಂದುವರಿಯಬೇಕೇ ? ಅಪಾರಸಂಖ್ಯೆಯಲ್ಲಿರುವ ಇನ್ನುಳಿದ ಹಿಂದುಳಿದವರು ಅವಕಾಶದಿಂದ ವಂಚಿತರಾಗಬೇಕೇ ಅಥವಾ ಮುಂದುವರಿದವರೆಂದು ವರ್ಗೀಕರಿಸಿರುವ ಜನಾಂಗದಲ್ಲಿರುವ ಬಡವರು, ಅವಕಾಶ ವಂಚಿತರು, ಎಲ್ಲಿಗೆ ಹೋಗಬೇಕು ?

ಈ ಎಲ್ಲ ವೈರುಧ್ಯಗಳಿಗೆ ನಮ್ಮ ವರ್ಗಭೇದ, ವರ್ಣಭೇದ ನೀತಿಗಳು, ಅಸ್ಪೃಶ್ಯತೆಯ ಅಮಾನವೀಯ ಆಚರಣೆಗಳು ಕಾರಣವಾಗಿವೆ. ಪ್ರಾಚೀನ ಧಾರ್ಮಿಕ ವ್ಯವಸ್ಥೆಯು ದೇಶದ ಎಲ್ಲ ಜನರನ್ನೂ ಸಮಾನವಾಗಿ ಕಾಣುತ್ತಾ ಬಂದಿದ್ದರೆ ನಾವು ಇಂದು ಇಂತಹ ಘಟನೆಗಳಿಗೆ ಸಾಕ್ಷಿಯಾಗಬೇಕಾಗಿರಲಿಲ್ಲ. ವರ್ಣಾಶ್ರಮ ವ್ಯವಸ್ಥೆಯಲ್ಲಿ ಮೇಲು ಕೀಳು, ತಾರತಮ್ಯ ನೀತಿ ಇದೆ. ಸಂವಿಧಾನದ ದೃಷ್ಟಿಯೇ ಬೇರೆ ವರ್ಣಾಶ್ರಮ ದೃಷ್ಟಿಯೇ ಬೇರೆ.

ಜ್ಞಾನ ಮತ್ತು ಧರ್ಮಗಳು ಜೊತೆ ಜೊತೆಯಾಗಿ ಸಾಗಬೇಕಾಗುತ್ತದೆ. ಮನುಷ್ಯನ ಅರಿವನ್ನು ಜಾಗೃತಗೊಳಿಸಲು ಧರ್ಮದ ಜೊತೆಗೆ ವೈಚಾರಿಕ ಚಿಂತನೆಗಳೂ ಪ್ರಮುಖವಾಗುತ್ತವೆ. ಧರ್ಮ ನಮ್ಮ ಸಂಶಯಗಳಿಗೆ ಉತ್ತರವನ್ನು ಕೊಡುವಂತಿರಬೇಕು. ಧರ್ಮಾಚರಣೆ ನಮ್ಮ ಜೀವನವನ್ನು ಹಸನುಗೊಳಿಸುವಂತಿರಬೇಕು. ಆದರೆ ಧರ್ಮಾಂಧತೆ ಇರಬಾರದು. ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಜಾತಿ ವ್ಯವಸ್ಥೆ, ವರ್ಗ, ವರ್ಣಭೇದಗಳು ಜನರ ಮನಸ್ಸನ್ನು ಒಡೆಯುತ್ತಿವೆ. ಇರುವುದೊಂದೇ ಭೂಮಿ, ಕುಡಿವುದೊಂದೇ ನೀರು, ಸುಡುವುದೊಂದೇ ಅಗ್ನಿ ಇರುತಿರಲು ನಡುವೆ ಜಾತಿ ಎತ್ತಣದು ಎನ್ನುತ್ತಾನೆ ಸರ್ವಜ್ಞ ಮಹಾಕವಿ. ಯಾರು ಈ ಸುಂದರ ಸೃಷ್ಟಿಯ ಬಗ್ಗೆ ಯೋಚಿಸಿ ಪುಳಕಿತಗೊಳ್ಳಲಾರರೋ ಅವರು ಕುರುಡರೇ ಸರಿ. ಕಣ್ಣಿದ್ದೂ ಕುರುಡರಾಗಿರುವವರ ಕಣ್ತೆರೆಸುವುದು ಧರ್ಮದ ಕೆಲಸವಾಗಬೇಕು. ಈ ಪ್ರಪಂಚದಲ್ಲಿ ಹುಟ್ಟು ಸಾವು ಇಂದಿಗೂ ಅದ್ಭುತ ಆಶ್ಚರ್ಯ ರಹಸ್ಯಗಳಾಗಿಯೇ ಉಳಿದಿವೆ. ಇವೆರಡಕ್ಕಿಂತಲೂ ಆಶ್ಚರ್ಯದ ಸಂಗತಿ ಎಂದರೆ ಈ ಭೂಮಿಯ ಮೇಲೆ ಮನುಷ್ಯ, ಮನುಷ್ಯನಾಗಿ ಬದುಕುವುದು, ಮಾನಸಿಕ ಸಮತೋಲನವನ್ನು ಕಾಪಾಡಿಕೊಳ್ಳುವುದು.

ಜಯದೇವಪ್ಪ ಜೈನಕೇರಿ
೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧


ಡಾ|| ಕೆ. ಮರುಳಸಿದ್ದಪ್ಪ


ಪ್ರೊ|| ಬರಗೂರು ರಾಮಚಂದ್ರಪ್ಪ


ಡಾ|| ಪ್ರಧಾನ್ ಗುರುದತ್ತ

'ಹೊಸತು' ಸಮಾಲೋಚಕ ಮಂಡಲಿಯ ಸದಸ್ಯರಾದ ಡಾ|| ಕೆ. ಮರುಳಸಿದ್ದಪ್ಪ ಮತ್ತು ಪ್ರೊ|| ಬರಗೂರು ರಾಮಚಂದ್ರಪ್ಪ ಅವರಿಗೆ ಹಾಗೂ ನವಕರ್ನಾಟಕ ಪ್ರಕಾಶನದವರು ಪ್ರಕಟಿಸುತ್ತಿರುವ ''ನವಕರ್ನಾಟಕ ಸಾಹಿತ್ಯ ಸಂಪದ'' ಮಾಲೆಯ ಸಂಪಾದಕರಾದ ಡಾ|| ಪ್ರಧಾನ್ ಗುರುದತ್ತ ಅವರಿಗೆ ಈ ವರ್ಷದ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ಅವರಿಗೆ ಅಭಿನಂದನೆಗಳನ್ನು ಸಲ್ಲಿಸಲು 'ಹೊಸತು' ಹರ್ಷಿಸುತ್ತದೆ.

**HOSATHU** Kannada Monthly / December 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14

# ನಿಮ್ಮ ಅರಿವಿನ ವಿಸ್ತರಣೆಗಾಗಿ
# ನವಕರ್ನಾಟಕದ ಪದಕೋಶಗಳು




ರೂ. 160 ಪುಟ : 280




ರೂ. 150 ಪುಟ : 448



ರೂ. 500 ಪುಟ : 460




ರೂ. 200 ಪುಟ : 372




ರೂ. 100 ಪುಟ : 248




ರೂ. 140 ಪುಟ : 352

*ಸ್ಥಳೀಯ ಪುಸ್ತಕದಂಗಡಿಯಲ್ಲಿ ವಿಚಾರಿಸಿ ಇಲ್ಲವೇ ನಮಗೆ ಬರೆಯಿರಿ.*

ರಿಜಿಸ್ಟರ್ಡ್ ಬುಕ್ ಪೋಸ್ಟ್ ಮೂಲಕ ಪಡೆಯಲು ಪುಸ್ತಕದ ಬೆಲೆಯೊಂದಿಗೆ ರೂ. 25 ಸೇರಿಸಿ, ಎಂ. ಓ. ಅಥವಾ ಡಿ. ಡಿ.ಯನ್ನು ಈ ವಿಳಾಸಕ್ಕೆ ಕಳಿಸಿಕೊಡಿ



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : 5159, ಬೆಂಗಳೂರು - 560 001

✆ : 2203580/81/82 E-mail: nkp@bgl.vsnl.net.in Website : www.navakarnatakabooks.com

ಶಾಖೆಗಳು : ಬೆಂಗಳೂರು ✆ 2251382 ■ ಮಂಗಳೂರು ✆ 2441016 ■ ಮೈಸೂರು ✆ 424094 ■ ಗುಲ್ಬರ್ಗಾ ✆ 424302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna